# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ಎನ್. ಆರ್. ಹೆಗ್ಡೆ, ಶ್ರೀಹರಿ, ರಾಂಚಂದ್ರ ಕೊಪ್ಪಲು, ಕಮಲಂ ಅರಸು

ಮುಖಚಿತ್ರ : ೭೭ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷ ಪ್ರೊ|| ಜಿ. ವೆಂಕಟಸುಬ್ಬಯ್ಯ

ವರ್ಣಚಿತ್ರ : ಕೆ. ಪಿ. ಸ್ವಾಮಿ, ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಬಳ್ಳಾರಿ ಜಿಲ್ಲೆಯ ಕೊಟ್ಟೂರಿನಿಂದ ಈ ತಿಂಗಳು ಆಸಕ್ತಿದಾಯಕ ಸುದ್ದಿಯೊಂದು ಬಂದಿದೆ. ಕಟ್ಟಡ ಕಟ್ಟುವ ನಾಲ್ಕು ಜನ ಕಾರ್ಮಿಕರು ಈ ಸುದ್ದಿಯ ಕೇಂದ್ರಬಿಂದುಗಳು. ಅಲ್ಲಿನ ಸ್ಥಳವೊಂದರಲ್ಲಿ ಕಟ್ಟಡ ಕಟ್ಟಲು ಪಾಯ ತೆಗೆಯುವಾಗ ನೆಲದಡಿಯಲ್ಲಿ ಬಂಗಾರದ ನಾಣ್ಯಗಳು ಇವರಿಗೆ ಸಿಕ್ಕಿವೆ. ನಾಲ್ಕೂ ಜನ ಮಾತನಾಡಿಕೊಂಡು ಬಂಗಾರದ ನಾಣ್ಯಗಳನ್ನು ಹಂಚಿಕೊಂಡಿದ್ದಾರೆ. ಅವರಲ್ಲಿನ ಮೂರು ಜನ ತಮ್ಮ ಬಂಗಾರದ ನಾಣ್ಯಗಳನ್ನು ಹಾಗೇ ತೆಗೆದಿಟ್ಟುಕೊಂಡಿದ್ದಾರೆ. ಒಬ್ಬ ಮಾತ್ರ ತನ್ನ ಪಾಲಿಗೆ ಬಂದ ನಾಣ್ಯವನ್ನು ಮಾರಿ ಸುಮಾರು ಒಂದು ಲಕ್ಷದಷ್ಟು ಹಣ ತಂದಿದ್ದಾನೆ. ರಾತ್ರಿ ಅವನ ಕನಸಿನಲ್ಲಿ ಯಾರೋ ಶಿವಶರಣರು ಬಂದು ಪಾಯದಲ್ಲಿ ಸಿಕ್ಕ ಬಂಗಾರದ ನಾಣ್ಯದ ಕುರಿತು ಕೇಳಿದ್ದಾರೆ. ಹೆದರಿಹೋದ ಆ ಕೂಲಿಕಾರ್ಮಿಕ ಬಂಗಾರದ ನಾಣ್ಯ ಮಾರಿ ಬಂದ ಹಣವನ್ನು ಮುಟ್ಟದೆ, ಅಂದರೆ ಖರ್ಚು ಮಾಡದೆ ಹಾಗೇ ಇಟ್ಟಿದ್ದಾನೆ. ನಿಧಾನಕ್ಕೆ ಈ ಸುದ್ದಿ ಹರಡಿ ಪೊಲೀಸರಿಗೆ ತಲುಪಿದೆ. ಪೊಲೀಸರು ಬಂದು ವಿಚಾರಣೆ ನಡೆಸಿದಾಗ ಸತ್ಯವನ್ನು ಒಪ್ಪಿಕೊಂಡ ಈ ಕಾರ್ಮಿಕ ಬಂಗಾರದ ನಾಣ್ಯ ಮಾರಿ ಬಂದ ಎಲ್ಲ ಹಣವನ್ನೂ ಪೊಲೀಸರಿಗೆ ಕೊಟ್ಟಿದ್ದಾನೆ. ಹಾಗೇ ಪೊಲೀಸರು ಉಳಿದ ಮೂರು ಜನರ ಹತ್ತಿರವಿದ್ದ ಬಂಗಾರದ ನಾಣ್ಯಗಳನ್ನು ವಶಪಡಿಸಿಕೊಂಡಿದ್ದಾರೆ. ಒಬ್ಬ ಕಟ್ಟಡ ಕೆಲಸಮಾಡುವ ಕಾರ್ಮಿಕ ಭೂಮಿ ಅಗೆಯುವಾಗ ಸಿಕ್ಕ ಬಂಗಾರದ ನಾಣ್ಯವನ್ನು ಮಾರಿ ಬಂದ ಹಣವನ್ನು ಕನಸಿನಲ್ಲಿ ಯಾರೋ ಶಿವಶರಣರು ಬಂದು ಪ್ರಶ್ನೆ ಮಾಡಿದರೆಂಬ ಕಾರಣಕ್ಕೆ ಖರ್ಚು ಮಾಡದೆ ಹಾಗೇ ಇಟ್ಟುಕೊಂಡು ಪೊಲೀಸರಿಗೆ ಹಿಂತಿರುಗಿಸಿದ್ದಾನೆ. ಅವನ ಕನಸು ಆ ಸಂದರ್ಭದ ಅವನ ಮಾನಸಿಕ ಸ್ಥಿತಿಯನ್ನು ತೋರಿಸುತ್ತದೆ. ಕೂಲಿ ಮಾಡಿ ಬದುಕುವವನಿಗೆ ಸಿಕ್ಕ ಬಂಗಾರದ ನಾಣ್ಯ, ಅದನ್ನು ಯಾರಿಗೂ ಹೇಳದೆ ಮಾರಾಟಮಾಡಿದ್ದು, ಅದರಿಂದ ಬಂದ ಲಕ್ಷದಷ್ಟು ಹಣ ಸಹಜವಾಗಿಯೇ ಅವನಲ್ಲೊಂದು ಅಪರಾಧಿಪ್ರಜ್ಞೆಯನ್ನು ಹುಟ್ಟುಹಾಕಿದೆ. ಅದೇ ಕನವರಿಕೆ ಅವನ ಕನಸಿನಲ್ಲಿ ಶಿವಶರಣರ ರೂಪದಲ್ಲಿ ಕಾಣಿಸಿಕೊಂಡಿದೆ. ಕನಸು ಕಂಡನಂತರ ಕಾರ್ಮಿಕ ಆ ಹಣವನ್ನೇ ಮುಟ್ಟಲಿಲ್ಲ. ಇದು ಮೇಲ್ನೋಟಕ್ಕೆ ಸಾಮಾನ್ಯ ಘಟನೆ ಎನ್ನಿಸಿದರೂ ಇಂದಿನ ನಮ್ಮ ರಾಜಕಾರಣದ ಸಂದರ್ಭದಲ್ಲಿ ಮಹತ್ವ ಪಡೆಯುತ್ತದೆ. ಸಾಕ್ಷಾತ್ ಜೀವಂತ ಜಗದ್ಗುರುಗಳ ಆಶೀರ್ವಾದದಿಂದಲೇ ಮುಖ್ಯಮಂತ್ರಿಯಾದ ಯಡಿಯೂರಪ್ಪನವರು ಯಾವ ಪಾಪಪ್ರಜ್ಞೆಯೂ ಇಲ್ಲದೆ ಕೋಟ್ಯಂತರ ರೂಪಾಯಿಗಳ ಹಗರಣ ನಡೆಸುತ್ತಿರುವುದನ್ನು ನೋಡಿದರೆ ಸಾಮಾನ್ಯ ಕೂಲಿಕಾರ್ಮಿಕನಿಗಿರುವ ಅಪರಾಧಿ ಪ್ರಜ್ಞೆಯೂ ರಾಜ್ಯವನ್ನಾಳುವ ಈ ''ಮಹಾನುಭಾವ''ರಿಗೆ ಇಲ್ಲದಿರುವುದು ನಮ್ಮ ನಾಡಿನ ದುರಂತ. ಅಂದಹಾಗೆ ಕನಸಿನಲ್ಲಿ ಶಿವಶರಣರೋ ಅಥವಾ ರಾಘವೇಂದ್ರ ಸ್ವಾಮಿಗಳೋ ಮುಖ್ಯಮಂತ್ರಿಗಳ ಕನಸಿನಲ್ಲೂ ಬಂದು ಕಾಣಿಸಿಕೊಳ್ಳುವ ದಿನಕ್ಕಾಗಿ ಕಾದು ನೋಡೋಣ. ರಾಜ್ಯದ ನೆಲವನ್ನೇ ಬಗೆದು ಕಬ್ಬಿಣದ ಅದಿರು ಮಾರಾಟ ಮಾಡಿ ಅಕ್ರಮವಾಗಿ ಗಳಿಸಿದ ಹಣದಲ್ಲಿ ೪೦ ಕೋಟಿ ರೂಪಾಯಿಗಳ ವಜ್ರದ ಕಿರೀಟ ಮಾಡಿಸಿ ತಿರುಪತಿ ತಿಮ್ಮಪ್ಪನಿಗೆ ಕಾಣಿಕೆ ಕೊಡುವ ಗಣಿಗಳ ರೆಡ್ಡಿಗಳಿಗಿಂತ ಕನಸಿನಲ್ಲಿ ಶಿವಶರಣರು ಬಂದರೆಂದು ಭಾವಿಸಿ, ಹೆದರಿ ಲಕ್ಷ ರೂಪಾಯಿ ಹಿಂದಿರುಗಿಸಿದ ಆ ಕೂಲಿಕಾರ್ಮಿಕ ನಮಗೆ ಆದರ್ಶಪ್ರಾಯನಾಗಿ ಕಾಣಿಸುತ್ತಾನೆ

*  *  *

ಕರ್ನಾಟಕ ರಾಜ್ಯ ಸರಕಾರ ನಿಗಮ ಮಂಡಲಿಗಳಿಗೆ ಅಧ್ಯಕ್ಷರನ್ನು ನೇಮಕ ಮಾಡಿದೆ. ಈ ಕುರಿತು ಮುಖ್ಯಮಂತ್ರಿಗಳು ಆದೇಶ ಹೊರಡಿಸಿದ್ದಾರೆ. ರಾಜ್ಯ ಬಿಜೆಪಿಯ ನಾಯಕರ, ಕಾರ್ಯಕರ್ತರ ನಡುವೆ ಉಲ್ಬಣಗೊಂಡ ಅಸಮಾಧಾನ, ಆಪರೇಶನ್ ಕಮಲದ ಮೂಲಕ ಬೇರೆ ಪಕ್ಷಗಳಿಂದ ಬಂದ ರಾಜಕಾರಣಿಗಳನ್ನು ಸಮಾಧಾನಪಡಿಸಲು ರಾಜ್ಯದ ೨೯ ನಿಗಮ ಮಂಡಲಿಗಳಿಗೆ ಅಧ್ಯಕ್ಷರುಗಳನ್ನು ನೇಮಿಸಲಾಗಿದೆ. ಇದರಲ್ಲಿ ಹಟ್ಟಿ ಚಿನ್ನದ ಗಣಿ, ಉಗ್ರಾಣ ನಿಗಮ, ರಸ್ತೆ ಸಾರಿಗೆ ಸಂಸ್ಥೆ ಇಂಥ ಹಲವಾರು ನಿಗಮಗಳಿಗೆ ನೇಮಕ ಮಾಡಲಾಗಿದೆ. ಆದರೆ ಇದರಲ್ಲಿರುವ ಬಹುತೇಕ ನಿಗಮಗಳಿಗೂ ಅದರ ಅಧ್ಯಕ್ಷರಿಗೂ ಯಾವುದೇ ಸಂಬಂಧವಿಲ್ಲ. ಆ ಕ್ಷೇತ್ರದ ಕುರಿತು ಸಾಮಾನ್ಯ ಜ್ಞಾನ, ಕನಿಷ್ಠ ತಿಳುವಳಿಕೆ ಇಲ್ಲದವರನ್ನೆಲ್ಲ ಕೇವಲ ಪಕ್ಷದ ಮುಖಂಡರು, ಕಾರ್ಯಕರ್ತರು ಎಂಬ ಕಾರಣಕ್ಕೆ ನೇಮಕ ಮಾಡಲಾಗಿದೆ. ಇವೆಲ್ಲದರ ಹಿಂದೆ ಅವರೆಲ್ಲರೂ ಅತೃಪ್ತರು ಎಂಬ ಕಾರಣಕ್ಕೆ ಅವರಿಗೆ ದುಡ್ಡು ಮಾಡಲು ಸ್ಥಾನಮಾನ ಕಲ್ಪಿಸಿ ಸಮಾಧಾನ ಪಡಿಸಲಾಗುತ್ತಿದೆ. ಹೀಗೆ ಕ್ಷೇತ್ರದ, ನಿಗಮ ಮಂಡಲಿಗಳ ಕಾರ್ಯ, ಉದ್ದೇಶ, ಗುರಿ ಕುರಿತು ಜ್ಞಾನ, ಪರಿಣತಿ ಇಲ್ಲದವರು ಆ ಸ್ಥಾನಕ್ಕೆ ಬಂದಾಗ ಸಹಜವಾಗಿ ಹಣ ಮಾಡುವುದೇ ಅವರ ಉದ್ದೇಶವಾಗುತ್ತದೆ. ಆ ದಿಶೆಯಲ್ಲಿ ಸರಕಾರ ಈ ನಿಗಮ ಮಂಡಲಿಗಳಿಗೆ ಅಧ್ಯಕ್ಷರ

(೮ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆನ್ನೆಗಳೊಡನೆ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೫ ಡಿಸೆಂಬರ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com

# ಒಬಾಮ ಮೋಹಕ ಮಾತುಗಳು ! ವಿಫಲವಾದ ಆರ್ಥಿಕ ದಂಡಯಾತ್ರೆ !




ಒಬಾಮ 'ಯಾತ್ರೆ' (ಹೌದು, ಗಾಂಧಿ ನಾಡಿಗೆ ಅದು 'ಯಾತ್ರೆ' ಎಂದು ಅವರೇ ಹೇಳಿದ್ದು) ಭಾರತದಲ್ಲಿ ಪ್ರಾರಂಭಿಸಿ, ಗಾಂಧಿಯನ್ನು ಇಲ್ಲೆ ಬಿಟ್ಟು, ಇಂಡೋನೇಷಿಯ ಹಾಯ್ದು, ದಕ್ಷಿಣ ಕೊರಿಯಾದ ಜಿ-೨೦ ಸಮ್ಮೇಳನವನ್ನು ಮುಗಿಸಿ, ಜಪಾನಿನಲ್ಲಿ ಪೆಸಿಫಿಕ್ ಸಾಗರತೀರ ದೇಶಗಳ ಸಮ್ಮೇಳನದಲ್ಲಿ ಕೊನೆಗೊಂಡಿದೆ. ಈ ನಾಲ್ಕು ದೇಶಗಳು ಜಿ-೨೦ ಕೂಟದವು. ಅಂತೆಯೇ ಜಿ-೨೦ ಶೃಂಗಸಭೆಯಲ್ಲಿ ಒಬಾಮಗೆ ಇವರ ಬೆಂಬಲ ಬೇಕಿತ್ತು. ಭಾರತವನ್ನು ಹೊಗಳಿದರು. ಇಂಡೋನೇಷಿಯಾಕ್ಕೆ ಉಪದೇಶವಿತ್ತರು. ದಕ್ಷಿಣ ಕೊರಿಯಾಕ್ಕೆ ತಮ್ಮ ದನದ ಮಾಂಸ, ಕಾರುಗಳನ್ನು ಕೊಳ್ಳಲು ಒತ್ತಾಯಿಸಿ ವಿಫಲರಾದರು. ಜಿ-೨೦ರ ಸಮ್ಮೇಳನ ಮುಗಿದು ಬರಿಗೈಯಲ್ಲಿ ಜಪಾನಿಗೆ ಹೋದರು. ಅಲ್ಲಿ ಪೆಸಿಫಿಕ್ ಸಾಗರ ತೀರ ರಾಷ್ಟ್ರಗಳನ್ನು ಅಮೇರಿಕಾದ ವ್ಯಾಪಾರಕ್ಕೆ ಸಹಕರಿಸಲು ಪ್ರಾರ್ಥಿಸಿದರು. ಎಲ್ಲ ಕಡೆಯೂ ಎಲ್ಲರಿಗೂ ಸೂಕ್ಷ್ಮವಾಗಿ 'ಪ್ರಬಲ'ವಾಗುತ್ತಿರುವ ಚೀನಾದ ಬೆದರುಬೊಂಬೆಯನ್ನು ತೋರಿಸಲು ಪ್ರಯತ್ನಿಸಿ ಸೋತರು, ಪಾಪ! ಜೈತ್ರಯಾತ್ರೆಯಾಗದ ಯಾತ್ರೆಯ ಸಂಕ್ಷಿಪ್ತ ವರದಿ ಇದು.

ಆರ್ಥಿಕವಾಗಿ ತೀವ್ರ ಬಿಕ್ಕಟ್ಟಿಗೆ ಸಿಕ್ಕಿರುವ ಅಮೆರಿಕಾ ಸಂಸ್ಥಾನ ಇಂದು ಜಾಗತಿಕವಾಗಿ ಇತರರಿಗೆ ಯಾವ ಮಹತ್ವದ ಆರ್ಥಿಕ ನೆರವನ್ನಾಗಲೀ, ಮಾರಾಟದ ಉಪಯುಕ್ತ ಸರಕುಗಳನ್ನಾಗಲೀ ನೀಡುವ ಶಕ್ತಿಯನ್ನು ಕಳೆದುಕೊಂಡಿದೆ. ನಿನ್ನೆ ನಾವು ನಿಮಗೆ ನೆರವು ನೀಡಿದ್ದೇವೆ, ಇಂದು ನಿಮ್ಮ ಸರದಿ, ನಮಗೆ ಏನನ್ನು ನೀಡಬಲ್ಲಿರಿ, ಏನಾದರೂ ನೀಡಿ ಎಂಬುದೇ ಒಬಾಮರ ಎಲ್ಲ ಮಾತಿನ ಗಾರುಡಿಯ ಒಳಪದರದಲ್ಲೂ ಹುದುಗಿದ್ದ ಸಂದೇಶ. ಜಿ-೨, ೩ - ೨೦ಕ್ಕೆ ಏರಿದ ಶ್ರೀಮಂತ ರಾಷ್ಟ್ರಗಳ ಈ ಕೂಟ ತ್ವರಿತಗತಿಯಲ್ಲಿ ಹಿಗ್ಗಿದ ಈ ಕಾಲಾವಧಿಯೇ ಬಂಡವಾಳ ವ್ಯವಸ್ಥೆಯ ಆರಾಧಕ ಪಶ್ಚಿಮದ ಬಣದ ರಾಷ್ಟ್ರಗಳು ಹಿಂದೆಂದೂ ಇಲ್ಲದಷ್ಟು ಆರ್ಥಿಕ ಮುಗ್ಗಟ್ಟಿನ ಪ್ರಪಾತಕ್ಕೆ ಬಿದ್ದ ಕಾಲಾವಧಿ. ಕೆನಡಿ, ಆ ಮತ್ತೊಬ್ಬ ಮಾತುಗಾರ ಅಧ್ಯಕ್ಷ, ಹಿಂದೆ, ತನ್ನ ಜನತೆಯನ್ನು ''ಅಮೆರಿಕಾ ನಿಮಗೆ ಏನು ಮಾಡುತ್ತದೆ ಎಂದು ಕೇಳಬೇಡಿ, ನೀವು ಅಮೆರಿಕಾಗೆ ಏನು ಮಾಡಬಲ್ಲಿರಿ ಹೇಳಿ'' ಎಂದುದನ್ನೇ ಇಂದು ಜಗತ್ತಿನ ಮಹಾ ಶ್ರೀಮಂತ ರಾಷ್ಟ್ರ, ಬಂಡವಳಿಗರ ಮೆಕ್ಕ, ಇತರ ರಾಷ್ಟ್ರಗಳಿಗೆ ಅದೇ ಪ್ರಶ್ನೆಯನ್ನು ಕೇಳುತ್ತಿದೆ! ಇಷ್ಟಾದರೂ ಇವರ್‍ಯಾರೂ ತಾವು ನಡೆದು ಬಂದ ಆರ್ಥಿಕ ಮಾರ್ಗದಲ್ಲಿ ಏನಾದರೂ ಮೂಲಭೂತ ದೋಷವಿದೆಯೇ, ದಾರಿ ತಪ್ಪಿದೆವೇ, ಅದಕ್ಕೇನಾದರೂ ತಿದ್ದುಪಾಡು ಬೇಕೆ ಎಂದು ಮರೆತೂ ಪ್ರಾಮಾಣಿಕವಾಗಿ ಚಿಂತಿಸಲು ಸಿದ್ಧರಿಲ್ಲದಿರುವುದು ವಿಸ್ಮಯಕಾರಿ ವಿಷಯ.

ಈ ಎಲ್ಲ ರಾಷ್ಟ್ರಗಳಲ್ಲೂ, ಎಲ್ಲಕ್ಕಿಂತ ಮಿಗಿಲಾಗಿ ಅ.ಸಂ.ಸಂಸ್ಥಾನದಲ್ಲಿ ನಿರುದ್ಯೋಗ ಅತಿ ಹೆಚ್ಚಿದೆ. ಅವರ ರಫ್ತು ಆಮದಿಗಿಂತ ವಿಪರೀತ ಕುಸಿದು, ತೂಗಿಸಲಾಗುತ್ತಿಲ್ಲ. ಜಗತ್ತಿನ ಅತಿ ದೊಡ್ಡ ಸಾಲಗಾರರಾಗಿದ್ದಾರೆ. ಕೇವಲ ಜರ್ಮನಿ ಮತ್ತು ಚೀನಾ ಎರಡು ದೇಶಗಳು ಮಾತ್ರ ಹೆಚ್ಚಿನ ರಫ್ತುಮಾಡಿ, ಅಪಾರವಾದ ವಿದೇಶೀ ವಿನಿಮಯ ಸಂಗ್ರಹಿಸಿಕೊಂಡು ಅದನ್ನು ಬಳಸುವ ವಿಧಾನ ಬಗೆಹರಿಯದೆ, ಅವರ ಕರೆನ್ಸಿಯ ವಿದೇಶೀ ವಿನಿಮಯದ ದರ ಹೆಚ್ಚುತ್ತಾ, ಪರಿಣಾಮವಾಗಿ ಅವರ ಸರಕುಗಳು ಬೆಲೆ ಏರಿ, ಈಗ ರಫ್ತು ಕಡಿಮೆಯಾಗುವ, ಅಂದರೆ ಅವರು ಆಂತರಿಕ ಅರ್ಥವ್ಯವಸ್ಥೆಯಲ್ಲಿ ನಿರುದ್ಯೋಗದ ಆತಂಕ, ಉತ್ಪಾದನೆಯ ಕುಸಿತ ಹೀಗೆಲ್ಲಾ ಕಂಗಾಲಾಗಿದ್ದಾರೆ. ತಾವು ಅಂತರರಾಷ್ಟ್ರೀಯ ಕರೆನ್ಸಿ ಮಾಪನವೆಂದು ನಂಬಿ ಸಂಗ್ರಹಿಸಿದ ಅಪಾರ ಮೊತ್ತದ ಡಾಲರು ಸವಕಲಾಗುತ್ತಿರುವುದನ್ನು ನೋಡಿ ಕಂಗಾಲಾಗಿದ್ದಾರೆ. ವಿದೇಶೀ ಬಂಡವಾಳ ಇನ್ನು ಸಾಕೋ ಸಾಕು ಎನ್ನುವ ಪರಿಸ್ಥಿತಿ ಅವರದು. ಹಾಗಾದರೆ ಪಶ್ಚಿಮದ ಬಂಡವಳಿಗರು ತಮ್ಮ ಬಂಡವಾಳವನ್ನು ಎಲ್ಲಿಗೆ ಒಯ್ಯಬೇಕು ? ನಮ್ಮದೇ ದೇಶದ ಷೇರುಪೇಟೆಯಲ್ಲಿ ತಾತ್ಕಾಲಿಕ ಬಂಡವಾಳವಾಗಿ ಈಗಾಗಲೆ ವಿಪರೀತವೆನ್ನುವಷ್ಟು ಹಣಹೂಡಿಕೆಯಾಗಿ, ಬರುವ ದಿನಗಳಲ್ಲಿ ಇದು ನಮಗೂ ಆತಂಕವೆನಿಸಬಹುದು. ತಮ್ಮನ್ನು ಅಮೆರಿಕಾದ ದಾಯಾದಿಗಳೆಂದು ಭಾವಿಸಿರುವ ನಮ್ಮ ವಾಣಿಜ್ಯ ಮಂಡಳಿಗಳು ಹಾಗೂ ನಮ್ಮ ಪ್ರಧಾನಿ ಭಾರತ ಇನ್ನೂ ೧೦೦೦ ಬಿಲಿಯನ್ ಡಾಲರುಗಳನ್ನು ಒಳಗೆ ಬಿಟ್ಟುಕೊಳ್ಳುವ ಸಾಮರ್ಥ್ಯ ಪಡೆದಿದೆ ಎಂದುಕೊಳ್ಳುತ್ತಾರೆ! ಅ.ಸಂ.ಸಂಸ್ಥಾನ ತನ್ನ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಲು ಚೀನಾ, ಜರ್ಮನಿ ಮುಂತಾದವರು ತಮ್ಮ ಕರೆನ್ಸಿಯ ವಿದೇಶೀ ವಿನಿಮಯ ದರವನ್ನು ತೀರ ತಗ್ಗಿಸಕೂಡದು, ಅವರೊಳಗೆ ವಿದೇಶೀ ಬಂಡವಾಳದ ಹೂಡಿಕೆಗೆ ಎಂದಿನಂತೆಯೆ ಮುಕ್ತ ಅವಕಾಶಬೇಕು, ಅವರೆಲ್ಲಾ ಅ.ಸಂ.ಸಂಸ್ಥಾನದಲ್ಲಿ ಹೂಡಿಕೆ ಮಾಡಬೇಕು, ಅವರ ಸರಕನ್ನು ಇನ್ನೂ ಹೆಚ್ಚು ಹೆಚ್ಚು ಕೊಳ್ಳಬೇಕು ಎಂದು ಜಿ-೨೦ ಶೃಂಗಸಭೆಯಲ್ಲಿ ವಾದಿಸಿದರು. ತಾವು ಮಾತ್ರ ೬೦೦ ಬಿಲಿಯನ್ ಡಾಲರ್ ಹೆಚ್ಚುವರಿ ಪ್ರಿಂಟ್ ಮಾಡಿ, ತಮ್ಮ ವ್ಯವಸ್ಥೆಗೆ ಹಂಚಿ, ಡಾಲರ್ ಮೌಲ್ಯ ತಗ್ಗಿಸಿಕೊಂಡರೆ ಅದು ಮುಕ್ತ ಮಾರುಕಟ್ಟೆಯ ನೀತಿಗೆ ವಿರುದ್ಧವಲ್ಲ ಎಂದರೆ ಹೇಗೆ ? ಆದರೆ ಮಿಕ್ಕ ರಾಷ್ಟ್ರಗಳು ಇದಕ್ಕೆ ಸುತರಾಂ ಒಪ್ಪಲಿಲ್ಲ. ಭಾರತದಲ್ಲಿಯೂ, ಬೇರೆಡೆಯೂ ಒಬಾಮ ಹೇಳಿದ್ದು ಅಮೆರಿಕಾದ ಅರ್ಥವ್ಯವಸ್ಥೆ ಕುಸಿಯುವುದು ''ನಿಮಗ್ಯಾರಿಗೂ ಒಳ್ಳೆಯದಲ್ಲ'' ಎಂದು. ಅದು ಒಂದು ರೀತಿಯ ಎಚ್ಚರಿಕೆಯ ಹಾಗೂ ಬೆದರಿಕೆಯ ಮಾತು ಆಗಿತ್ತು. ವಾಸ್ತವವೂ ಹೌದು. ಬ್ರೆಟನ್‌ವುಡ್ ಒಪ್ಪಂದದ ಕಾಲದಿಂದ ವಿಶ್ವದ ಮಾರುಕಟ್ಟೆಗೆ ಚಿನ್ನದ ಸ್ಟ್ಯಾಂಡರ್ಡ್ ಬದಲು ಡಾಲರ್ ಎಂದು ಆಶ್ವಾಸನೆ ಇತ್ತ ಅ.ಸಂ.ಸಂಸ್ಥಾನಕ್ಕೆ ಇಂದು ಡಾಲರಿನ ಮೌಲ್ಯವನ್ನು ಸ್ಥಿರವಾಗಿ ಕಾಪಾಡಿಕೊಳ್ಳಲು ಆಗುತ್ತಿಲ್ಲ. ಕಾರಣ ಅದರದು ಅಸ್ವಸ್ಥ ಆರ್ಥಿಕ ವ್ಯವಸ್ಥೆ. ಜಾಗತಿಕವಾಗಿ ರಾಷ್ಟ್ರಗಳು ಡಾಲರಿಗೆ ಪರ್ಯಾಯವಾಗಿ ಹೊಸದೊಂದು ಮಾನಕದ ಹುಡುಕಾಟ ಪ್ರಾರಂಭಿಸಿವೆ.

ಈ ಹಿನ್ನೆಲೆಯಲ್ಲಿ ಒಬಾಮ ಭಾರತದಿಂದ ನಿರೀಕ್ಷಿಸಿದ್ದು ೨೦ ಬಿಲಿಯನ್ ಡಾಲರ್ ವ್ಯಾಪಾರ – ಅಂದರೆ ಅಮೆರಿಕಾದ ಸರಕುಗಳನ್ನು ಭಾರತ ಕೊಳ್ಳಲು ಒತ್ತಾಯಿಸಿ, ಈಗಷ್ಟೆ ೧೦ ಬಿಲಿಯನ್ ವ್ಯಾಪಾರದ ಒಪ್ಪಂದ ಗಿಟ್ಟಿಸಿಕೊಂಡಿದ್ದಾರೆ. ಇದಕ್ಕೆ ಪ್ರತಿಯಾಗಿ ಎನ್ನುವಂತೆ ಅಣುವಿದ್ಯುತ್ ಕ್ಷೇತ್ರದಲ್ಲಿ ಶೀಘ್ರವಾಗಿ ವ್ಯವಹಾರ ಸಡಿಲಿಸುವುದು, ಕೃಷಿಕ್ಷೇತ್ರದಲ್ಲಿ ಅವರ ತಂತ್ರಜ್ಞಾನದ ಎರವಲು ನೀಡುವುದು (ನಮಗೆ ಉಪಯೋಗವೇ ? ಹಿಂದಿನ ಗ್ರೀನ್ ರೆವೊಲ್ಯೂಷನ್‌ನ ಅನುಭವ ನೆನಪಿಸಿಕೊಳ್ಳಿ) ಮುಂತಾದ ತೀರ್ಮಾನಗಳು ಹೊರಬಂದಿವೆ. ನಾವು ಅಣುಬಾಂಬ್ ಪರೀಕ್ಷಿಸಿದೆವು ಎಂದು ಮುನಿಸಿಕೊಂಡು ನಮ್ಮ ಹಲವಾರು ಸಂಶೋಧನಾ ಸಂಸ್ಥೆಗಳನ್ನು, ಅ.ಸಂ.ಸಂಸ್ಥಾನ ತನ್ನ ''ಕೆಟ್ಟ ಸಂಸ್ಥೆಗಳ ಪಟ್ಟಿ'' ಯಲ್ಲಿ ಸೇರಿಸಿತ್ತು. ಭಾರತೀಯ ವಿಜ್ಞಾನ ಸಂಸ್ಥೆ, ರಕ್ಷಣಾ ಇಲಾಖೆಯ ಡಿಆರ್‌ಡಿಓ, ನಮ್ಮ ಬಾಹ್ಯಾಕಾಶ ಸಂಸ್ಥೆ, ನಮ್ಮ ಅಣುವಿಜ್ಞಾನ ಸಂಸ್ಥೆ ಮುಂತಾಗಿ. ಈ ಸಂಸ್ಥೆಗಳ ವಿಜ್ಞಾನಿಗಳಿಗೆ ಅಮೆರಿಕಾ ಪ್ರವೇಶಿಸಲು ವೀಸ ನೀಡದೆ ಅವಮಾನಗೊಳಿಸಿತ್ತು. ಈಗಲೂ ಅಣುವಿಜ್ಞಾನ ಸಂಸ್ಥೆಗೆ ಆ ಪಟ್ಟ ಮುಂದುವರಿದಿದೆ. ಮಿಕ್ಕವುಗಳನ್ನು ಆ ಪಟ್ಟಿಯಿಂದ ತೆಗೆಯಲು ಚರ್ಚೆಗೆ ಒಪ್ಪಿದ್ದಾರೆ. ಬಹುಶಃ ಇದು ಅವರ ವಿಜ್ಞಾನಿಗಳಿಗೆ ನಮ್ಮೊಳಗೆ ಮುಕ್ತ ಪ್ರವೇಶ ದೊರಕಿಸಿಕೊಳ್ಳುವ ಹುನ್ನಾರವೂ ಇರಬಹುದು.

ಭಾರತ ವಿಶ್ವದ ಆರ್ಥಿಕ ಮಹಾಶಕ್ತಿಗಳಲ್ಲಿ ತಾನು ಈಗಾಗಲೇ ಒಂದು ಎಂಬ ಪಿತ್ಥ, ನಮ್ಮ ರಾಜಕೀಯ ನಾಯಕರುಗಳಿಗೂ, ವಾಣಿಜ್ಯದ ದೊರೆಗಳಿಗೂ ಏರಿ ಸ್ವಲ್ಪ ಕಾಲವೇ ಆಯ್ತು. ಕೇವಲ ಶೇಕಡಾ ೯ ಬೆಳವಣಿಗೆ ದರದಿಂದ ಇದನ್ನು ನಿರ್ಧರಿಸಲು ಸಾಧ್ಯವಿಲ್ಲವೆಂದು ನಮ್ಮ ಜನತೆಗೆ ಗೊತ್ತಿದೆ. ಈ ಪಟ್ಟವಿಲ್ಲದೆಯೆ, ಒಂದು ಕಾಲಕ್ಕೆ ಭಾರತ ವಿಶ್ವದ ಬಹುತೇಕ ರಾಷ್ಟ್ರಗಳ, ಅಲಿಪ್ತ, ಬಡ ಮತ್ತು ಸಮಾನಸ್ಕ ರಾಷ್ಟ್ರಗಳ ನಾಯಕನೆನಿಸಿಕೊಂಡಿತ್ತು. ಅವರೆಲ್ಲರ ಹಿತಾಸಕ್ತಿಗಳಿಗೆ ದನಿ ನೀಡುತ್ತಿದ್ದವರು ನಾವು. ಈಗ ಅವರನ್ನು ಕೈಬಿಟ್ಟು ಜಿ-೨೦ರೊಳಗೆ ಶ್ರೀಮಂತರೊಡನೆ ಸಹಭೋಜನಕ್ಕೆ ಕುಳಿತಿರುವುದಕ್ಕೆ ಕಾರಣ 'ತಮ್ಮದೆ' ಸಾಮರ್ಥ್ಯವಲ್ಲ, 'ಅವರ' ಅಗತ್ಯ ಎಂಬುದು ಯಾರಿಗೆ ತಾನೆ ತಿಳಿಯದು ? ಹೀಗಾಗಿ ನಮಗೆ ಇಂದು ನಿರ್ವೀರ್ಯವಾಗುತ್ತಿರುವ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಶಾಶ್ವತ ಸದಸ್ಯತ್ವದ ಹೊಂಗನಸು ! 'ಹೌದು ! ಹೌದು ! ನೀವು ಅಲ್ಲಿರಬೇಕು, ನಾವು ನಿಮಗೆ ಬೆಂಬಲ ಕುದುರಿಸುತ್ತೇವೆ, ಪ್ರತಿಯಾಗಿ ನಮ್ಮ ಸರಕುಗಳನ್ನು, ಆಯುಧಗಳನ್ನು, ಮಿಲಿಟರಿ ಸಾಮಗ್ರಿಗಳನ್ನು ಕೊಳ್ಳಿ' ಎನ್ನುತ್ತಿದೆ ಅ.ಸಂ.ಸಂಸ್ಥಾನ ಈಗ! ಅದು ನಮಗಾಗಿಯೇ ವಿಶಿಷ್ಟ ಪ್ರಯತ್ನವೆಂಬಂತೆ! ವಾಸ್ತವವೇನು ? ಪಶ್ಚಿಮದ ರಾಷ್ಟ್ರಗಳು ಬಲಹೀನವಾಗುತ್ತಿರುವಂತೆಯೇ, ವಿಶ್ವಸಂಸ್ಥೆಯ ಪಾತ್ರ ಬರುವ ದಿನಗಳಲ್ಲಿ ಹೆಚ್ಚಬಹುದು, ಮಹತ್ವದ್ದಾಗಬಹುದು. ವಿಶ್ವಸಂಸ್ಥೆಯನ್ನು ಬಲಗೊಳಿಸಲು ಅದರಲ್ಲಿ ಹಲವಾರು ಸುಧಾರಣೆಗಳು ಜರೂರು. ಅದರಲ್ಲಿ ಭದ್ರತಾ ಮಂಡಳಿಯ ಪುನರ್‌ರಚನೆ ಒಂದು. ಅದನ್ನು ವಿಸ್ತರಿಸುವುದು ಅನಿವಾರ್ಯ. ಆ ತೀರ್ಮಾನ ತೆಗೆದುಕೊಳ್ಳುವ ಸಾಮರ್ಥ್ಯವಿರುವುದು ವೀಟೋ ಪವರ್ ಪಡೆದಿರುವ ಐದು ರಾಷ್ಟ್ರಗಳಿಗೆ. ಅವು ಗುಟ್ಟುಗುಟ್ಟಾಗಿ ಹೇಳುತ್ತಿರುವುದೇನು ? ಹೊಸದಾಗಿ ಆರ್ಥಿಕ ಶಕ್ತಿ ಪಡೆದಿರುವ ಬ್ರೆಜಿಲ್ ಮತ್ತು ಭಾರತ ಅದರಲ್ಲಿ ಬರಲಿ, ಅದರೊಂದಿಗೆ ತಮ್ಮ ಗೆಳೆಯ, ಹಿಂದಿನ ಮಹಾಯುದ್ಧಕ್ಕೆ ಮುಖ್ಯ ಕಾರಣರಾದ ಜರ್ಮನಿ, ಜಪಾನ್ ಎರಡೂ ನುಸುಳಿ ಬರಲಿ. ಇವು ಯಾವುದಕ್ಕೂ ವೀಟೋ ಪವರ್ ನೀಡಲಾಗದು ! ವೀಟೋ ಪವರ್ ಇಲ್ಲದ ಇದಕ್ಕೇಕೆ ಒಬಾಮ ಮುಂದೆ ನಾವು ಅಂಗಲಾಚಬೇಕು ? ನಾವು ಕೇಳಲಿ, ಕೇಳದಿರಲಿ, ನಮ್ಮನ್ನು ಬಿಟ್ಟು ಅದು ಹೇಗೆ ವಿಶ್ವಸಂಸ್ಥೆಯ ಸುಧಾರಣೆ ಸಾಧ್ಯ ?

ಜಿ-೨೦ ಶೃಂಗಸಭೆಯ ನಂತರ, ಒಂದು ಸ್ವಾಗತಾರ್ಹ ಬದಲಾವಣೆಯೆಂದರೆ ವಿಶ್ವ ಹಣಕಾಸು ಸಂಸ್ಥೆ, ವಿಶ್ವಬ್ಯಾಂಕುಗಳಲ್ಲಿ ನಮ್ಮನ್ನೂ ಸೇರಿಸಿ, ಇಂದಿನ ವಾಸ್ತವಕ್ಕೆ ಅನುಗುಣವಾಗಿ, ಹೊಸ ಆರ್ಥಿಕ ಶಕ್ತಿಗಳಾದ ರಾಷ್ಟ್ರಗಳ ಪಾತ್ರವನ್ನು ಹೆಚ್ಚಿಸಲು ಒಪ್ಪಿರುವುದು. ಈಗಾಗಲೆ ಭಾರತ ವಿಶ್ವ ಹಣಕಾಸು ಸಂಸ್ಥೆಯ ಬಂಡವಾಳಕ್ಕೆ ಮತ್ತೂ ಮೂರು ಬಿಲಿಯನ್ ಡಾಲರ್ ನೀಡಿದೆ. ಅದರ ಓಟು ಹೆಚ್ಚುತ್ತದೆ. ಮುಖ್ಯವಾಗಿ ಈ ಸಂಸ್ಥೆ ಅಂತರರಾಷ್ಟ್ರೀಯವಾಗಿ ವಿಶ್ವಾಸಾರ್ಹವಾದ ವಿದೇಶೀ ವಿನಿಮಯ ಮಾಧ್ಯಮವಾಗಿ, ಕೃಶವಾದ ಡಾಲರಿಗೆ ಪರ್ಯಾಯವಾಗಿ ಮತ್ತೊಂದು ಕರೆನ್ಸಿಯನ್ನು ಸೃಷ್ಟಿಸುವ ಹೊಣೆಗಾರಿಕೆ ಹೊತ್ತಿದೆ. ಈಗಾಗಲೆ ಅವರಲ್ಲಿ ಇರುವ 'ಸ್ಪೆಷಲ್ ಡ್ರಾಯಿಂಗ್ ರೈಟ್ಸ್' ಎಂಬ ಲೆಕ್ಕದ ಮಾಧ್ಯಮವೇ ಅಂಥ ವಿಶ್ವಾಸವನ್ನು ಗಳಿಸಿದೆ. ಈ ಕುರಿತ ಚರ್ಚೆ ಯಾವ ರೂಪ ಪಡೆಯುವುದೆಂದು ಕಾದು ನೋಡಬೇಕು.

ತಾಯ್ನಾಡಿಗೆ ಹಿಂದಿರುಗಿದ ಒಬಾಮಾಗೆ ಯಾವ ಭವ್ಯ ಸ್ವಾಗತವೂ ಕಾದಿರಲಿಲ್ಲ. ಅವರು ಭಾರತಕ್ಕೆ ಭೇಟಿಕೊಟ್ಟ ಸಂದರ್ಭದಲ್ಲೇ ಒಬಾಮರ ಪಕ್ಷ ಹೌಸ್ ಆಫ್ ರೆಪ್ರೆಸೆಂಟೇಟಿವ್‌ನಲ್ಲಿ ಬಹುಮತ ಕಳೆದುಕೊಂಡಿತ್ತು! ಈಗಾಗಲೆ ಮಿಲಿಟರಿ ಬಲದಲ್ಲೂ ಕುಸಿದಿದ್ದು ಈಗ ಆರ್ಥಿಕವಾಗಿಯೂ ಬಲಹೀನವಾಗಿರುವುದರ ವಾಸ್ತವ ಅನುಭವ ಅಮೆರಿಕಾದ ಜನತೆಗೆ ಈಗ ದಕ್ಕಿರಬಹುದು. ಜಾಗತಿಕವಾಗಿ ಎಲ್ಲ ದೇಶಗಳ ಸರಕುಗಳಿಗೂ ಬೇಡಿಕೆ ದೊರಕಿಸುತ್ತಿದ್ದ ಅವರ ವ್ಯವಸ್ಥೆ ಕುಸಿದರೆ ನಮಗೂ ಅದು ಆತಂಕಕಾರಿ ಎಂಬುದು ನಿಜ. ಆದರೆ ಅಂಥ ಪರಿಸ್ಥಿತಿಯಲ್ಲಿ ವ್ಯವಸ್ಥೆ, ಈಗಿನ ವಾಣಿಜ್ಯ ಮಾದರಿಯನ್ನು ಕೈಬಿಟ್ಟು ಪುನರ್ ಹೊಂದಾಣಿಕೆಯನ್ನು ನಿರ್ವಹಿಸಬೇಕಾಗುವುದು ಅನಿವಾರ್ಯ. ಅವರೂ ಬದುಕಿ ನಾವೂ ಬದುಕುವ, ಎಲ್ಲರೂ ಬದುಕುವ ವ್ಯವಸ್ಥೆ ಸಾಧ್ಯವೆಂದು ತಿಳಿದವರು ಪದೇ ಪದೇ ಸಾರಿದ್ದಾರೆ. 'ಸಮಾಜವಾದ' ಪದ ಹೇಳುವುದು ಬೇಡ! ಅದೊಂದು 'ಸಜೀವ' ಬೆದರು ಬೊಂಬೆ! ಬೆದರಿಕೆಯಾಗದ ಪರ್ಯಾಯ ಪದ ಬಳಸಿದರೆ ಹೇಗೆ ? ವಿಶ್ವ ಹಣಕಾಸು ಸಂಸ್ಥೆಗೆ ಜಿ-೨೦ ಒಂದು ಜವಾಬ್ದಾರಿ ನೀಡಿದೆ. ಎಲ್ಲ ಶ್ರೀಮಂತ ರಾಷ್ಟ್ರಗಳೂ, ಪರಸ್ಪರ ಪೈಪೋಟಿ ಮತ್ತು ಆರ್ಥಿಕ ಘರ್ಷಣೆಗೆ ಮುಂದಾಗದೆ, ಪರಸ್ಪರ ಸಹಕಾರ ತತ್ವದ ಮೇಲೆ ತಮ್ಮ ತಮ್ಮ ಆರ್ಥಿಕ ವ್ಯವಸ್ಥೆಗಳನ್ನು ಹೇಗೆ ನಿರ್ವಹಿಸಬೇಕು ಎಂದು ಕೆಲವು ಸಾರ್ವತ್ರಿಕ ನಿರ್ದೇಶಕ ಸೂತ್ರಗಳನ್ನು ಸಿದ್ಧಪಡಿಸಬೇಕೆಂಬುದು ಆ ಕೆಲಸ. ೨೦೧೧ರ ಅಂತ್ಯದ ವೇಳೆಗೆ ಸೇರುವ ಜಿ-೨೦ರ ಮುಂದಿನ ಶೃಂಗಸಭೆಯಲ್ಲಿ ಈ ಸೂತ್ರಗಳ ಚರ್ಚೆಯಾಗುವುದಂತೆ. ಏತನ್ಮಧ್ಯೆ ಅದೆಷ್ಟು ಜಿ-೭, ೮, ೭೭ ಸಭೆಗಳು ನಡೆದಾವೋ! ಅಂತೂ ಇದು ಶೃಂಗಸಭೆಗಳ ಯುಗ! ಮಿಲಿಟರಿ ಕದನಗಳಿಗಿಂತ ಇವು ಎಷ್ಟೋ ವಾಸಿ! ಇನ್ನು ಮೇಲೆ ಏನಿದ್ದರೂ ಅದು ಕೇವಲ ಜಿ-೨, ಅಂದರೆ ಜಾಗತಿಕ ನಾಯಕತ್ವ ಚೀನಾ ಮತ್ತು ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಸಹಭಾಗಿತ್ವದ್ದು ಎಂದು ಕೆಲವರು ಹೇಳಲಾರಂಭಿಸಿದ್ದಾರೆ! ನಾವು ಎಂದಿದ್ದರೂ ಚೀನಾದ ವಿರುದ್ಧ ಎನ್ನುವ ತಿಳಿಗೇಡಿಗಳು ಇದನ್ನು ಗಮನಿಸಲಿ.

ತಿಂಗಳ ಪತ್ರಿಕೆ
**ಹೊಸತು**
ನೆನ್ನೆಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

## ಸಂಪಾದಕೀಯ

### ಭ್ರಷ್ಟರು ತುಂಬಿಕೊಂಡಿದ್ದಾರೆ – ಎಚ್ಚರ !

ಭ್ರಷ್ಟಾಚಾರ, ಲಂಚಗುಳಿತನ, ಅಧಿಕಾರದ ದುರುಪಯೋಗ, ಅವ್ಯವಹಾರ, ಅನೀತಿ, ಸ್ವಜನ ಪಕ್ಷಪಾತ, ಭೂ ಕಬಳಿಕೆ, ಭೂ ಹಗರಣ, ಅಕ್ರಮ-ಸಕ್ರಮ, ಡಿನೋಟಿಫಿಕೇಶನ್ ಇತ್ಯಾದಿ ಇತ್ಯಾದಿ ಶಬ್ದಗಳೆಲ್ಲ ಈಗ ಒಂದು ಬಗೆಯಲ್ಲಿ ಸವಕಲು ನಾಣ್ಯವಾಗುತ್ತಿವೆ. ಇಪ್ಪತ್ತೊಂದನೇ ಶತಮಾನದಲ್ಲಿ, ಸ್ವಾತಂತ್ರ್ಯೋತ್ತರ ಆರು ದಶಕಗಳಾದ ಮೇಲೆ ನಮ್ಮ ಸಾಮಾಜಿಕ ಜೀವನದಲ್ಲಿ ಅಂಟಿಕೊಂಡಿರುವ ಈ ಪೀಡೆಯನ್ನು ಬಣ್ಣಿಸಲು ಇನ್ನೇನಾದರೂ ಹೊಸ ಪದಗಳನ್ನು ಟಂಕಿಸಬೇಕಾಗಿ ಬಂದಿದೆ. ಏಕೆಂದರೆ, ಈಚಿನ ದಿನಗಳಲ್ಲಿ ಬಯಲಾಗುತ್ತಿರುವ ಹಗರಣಗಳು ಅಂಥವಾಗಿವೆ. ಆಶ್ಚರ್ಯವೆಂದರೆ ಬರಬರುತ್ತ ಇಂಥ ಪ್ರಕರಣಗಳಲ್ಲಿ ಭಂಡತನ ಮುಗಿಲು ಮುಟ್ಟಿರುವುದು ಮತ್ತು ಅದನ್ನು ಮುಚ್ಚಿಹಾಕಲು, ಆರೋಪಿಗಳನ್ನು ರಕ್ಷಿಸಲು ಬಗೆಬಗೆಯ ಹೊಸ ತಂತ್ರಗಳನ್ನು ರೂಪಿಸುತ್ತಿರುವುದು. ವಿಚಾರಣಾ ಆಯೋಗಗಳು, ಸಿಬಿಐ ತನಿಖೆ, ಸದನ ಸಮಿತಿ ಇವೆಲ್ಲ ಹಳೆಯವು. ಈಗ ಸಚಿವರ ತಂಡ (ಗ್ರೂಪ್ ಆಫ್ ಮಿನಿಸ್ಟರ್ಸ್), ಸಂಪುಟ ಸಮಿತಿ (ಕ್ಯಾಬಿನೆಟ್ ಕಮಿಟಿ) ಮೊದಲಾದವು ಬರುತ್ತಿವೆ. ಪ್ರಕರಣ ಹಳತಾದ ಹಾಗೆ ಅವು ಮುಚ್ಚಿಹೋಗಿ, ಆರೋಪಿಗಳು ರಾಜಾರೋಷವಾಗಿ ವಿಜೃಂಭಿಸುತ್ತಾರೆ. ಇವೆಲ್ಲ ನಾವು ನೋಡುತ್ತಿರುವ ಸಂಗತಿಗಳು. ಕಳವಳಕಾರಿ ಸಂಗತಿ ಎಂದರೆ ಈ ಪಿಡುಗು ಪ್ರಜಾಪ್ರಭುತ್ವದ ಆಧಾರಸ್ತಂಭಗಳೆನಿಸಿರುವ ರಾಜ್ಯಾಂಗ, ಶಾಸಕಾಂಗ, ನ್ಯಾಯಾಂಗ, ಪತ್ರಿಕಾರಂಗಗಳನ್ನೂ ಆವರಿಸಿಕೊಂಡಿರುವುದು.

ಈಗೆಲ್ಲ ಹಗರಣಗಳೆಂದರೆ ನೂರಾರು ಕೋಟಿಗಳಲ್ಲ ಸಾವಿರಾರು ಕೋಟಿ ರೂಪಾಯಿಗಳು. ಮುಂದ್ರಾ ಪ್ರಕರಣದಿಂದ ಹಿಡಿದು ಸತ್ಯಂ ಕಂಪ್ಯೂಟರ್‌ವರೆಗೆ ಎಲ್ಲವೂ ಕೋಟಿಗಟ್ಟಳೆ ವ್ಯವಹಾರಗಳೇ. ಹಣ, ರಾಜಕೀಯ ಬೆಂಬಲದಿಂದ ಇಂಥ ಆರೋಪಿಗಳೆಲ್ಲ ಹೇಗೋ ಬಚಾವಾಗುತ್ತಾರೆ. ವ್ಯವಸ್ಥೆ ಹಾಗಿದೆ. ಕಳೆದ ಮೂರು ನಾಲ್ಕು ತಿಂಗಳಲ್ಲಿ ಬೆಳಕಿಗೆ ಬಂದಿರುವ ಹಗರಣಗಳು ದಿಗ್ಭ್ರಮೆಗೊಳಿಸುವಂಥವು. ಕಾಮನ್‌ವೆಲ್ತ್ ಗೇಮ್ಸ್ ಹಗರಣ ಒಂದು ಘಟ್ಟದಲ್ಲಿ ಪಂದ್ಯಗಳು ನಡೆದೀತೆ ಎಂಬ ಆತಂಕಕ್ಕೆಡೆಕೊಟ್ಟಿತ್ತು. ನಡೆದಿರುವ ಅವ್ಯವಹಾರ ಸಾವಿರಾರು ಕೋಟಿ ರೂಪಾಯಿಗಳಿಗೆ ಸಂಬಂಧಿಸಿದ್ದು. ಆದರೆ ಸಂಬಂಧಪಟ್ಟ ಅಧಿಕಾರಿಗಳು, ಮುಖ್ಯವಾಗಿ ಇಂಡಿಯನ್ ಒಲಿಂಪಿಕ್ ಕಮಿಟಿ ಅಧ್ಯಕ್ಷ ಹಾಗೂ ಕಾಮನ್‌ವೆಲ್ತ್ ಗೇಮ್ಸ್‌ನ ಸಂಘಟಕ ಸುರೇಶ್ ಕಲ್ಮಾಡಿ ಮಾತ್ರ ಏನೂ ಆಗಿಲ್ಲವೆಂಬಂತೆ ಸುರಕ್ಷಿತ. ಪಂದ್ಯ ಮುಗಿದು ತಿಂಗಳುಗಳಾದರೂ ಸರಕಾರ ಏನೂ ಕ್ರಮ ಕೈಗೊಂಡಿಲ್ಲ. ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿಯ ಪ್ರಧಾನ ಕಾರ್ಯದರ್ಶಿ ಸ್ಥಾನದಿಂದ ಕಲ್ಮಾಡಿ ಕೆಳಗಿಳಿದಿದ್ದಾರೆ. ಇದು ಖಂಡಿತ ಶಿಕ್ಷೆಯಲ್ಲ, ಬೂಟಾಟಿಕೆ. ಇಷ್ಟು ಹೊತ್ತಿಗೆ ಈತ ಕಂಬಿ ಎಣಿಸುತ್ತಿರಬೇಕಾಗಿತ್ತು.

ಇನ್ನು ಇದರ ಹಿಂದೆಯೇ ಬೆಳಕಿಗೆ ಬಂದದ್ದು ಮುಂಬಯಿನ ವಸತಿ ಆಶ್ರಯ ಸಮುಚ್ಚಯದ ಹಗರಣ. ಕಾರ್ಗಿಲ್ ಯುದ್ಧದಲ್ಲಿ ಅಸುನೀಗಿದ ಯೋಧರ ಕುಟುಂಬಗಳಿಗಾಗಿ ನಿರ್ಮಿಸಿದ ಅಪಾರ್ಟ್‌ಮೆಂಟ್‌ಗಳನ್ನು ಕಬಳಿಸಿದ್ದು ಮಹಾರಾಷ್ಟ್ರ ಮುಖ್ಯಮಂತ್ರಿಯ ಆಪ್ತರು, ಸಂಬಂಧಿಕರು ಮತ್ತು ಸೇನಾಧಿಕಾರಿಗಳು ಇದರಲ್ಲಿ ಭಾಗಿಗಳಾಗಿದ್ದಾರೆ. ಕೋಟಿ ಕೋಟಿ ಬೆಲೆಬಾಳುವ ಸಮುದ್ರತೀರದಲ್ಲಿರುವ ಬಹು ಅಂತಸ್ತಿನ ಕಟ್ಟಡದಲ್ಲಿ ನಿರ್ಮಿಸಿರುವ ಅಪಾರ್ಟ್‌ಮೆಂಟ್‌ಗಳು ಇವು. ಈ ಪ್ರಕರಣ ಬಯಲಾದದ್ದು ಕೂಡ ಈಚೆಗೆ. ಎಲ್ಲ ಕಡೆಯಿಂದ ಒತ್ತಾಯ ಬಂದದ್ದರಿಂದ, ಖಚಿತವಾದ ಸಾಕ್ಷ್ಯಾಧಾರಗಳಿದ್ದುದರಿಂದ ಮುಖ್ಯಮಂತ್ರಿ ಅಧಿಕಾರದಿಂದ ಇಳಿದಾಯಿತು. ರಕ್ಷಣಾ ಸಚಿವಾಲಯ ಪ್ರತ್ಯೇಕ ವಿಚಾರ ನಡೆಸುತ್ತಿದೆ. ಈಗ ಚವಾಣ್ ಸ್ವತಂತ್ರ ವ್ಯಕ್ತಿ. ವಿಚಾರಣೆ ಯಾವಾಗಾದೀತೊ ನೋಡೋಣ. ಅಲ್ಲಿಯವರೆಗೆ ಎಲ್ಲ ಸುರಕ್ಷಿತ. ಇನ್ನು ಮೂರನೇ ಪ್ರಕರಣ ಟೆಲಿಕಾಮ್ ಸಚಿವ ಎ.ರಾಜಾಗೆ ಸಂಬಂಧಿಸಿದ್ದು. ಈತ ದೇಶಕ್ಕೆ ಉಂಟುಮಾಡಿರುವ ನಷ್ಟ ಸುಮಾರು ೧೭೬೦ ಸಾವಿರ ಕೋಟಿ ರೂಪಾಯಿಗಳು. ಮೂರು ವರ್ಷಗಳಿಂದ ಭದ್ರವಾಗಿ ಕುರ್ಚಿಗೆ ಅಂಟಿ ಕೊಂಡಿದ್ದ ಮಹಾಭಂಡ. ದ್ರಾವಿಡ ಮುನ್ನೇತ್ರ ಕಳಗಂನ ಈತನಿಗೆ ನಾಯಕ ಹಾಗೂ ತಮಿಳುನಾಡು ಮುಖ್ಯಮಂತ್ರಿ ಕರುಣಾನಿಧಿ ಶ್ರೀರಕ್ಷೆ. ಪ್ರಧಾನಮಂತ್ರಿಯವರ ಹಾಗೂ ಸಂಬಂಧಪಟ್ಟ ಇತರ ಸಚಿವಾಲಯಗಳ ಸಲಹೆ ಸೂಚನೆಗಳನ್ನು ತಿರಸ್ಕರಿಸಿದ ಭೂಪ. ಪ್ರಧಾನಿ ಮತ್ತು ಕಾಂಗ್ರೆಸ್ಸಿಗೆ ಸಮ್ಮಿಶ್ರ ಸರಕಾರದ ಧರ್ಮಸಂಕಟ. ತೀರಾ ಕುತ್ತಿಗೆಗೆ ಬಂದ ಮೇಲೆ ಅಧಿಕಾರ ತ್ಯಾಗ. ಮುಂದೆ ಈತ ಯಾವ ನಿರ್ಬಂಧವೂ ಇಲ್ಲದೆ ನಿರಾತಂಕವಾಗಿದ್ದರೆ ಅಚ್ಚರಿಪಡಬೇಕಾಗಿಲ್ಲ. ಇಂಥವರಿಗೆಲ್ಲ ನಮ್ಮ ವ್ಯವಸ್ಥೆಯಲ್ಲಿ ಕಾನೂನಿನ ರಕ್ಷಣೆ, ನಿಧಾನ ಗತಿಯಿಂದ ವರ್ಷಗಟ್ಟಲೆ ಎಳೆಯುವ ಸಾಗುವ ನ್ಯಾಯಾಂಗ ಶ್ರೀರಕ್ಷೆ. ಚಳಿಗಾಲದ ಪಾರ್ಲಿಮೆಂಟ್ ಅಧಿವೇಶನ ಪ್ರಾರಂಭವಾದಾಗಿನಿಂದ ಕಲಾಪಗಳು ಸ್ಥಗಿತಗೊಂಡಿವೆ. ಜಂಟಿ ಪಾರ್ಲಿಮೆಂಟರಿ ಸಮಿತಿಯಿಂದ ವಿಚಾರಣೆಗೆ ವಿರೋಧ ಪಕ್ಷಗಳ ಪಟ್ಟು ಸರಕಾರ ಅದಕ್ಕೆ ಒಪ್ಪುತ್ತಿಲ್ಲ. ಜಗ್ಗಾಟ ನಡೆದಿದೆ. ಏನೇ ವಿಚಾರಣೆ ನಡೆಸಿದರೂ ತಿಪ್ಪೆ ಸಾರಿಸುವ ಕೆಲಸವಾಗುತ್ತೆ. ಒಟ್ಟಿನಲ್ಲಿ ನಷ್ಟವಾಗುತ್ತಿರುವುದು ತೆರಿಗೆದಾರರ ಹಣ.

ಕೇಂದ್ರದ ಹಗರಣ ಈ ಪರಿಯಾದರೆ ನಮ್ಮ ಕರ್ನಾಟಕದ ಸ್ಥಿತಿ ಇನ್ನೂ ಘೋರ. ಇಲ್ಲಿ ಮುಖ್ಯಮಂತ್ರಿಯೇ ಮಹಾಭ್ರಷ್ಟ. ಈತನಿಗೆ ತಕ್ಕಂತೆಯೇ ಇತರ ಮಂತ್ರಿಗಳೂ ಮೇಯುವುದರಲ್ಲಿ ಗಟ್ಟಿಗರು. ಮುಖ್ಯಮಂತ್ರಿ ಯಡಿಯೂರಪ್ಪ ಕಂಪನಿ ಕುರ್ಚಿ ಉಳಿಸಿಕೊಳ್ಳುವುದಕ್ಕೆ ಮಾಡುವ ಅಕ್ರಮಗಳು ಒಂದು ಕಡೆ, ಅಧಿಕಾರದಲ್ಲಿರುವಾಗ ಆದಷ್ಟು ಲೂಟಿ ಮಾಡುವುದು ಇನ್ನೊಂದು ಕಡೆ. ಸಚಿವರಲ್ಲಿ ಪೈಪೋಟಿಯೇ ನಡೆಯುತ್ತಿದೆ. ಇದರಲ್ಲಿ ಮುಖ್ಯಮಂತ್ರಿ ಈಗ ಭೂಹಗರಣದಲ್ಲಿ ಸಿಕ್ಕಿಬಿದ್ದಿದ್ದಾರೆ, ಬಚಾವಾಗಲು ದಾರಿ ತೋರದೆ ಪರದಾಡುತ್ತಿದ್ದಾರೆ. ಗಣಿ ಧಣಿಗಳಿಗೆ ಶರಣಾಗಿ ಕುರ್ಚಿ ಉಳಿಸಿಕೊಂಡ ಈತ, ಗೊಂದಲದಲ್ಲಿ ವಿಶ್ವಾಸಮತ ಗಳಿಸಿ ಪಾರಾದ. ಈಗ ಮಕ್ಕಳ ಉದ್ಧಾರಕ್ಕಾಗಿ ಭೂಕಬಳಿಸಿರುವ ಈತ ಬಚಾವಾಗುವುದು ಕಷ್ಟವೆ. ನೋಡಬೇಕು. ಹಿಂದಿನವರು ಮಾಡಿರುವುದನ್ನೇ ನಾನೂ ಮಾಡಿದ್ದೇನೆ, ನನ್ನ ಮಕ್ಕಳು ಉದ್ದಿಮೆದಾರರಾದರೆ ತಪ್ಪೇನು ಎನ್ನುವುದು ಮುಖ್ಯಮಂತ್ರಿ ಸಮರ್ಥನೆ. ಇದಕ್ಕಿಂತ ಮೂರ್ಖತನ ಇನ್ನೇನಿದೆ. ಭಂಡತನದ ಪರಮಾವಧಿ ಇದು. ಇದಕ್ಕೆ ಸಾಕ್ಷಿ ಆತ ನಡೆಸಿದ ಪತ್ರಿಕಾಗೋಷ್ಠಿ. ಭಾಜಪ ನಾಯಕರು ಯಡಿಯೂರಪ್ಪ ಸೃಷ್ಟಿಸಿರುವ ಬಿಕ್ಕಟ್ಟು ಬಗೆಹರಿಸಲು ದಿಕ್ಕುತೋಚದಂತಾಗಿದ್ದಾರೆ. ಅವರ ಕೋರ್ ಕಮಿಟಿಯಲ್ಲೇ ಬೇರೆ ಬೇರೆ ಬಣಗಳಿರುವುದರಿಂದ ಯಡಿಯೂರಪ್ಪ ಅಧಿಕಾರ ತ್ಯಜಿಸಲು ನಿರಾಕರಿಸುತ್ತಿದ್ದಾರೆ.

ಇವೆಲ್ಲ ಒಂದು ಕಡೆಯಾದರೆ ನಮ್ಮ ನ್ಯಾಯಾಂಗ ವ್ಯವಸ್ಥೆ ಜಡವಾಗಿ, ತಡವಾಗಿರುವುದರ ಜೊತೆಗೆ ಈಗ ಭ್ರಷ್ಟಾಚಾರದ ಆಪಾದನೆಗಳಿಗೀಡಾಗುತ್ತಿರುವುದು ನಿಜಕ್ಕೂ ಆತಂಕಕಾರಿ. ಹಿರಿಯ ವಕೀಲರು ಹಾಗೂ ಮಾಜಿ ನ್ಯಾಯಾಂಗ ಸಚಿವ ಶಾಂತಿಭೂಷಣ್ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳನ್ನು ಕುರಿತು ಗಂಭೀರವಾದ ಆರೋಪ ಮಾಡಿದ್ದಾರೆ. ಈ ಬಗ್ಗೆ ವಿಚಾರಣೆಯು ಸೂಕ್ತ. ನ್ಯಾಯಾಲಯ ನಿಂದನೆ ಆಪಾದನೆ ಎದುರಿಸುತ್ತಿರುವ ಈ ವಕೀಲ ತಮ್ಮ ಆರೋಪಕ್ಕೆ ಬದ್ಧರಾಗಿದ್ದಾರೆ. ಕರ್ನಾಟಕ ಉಚ್ಚ ನ್ಯಾಯಾಲಯದ ಮಾಜಿ ಮುಖ್ಯ ನ್ಯಾಯಾಧೀಶ ದಿನಕರನ್ ಪ್ರಕರಣ ಯಾರೂ ಮರೆತಿಲ್ಲ. ಇದರ ನಡುವೆಯೇ ನ್ಯಾಯಾಧೀಶ ಸೇನ್‌ರ ಮಹಾಭಿಯೋಗಕ್ಕೆ ತಯಾರಿ ನಡೆಯುತ್ತಿದೆ. ಪತ್ರಿಕಾರಂಗದಲ್ಲಿ 'ಸುದ್ದಿಗಾಗಿ ಹಣ' (ಪೇಯ್ಡ್ ನ್ಯೂಸ್ : ತಮ್ಮ ಸುದ್ದಿಯನ್ನು ಪ್ರಕಟಿಸಲು ಇತರರ ಸುದ್ದಿಯನ್ನು ಮುಚ್ಚಿಡಲು ಹಣ) ಬಗ್ಗೆ ಸಾಕಷ್ಟು ಚರ್ಚೆಗಳೂ ನಡೆಯುತ್ತಿವೆ. ಪ್ರಶ್ನೆ ಕೇಳಲು ಪಾರ್ಲಿಮೆಂಟ್ ಸದಸ್ಯರು ಹಣ ಪಡೆದ ಪ್ರಕರಣದ ನೆನಪು ಇನ್ನೂ ಹಸಿರಾಗಿಯೇ ಇದೆ. ಕರ್ನಾಟಕದವರಿಗೆ ಮಾರಾಟಕ್ಕಿರುವ ಶಾಸಕರು ಹೊಸಬರೇನಲ್ಲ. ಪಕ್ಷಾಂತರಕ್ಕೆ ಯಾವುದೇ ಅಡ್ಡಿಯಿಲ್ಲ. ಚುನಾವಣೆಗಳಲ್ಲಿ ಟಿಕೇಟು ದೊರೆಯದಿದ್ದಾಗ ಬೇರೆ ಪಕ್ಷಕ್ಕೆ ದಾಟಿ ಹೋಗುವುದು ಮಾಮೂಲಿ. ಭಾಜಪ ಸರಕಾರ ಬಂದ ಮೇಲೆ ಹೊಸ ವರಿಸೆ ಪ್ರಾರಂಭವಾಗಿದೆ. ಪಕ್ಷಾಂತರ ಮಾಡಿಸಿ ಶಾಸಕ ಸ್ಥಾನಕ್ಕೆ ರಾಜಿನಾಮೆ ನೀಡಿಸಿ, ಉಪ ಚುನಾವಣೆಯಲ್ಲಿ ಆರಿಸಿ ಬರುವ ಹಾಗೆ ಮಾಡುವುದು. ಇದು ಪಕ್ಷಾಂತರ ಕಾಯಿದೆಯ ಅನ್ವಯವಾಗದಂತೆ ನೋಡಿಕೊಳ್ಳುವ ವಿಧಾನ. ಯಾವುದಕ್ಕೂ ಮಾನ ಮರ್ಯಾದೆ ತಾತ್ವಿಕ ಕಟ್ಟು ಪಾಡುಗಳೇನಿರುವುದಿಲ್ಲ. ಪಕ್ಷಾಂತರಿಗಳಿಗೆ ಬೇಕಾಗಿರುವುದು ಹಣ, ಅಧಿಕಾರ. ಇದು ಅಧಿಕಾರಸ್ಥರ ಭ್ರಷ್ಟತೆಯ ಪರಮಾವಧಿ. ಈ ಅಡ್ಡದಾರಿಗಳಿಂದಾಗಿ ಇಂಥ ಭ್ರಷ್ಟ ಪರಿಸ್ಥಿತಿ ಉಂಟಾಗಿದೆ. ಶಿಸ್ತಿನ ಪಕ್ಷವೆಂದು ಬೊಗಳೆ ಬಿಡುವ, ತನ್ನ ಸದಸ್ಯರು ಶಿಸ್ತಿನ ಸಿಪಾಯಿಗಳೆಂದು ಕೊಚ್ಚಿಕೊಳ್ಳುವ ಭಾಜಪಗೆ, ಯಡಿಯೂರಪ್ಪ ಎದುರು ನಿಂತು ತಿರುಗೇಟು ನೀಡಿರುವುದು ಗಾಬರಿ ಹುಟ್ಟಿಸಿದ್ದರೆ ಆಶ್ಚರ್ಯವಿಲ್ಲ. ಇದರಿಂದ ಗೊಂದಲ, ನಷ್ಟ ಕರ್ನಾಟಕದ ಜನತೆಗೆ. ಜನ ಎಚ್ಚೆತ್ತುಕೊಳ್ಳದಿದ್ದರೆ ಸಂಘಟಿತರಾಗಿ ಆಂದೋಳನ ನಡೆಸದಿದ್ದರೆ ಎಲ್ಲ ಗುಳುಂ.




## ನವೆಂಬರ್ ಸಂಚಿಕೆ

'ಹೊಸತು' ಪ್ರತಿ ತಿಂಗಳು ಹೊಸತಾಗಿಯೇ ಇರುತ್ತದೆ. ಹಾಗಿರಲಿ ಎಂದೇ ಈ ಹೆಸರನ್ನು ತಾವು ನಾಮಕರಣ ಮಾಡಿರಬಹುದೆನಿಸುತ್ತದೆ. ಈ ಪತ್ರಿಕೆಯಲ್ಲಿ ಮುದ್ರಿಸಲ್ಪಡುವ ಲೇಖನಗಳೆಲ್ಲಾ ಸಂಗ್ರಹ ಯೋಗ್ಯವಾದವು. ಇದಕ್ಕಾಗಿ ತಮಗೆ ಅಭಿನಂದನೆಗಳು.

ಜುಲೈ ೨೦೧೦ರ ಸಂಚಿಕೆಯಲ್ಲಿ ಪ್ರಕಟವಾಗಿರುವ ಕೈದಾಳ: ಒಂದು ಅಧ್ಯಯನ ಚೆನ್ನಾಗಿ ಮೂಡಿ ಬಂದಿದೆ. ಇದೇ ವಿಚಾರವನ್ನು ಕುರಿತು ಡಾ॥ ಹಂಪ ನಾಗರಾಜಯ್ಯನವರು ತಮ್ಮ ಚಂದ್ರಕೊಡೆ ಎಂಬ ಸಂಶೋಧನಾ ಕೃತಿಯಲ್ಲಿ ದಾಖಲಿಸಿದ್ದಾರೆ. ಇದನ್ನು ಆಧಾರವಾಗಿಟ್ಟುಕೊಂಡು ನಾನು ಇನ್ನೂ ಹೆಚ್ಚಿನ ಸಂಶೋಧನೆ ಮಾಡಿ ಬರೆದಿರುವ ಲೇಖನ ಕರ್ನಾಟಕ ಇತಿಹಾಸ ಅಕಾಡೆಮಿಯು ಹೊರತರುತ್ತಿರುವ ಇತಿಹಾಸ ದರ್ಶನ ೧೯ನೇ ಸಂಚಿಕೆಯಲ್ಲಿ ಪ್ರಕಟಗೊಂಡಿದೆ. ಕ್ರಿ.ಶ. ೧೭೬೮ರಲ್ಲಿ ನಾಸಿರ್ ಜಂಗನ ಆಕ್ರಮಣಕ್ಕೆ ತುತ್ತಾದ ಈ ದೇವಾಲಯದ ಕೇಶವ ಮೂರ್ತಿ ಭಗ್ನವಾಗಿದ್ದು, ಅದರ ಬದಲಿಗೆ ಗುಬ್ಬಿ ಹೊಸಳ್ಳಿಯಲ್ಲಿದ್ದ ಈಗಿನ ಕೇಶವ ಮೂರ್ತಿಯನ್ನೆ ಹೈದರಾಲಿಯ ಕಾಲದಲ್ಲಿ ಕೈದಾಳಕ್ಕೆ ತಂದು ಪ್ರತಿಷ್ಠಾಪಿಸಲಾಯಿತು ಎಂಬುದಕ್ಕೆ ದಾಖಲೆಗಳಿವೆ. ಇದು ಗೂಳಿಬಾಚಿದೇವನ ಕಾಲದಲ್ಲಿ ನಿರ್ಮಿಸಿ ಪ್ರತಿಷ್ಠಾಪಿಸಿದ ಶಿಲ್ಪ ಅಲ್ಲ, ಅದೇ ಕಾಲದಲ್ಲಿ ಬೇರೊಬ್ಬರು ನಿರ್ಮಾಣಮಾಡಿದ್ದ ಶಿಲ್ಪವಾಗಿದೆ ಎಂದು ಸ್ಪಷ್ಟಪಡಿಸಬಹುದು.

ತುಮಕೂರು **ಡಾ॥ ಡಿ. ಎನ್. ಯೋಗೀಶ್ವರಪ್ಪ**

## ಪ್ರತಿಕ್ರಿಯೆ

ನವೆಂಬರ್ ೨೦೧೦ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ, ರುಕ್ಮಿಣಿಮಾಲಾ ಅವರ ಹಲವು ಸಂದೇಶ ಗಳನ್ನು ಹೊತ್ತ ಪುಟ್ಟ ಲೇಖನಕ್ಕೇ ನನ್ನ ತುಂಟ ಪ್ರತಿಕ್ರಿಯೆ. ಬೆಳಗಾಗುತ್ತಲೇ ಸೋಮಾರಿಕಟ್ಟೆಯ ಮೇಲೆ ಬೀಡಿ ಕಚ್ಚುತ್ತಾ ಊರ ಉಸಾಬರಿ ಹರಟೆಯಲ್ಲಿ ತೊಡಗಿರುವ ಗಂಡಸರನ್ನು ಮನೆಯ ಜವಾಬ್ದಾರಿಗೆ ಎಳೆಯಲು ಹಿರಿಯರು ಮಾಡಿರುವ 'ಶಾಸ್ತ್ರ' ಇದು. ಅದಲ್ಲದೇ ಬಾಳೆಗೊನೆ ಕೀಳುವಾಗ ಸ್ವಲ್ಪ ಎಚ್ಚರಿಕೆ ತಪ್ಪಿದರೂ ಬಟ್ಟೆಯ ಮೇಲೆ ಅಳಿಸಲಾಗದ ಕಟ್ಟ ಕಲೆಗಳು ಮೂಡಿಬಿಡುತ್ತವೆ. ಇದೂ ಕೂಡ ಹಿರಿಯರು ಮಾಡಿರುವ 'ಶಾಸ್ತ್ರ'ಕ್ಕೆ ಕಾರಣವಿರಬಹುದು.

ಮೈಸೂರು **ಬಿ. ಎಸ್. ಮಯೂರ**

ಸದಾ ಹೊಸದನ್ನೇ ಬಯಸುತ್ತಿರುವ 'ಹೊಸತು' ಮುಖಪುಟಗಳು ಸೂಜಿಗಲ್ಲಿನಂತೆ ಸೆಳೆಯುತ್ತದೆ. ಯಕ್ಷಗಾನದ ಚಿತ್ರ ಕಣ್ಮನ ಸೆಳೆಯಿತು. ಸಂಪಾದಕೀಯ ದಲ್ಲಿ ಪ್ರಚಲಿತ ವಿದ್ಯಾಮಾನಗಳೊಂದಿಗೆ ಮೈದುಂಬಿ ಕೊಂಡು ಬಂದಿದೆ. ಚಿಂತನೀಯವಾಗಿರುವ ಸಂಪಾದಕೀಯ ಲೇಖನಗಳನ್ನು ಮೊದಲು ಓದಿ ಮುಗಿಸುತ್ತೇನೆ. ಪಂಚಾಯತ್ ರಾಜ್ ಸಂಸ್ಥೆಗಳ ವಿಕಾಸ ಮತ್ತು ಅವುಗಳ ಹಣಕಾಸು ಇವುಗಳ ಬಗ್ಗೆ ಕೆ. ಆರ್. ಭೋಗೇಶ್ವರಪ್ಪ ಅವರು ಬರೆದಿರುವ ಲೇಖನ ಮಾಹಿತಿದಾಯಕ. ಡಾ॥ ಪುಟ್ಟರಾಜ ಗವಯಿಯವರ ಬಗ್ಗೆ ಬೆಳಕು ಚೆಲ್ಲಿದ ಲೇಖನ ಧೀಮಂತ ಪ್ರತಿಭೆಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿತ್ತು. ಇವರ ಸಾಧನೆ ಇತರರಿಗೆ ಮಾದರಿಯಾಗಲಿ. ನವಕರ್ನಾಟಕ ಪಬ್ಲಿಕೇಷನ್ಸ್ ಈ ಬಾರಿಯೂ ವಿಶ್ವಕಥಾಕೋಶ ಎಂಬ ದೊಡ್ಡ ಸಾಹಸಕ್ಕೆ ಕೈ ಹಾಕಿರುವುದು ಹೆಮ್ಮೆಯ ಸಂಗತಿ. ಸಾಹಿತ್ಯ ಒದಿಗೆ 'ಹೊಸತು' ಸದಾ ಜ್ಞಾನದೀವಿಗೆಯಾಗಿದೆ.

ಮೈಸೂರು **ಕಾಳೀಹುಂಡಿ ಶಿವಕುಮಾರ್**




ನವೆಂಬರ್ ೨೦೧೦ರ 'ಹೊಸತು'ವಿನಲ್ಲಿ ಪ್ರಕಟವಾದ ಕೆ. ಎಸ್. ಪಾರ್ಥಸಾರಥಿ ಅವರ ಲೇಖನ ತುಂಬ ಅದ್ಭುತವಾಗಿದೆ. ಜಾಗತಿಕ ಚಿಂತನಕ್ಕೊಂದು ಸ್ಫೂರ್ತಿಯಾಗಿದೆ. ಜಿಡಿಪಿ ಕುರಿತು ಜಾಗತಿಕ ಮಟ್ಟದ ವಿಚಾರಸಂಕಿರಣ ದೇಶ-ದೇಶಗಳ ನಾಡು-ನಾಡು (ರಾಜ್ಯ)ಗಳಲ್ಲಿ ನಡೆಯಬೇಕು. ಇದರಲ್ಲಿ ಮುಖ್ಯವಾಗಿ ಸಂಸತ್ ಸದಸ್ಯರು ಮತ್ತು ವಿಧಾನಸಭಾ ಸದಸ್ಯರು ವೇದಿಕೆಯ ಎದುರು ಉಪಸ್ಥಿತರಿರಬೇಕು. ಇವರ ಮಧ್ಯಸ್ಥಿಕೆಯಲ್ಲಿ ಒಂದು ಸಂವಾದ ನಡೆಯ ಬೇಕು. ಜಗತ್ತಿನ ಶ್ರೇಷ್ಠ ಚಿಂತಕರು, ಅರ್ಥಶಾಸ್ತ್ರಜ್ಞರು, ಭೌಗೋಳಿಕ ಪರಿಣತರು ರಾಷ್ಟ್ರಭಕ್ತಿ - ನಿಷ್ಠೆವುಳ್ಳ ಜಿಜ್ಞಾಸುಗಳು ಉಪನ್ಯಾಸ ನೀಡಬೇಕು. ಭಾರತವು ತನ್ನ ನಿಸರ್ಗ ಸಂಪತ್ತನ್ನು ತನ್ನ ಧನಮದಾಂಧತೆಯಲ್ಲಿ ಕಳೆದುಕೊಳ್ಳುತ್ತಿದೆ. ಪರಿತಪಿಸುವ ಕಾಲ ಬರುವ ಮುನ್ನ ನಾವು ಎಚ್ಚರಾಗಬೇಕಾಗಿದೆ. ಈ ದಿಸೆಯಲ್ಲಿ ಭಾರತದಲ್ಲಿ ಸೃಜನಶೀಲರು ಅಡುಗೆಮನೆ ಬಿಟ್ಟು ಇಂಥ ವಿಷಯಗಳನ್ನು ವಸ್ತುವನ್ನಾಗಿಸಿಕೊಂಡು ಬರೆದು ಹೊಸ ಪೀಳಿಗೆಯಲ್ಲಿ ಮತ್ತು ಜನಸಾಮಾನ್ಯರಲ್ಲಿ ಪ್ರಾತ್ಯಕ್ಷಿಕತೆಯನ್ನು ತುಂಬಬೇಕು. ಇಂಥ ರಚನಾತ್ಮಕ ಸಾಹಿತ್ಯದಿಂದ ಪ್ರಕೃತಿ ಮತ್ತು ನಿಸರ್ಗಸಂಪತ್ತನ್ನು ಕಾಯ್ದುಕೊಂಡು ದೋಚುವ ರಾಷ್ಟ್ರಗಳಿಗೆ ಮತ್ತು ದೇಶ ದ್ರೋಹಗಳಿಗೆ ಬಿಸಿ ಮುಟ್ಟಿಸಬೇಕು. ಸೃಜನಶೀಲ ಸಾಹಿತ್ಯದ ರೂವಾರಿಗಳ ಅಂತರಂಗ ಜ್ಞಾನಕ್ಕೆ ನಿಸರ್ಗದ ಸಂಪತ್ತು ಉಸಿರಾಟವನ್ನು ತೋರೆಯಬೇಕು. ಕೆ. ಎಸ್. ಪಾರ್ಥಸಾರಥಿಯವರಂಥ ಶ್ರೇಷ್ಠ ವಿದ್ವಾಂಸರು ಇಂಥ ಕಾರ್ಯಗಳಿಗೆ ಪ್ರೇರಕ ಶಕ್ತಿಯಾಗಬೇಕು. ಗಣಿಗಾರಿಕೆ ಯಿಂದ ರಾಷ್ಟ್ರದ ಸಂಪತ್ತು ಹಾಳಾಗುತ್ತಿರುವುದನ್ನು ತಪ್ಪಿಸಬೇಕು. ಅನ್ಯ ರಾಷ್ಟ್ರಗಳ ಬುದ್ಧಿವಂತಿಕೆ ಮತ್ತು ರಾಷ್ಟ್ರ ಪ್ರಜ್ಞೆ ನಮ್ಮನ್ನು ಜಾಗೃತಗೊಳಿಸಲು ಸಾಧ್ಯವಾದೀತು ಎಂಬುದು ನನ್ನ ವಿಚಾರವಾಗಿದೆ. ಉತ್ತಮ ಲೇಖನ ಬರೆದ ರಾಷ್ಟ್ರಪ್ರೇಮಿ ಚಿಂತಕರಿಗೆ ಧನ್ಯವಾದಗಳು.

ಜಮಖಂಡಿ **ಅರ್ಜುನ ಕೋರಟಕರ**

ರುಕ್ಮಿಣಿಮಾಲಾ ಅವರ 'ಹೆಂಗಸರು ಬಾಳೆಗಿಡ ಕಡಿಯ ಬಾರದೇ?' ಲೇಖನ ಕುತೂಹಲ ಹುಟ್ಟಿಸಿ ಓದಿಕೊಂಡು ಹೋದರೂ ಹೆಚ್ಚಿನ ವಿಚಾರ ಮನದಟ್ಟಾಗಲಿಲ್ಲ. ಅದು ಕೇವಲ ಮೂಢನಂಬಿಕೆಯಷ್ಟೆ ಎಂದೆನಿಸಿತು. ಹೆಂಗಸರು ಕಡಿಯಬಾರದೆಂಬುವುದಕ್ಕೆ ಮತ್ತಾವುದೋ ಕಾರಣವಿದ್ದರೂ ಇರಬಹುದಲ್ಲವೇ? ಎತ್ತರದ ಬಾಳೆಯಿಂದ ಭಾರವಾದ ಗೊನೆಯನ್ನು ಕಡಿದು ಇಳಿಸುವಾಗ ಆಗಿರುವ ಆಯಾಸವನ್ನು ಮನದಲ್ಲಿಟ್ಟುಕೊಂಡು ಈ ರೀತಿಯ ಕಟ್ಟುಪಾಡನ್ನು ವಿಧಿಸಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ಇನ್ನು 'ಮಾಹಿತಿ ಇಷ್ಟೊಂದು ದುಬಾರಿಯೇ' ಎಂಬ ಲೇಖನದಲ್ಲಿ ವೈ. ಜಿ. ಮುರಳೀಧರ ಅವರು ಪ್ರಾಮಾಣಿಕ ಅಧಿಕಾರಿ ಸಹಿತ ಚತುರ್ವೇದಿಯವರು ಹೇಗೆ ಅಧಿಕಾರ ಹಿಡಿದವರ ಕೈಯಲ್ಲಿ ನಲುಗಿದ್ದಾರೆ ಎಂಬುದನ್ನು ಎಳೆಎಳೆಯಾಗಿ ಬಿಡಿಸಿಟ್ಟಿದ್ದಾರೆ. 'ಖಂಡಿತವಾದಿ ಲೋಕವಿರೋಧಿ' ಎಂಬುದು ಕಟು ಸತ್ಯ. ಸರ್ಕಾರ ತನ್ನ ಪ್ರಜೆಗಳಿಗೆ ಸವಲತ್ತನ್ನು ಕೊಡುತ್ತೇನೆಂದು ಕಾಯಿದೆಗಳನ್ನು ಮಾಡಿದರೂ, ಅದರ ಲಾಭ ಪಡೆಯಲು ಅನೇಕ ಕಸರತ್ತುಗಳನ್ನು ಮಾಡಬೇಕಾಗಿದೆ.

ತೇಜಸ್ವಿ ಅವರು ನಾಗೇಶರೊಂದಿಗೆ ಆಡಿದ ಮಾತುಗಳೂ ಎಷ್ಟು ಸಹಜ! ರಾ. ಪ್ರಕಾಶ್ ಅರಸು ಅವರ 'ನಾಗೇಶನ ನೆನಪುಗಳು' ನಾಗೇಶರ ಚಿತ್ರಕ್ಕೆ ಹಾಕಿದ ಒಂದು ಸುಂದರ ಚೌಕಟ್ಟು!!

ವಿವೇಕಾನಂದರ ವ್ಯಂಗ್ಯಚಿತ್ರ "ಅಲ್ನೋಡಿ ಸಾರ್..." ಎಷ್ಟು ಅರ್ಥಪೂರ್ಣ! ಲಂಪಟರೂ, ದಗಾಕೋರರೆಲ್ಲ ಗಾಂಧೀಜಿ ಉಡುಗೆಯ ಮರೆಯಲ್ಲಿದ್ದುಕೊಂಡು ಮಾಡುತ್ತಿರುವ ಹೊಲಸು ಕೆಲಸಗಳಿಂದಾಗಿ ಮತದಾರರು ರೋಸಿಹೋಗಿದ್ದಾರೆ.

ಕಡೆಯ ಪುಟವೇಕೋ ಚಿತ್ರಸಂಪುಟವಿಲ್ಲದೇ ಬಿಕೋ ಎನಿಸುತ್ತಿತ್ತು!!!

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಈ ತಿಂಗಳು (೩ನೇ ಪುಟದಿಂದ)

ನೇಮಕಾತಿ ಮೂಲಕ ಅನುಕೂಲ ಮಾಡಿಕೊಟ್ಟಿದೆ. ಈ ನಿಗಮ ಮಂಡಲಿಗಳಲ್ಲಿ ಕರ್ನಾಟಕ ಬಾಲವಿಕಾಸ ಅಕಾಡೆಮಿ, ಕ್ರೀಡಾ ಪ್ರಾಧಿಕಾರಗಳೂ ಸೇರಿವೆ. ಮಕ್ಕಳ ಕ್ಷೇತ್ರದಲ್ಲಿ ಹಲವಾರು ವರ್ಷ ದುಡಿದು, ಮಕ್ಕಳಿಗಾಗಿ ಒಂದು ಅಕಾಡೆಮಿ ಮಾಡಬೇಕೆಂದು ಹೋರಾಟ ಮಾಡಿ ಯಶಸ್ವಿಯಾಗಿದ್ದ ಶ್ರೀ ಶಂಕರ ಹಲಗತ್ತಿಯವರನ್ನು ಅವರ ಅವಧಿ ಮುಗಿಯುವ ಮೊದಲೇ ಬಾಲವಿಕಾಸ ಅಕಾಡೆಮಿಯ ಅಧ್ಯಕ್ಷ ಸ್ಥಾನದಿಂದ ತೆಗೆದುಹಾಕಿ ಆ ಸ್ಥಾನಕ್ಕೆ ಬಿಜೆಪಿಯ ಧಾರವಾಡ ಜಿಲ್ಲಾ ಅಧ್ಯಕ್ಷರನ್ನು ನೇಮಿಸಲಾಗಿದೆ. ಇಲ್ಲಿ ಆಯಾ ಕ್ಷೇತ್ರಗಳ ಪರಿಣತಿಗಿಂತ ರಾಜಕೀಯ ಉದ್ದೇಶಗಳೇ ಪ್ರಮುಖವಾಗಿವೆ. ಇದು ಈ ನಿಗಮ ಮಂಡಲಿಗಳ ಉದ್ದೇಶಗಳಿಗೆ ತದ್ವಿರುದ್ಧವಾದುದು. ಇದೇ ರೀತಿ ಕರ್ನಾಟಕ ಕ್ರೀಡಾ ಪ್ರಾಧಿಕಾರ. ಅಲ್ಲಿಯೂ ಸಹ ರಾಜಕೀಯ ನೇಮಕಾತಿಯೇ ನಡೆದಿರುವುದರಿಂದ ಯಾವ ಕ್ರೀಡೆ ಅಭಿವೃದ್ಧಿಯಾಗಲು ಸಾಧ್ಯ ? ಇಂಥ ಕಾರಣಗಳಿಂದಲೇ ಇಂದು ಏಷಿಯನ್ ಗೇಮ್ಸ್‌ನಲ್ಲಿ ನಮ್ಮ ದೇಶದ ಪದಕಪಟ್ಟಿ ಪಾತಾಳ ತಲುಪಿರುವುದು. ದಕ್ಷಿಣ ಕೊರಿಯಾ, ಜಪಾನ್‌ಗಳಂಥ ಪುಟ್ಟ ರಾಷ್ಟ್ರಗಳು ಗಳಿಸಿದ ಪದಕಗಳ ಸಂಖ್ಯೆ ಮೂರಂಕಿಗೆ ಹೋದರೆ ಜನಸಂಖ್ಯೆ, ವಿಸ್ತಾರದಲ್ಲಿ ಅವುಗಳಿಗಿಂತ ನೂರುಪಟ್ಟು ಹೆಚ್ಚಿರುವ ನಮ್ಮ ಪದಕ ಸಂಖ್ಯೆ ಕೇವಲ ಹದಿನಾರು. ಇನ್ನೊಂದೆರಡು ಬರಬಹುದೇನೋ. ಚೀನಾ ೧೯೯ ಚಿನ್ನದ ಪದಕ ಗಳಿಸಿದರೆ ನಾವು ಗಳಿಸಿದ್ದು ಈ ತನಕ ಕೇವಲ ಆರು. ನಿಗಮ, ಮಂಡಲಿ, ಪ್ರಾಧಿಕಾರ ಎಲ್ಲ ರಾಜಕೀಯ ಹಿತಾಸಕ್ತಿಗೆ ಬಲಿಯಾದರೆ ಅವುಗಳ ಫಲಿತಾಂಶವೂ ಅಷ್ಟೆ.

*   *   *

'ಔಟ್‌ಲುಕ್' ಪತ್ರಿಕೆ ಪ್ರಕಟಿಸಿದಂತೆ ಭ್ರಷ್ಟಾಚಾರದಲ್ಲಿ ದೇಶದಲ್ಲಿಯೇ ನಂ. ೧ ಸ್ಥಾನ ಪಡೆದ ''ಕೀರ್ತಿ'' ಕರ್ನಾಟಕದ್ದು. ಅದನ್ನು ದಾಖಲೆ ಸಮೇತ ಸಾಬೀತುಪಡಿಸಲು ಸಿದ್ಧರಾಗಿದ್ದಾರೆ ನಮ್ಮ ಸನ್ಮಾನ್ಯ ಮುಖ್ಯಮಂತ್ರಿ ಯಡಿಯೂರಪ್ಪನವರು. ಇತ್ತೀಚೆಗೆ ರಾಜಕಾರಣಿಗಳ ಮಕ್ಕಳೇ ಯುವರಾಜರಾಗಿ ರಾಜಕೀಯ ರಂಗಪ್ರವೇಶಿಸುತ್ತಿರುವುದು ಸಾಮಾನ್ಯವಾಗಿದೆ. ಎಡಪಕ್ಷಗಳನ್ನು ಹೊರತುಪಡಿಸಿದರೆ ಎಲ್ಲ ಪಕ್ಷಗಳಲ್ಲೂ ಇದು ಸಾಮಾನ್ಯ ಸಂಗತಿ. ಆಯಾ ಪಕ್ಷಗಳ ಕಾರ್ಯಕರ್ತರಿಗೆ ಇದು ಅನ್ಯಾಯವೆಂತಲೂ ಅನಿಸುತ್ತಿಲ್ಲ. ಭ್ರಷ್ಟಾಚಾರದ ವಿಷಯಕ್ಕೆ ಬಂದರೆ ಒಬ್ಬ ರಾಜಕಾರಣಿ ಆಡಳಿತಕ್ಕೆ ಬಂದ ತಕ್ಷಣ ಅವನ ಹೆಂಡತಿ, ಮಕ್ಕಳು, ಅಳಿಯಂದಿರು, ಹೆಂಡತಿಯ ಅಣ್ಣ ತಮ್ಮಂದಿರು ಹೀಗೆ ದೊಡ್ಡ ಪಡೆಯೇ ಅಧಿಕಾರ ದುರುಪಯೋಗ ಪಡಿಸಿಕೊಂಡು ಹಣ, ಆಸ್ತಿ ದೋಚಲು ಸಿದ್ಧವಾಗುತ್ತದೆ. ನಮ್ಮ ರಾಜ್ಯದ ಮುಖ್ಯಮಂತ್ರಿ ಯಡಿಯೂರಪ್ಪ ಹಾಗೂ ಅವರ ಮಂತ್ರಿಮಂಡಲದ ಬಹುತೇಕ ಸದಸ್ಯರು ಸಕುಟುಂಬ ಪರಿವಾರ ಸಮೇತ ದೋಚಿದ ಆಸ್ತಿ ಪ್ರಕರಣಗಳು ಧಾರಾವಾಹಿಯಂತೆ ಹೊರಬರುತ್ತಿವೆ. ಈಗ ನಮ್ಮ ಮುಖ್ಯಮಂತ್ರಿಗಳು ಹೊಸ ವರಸೆ ಪ್ರಾರಂಭಿಸಿದ್ದಾರೆ. ಅದೇನೆಂದರೆ, ''ನಾನೊಬ್ಬನೇ ಆಸ್ತಿಮಾಡಿದವನಲ್ಲ, ಹಿಂದೆ ಆಡಳಿತ ಮಾಡಿದ ಕಾಂಗ್ರೆಸ್, ಜೆಡಿಎಸ್‌ನವರೂ ಆಸ್ತಿ ಮಾಡಿದ್ದಾರೆ'' ಎಂದು. ಇದರರ್ಥ ಆಡಳಿತ ಹಾಗೂ ವಿರೋಧ ಪಕ್ಷಗಳೆಲ್ಲರೂ ಈ ಆಸ್ತಿ ಕಬಳಿಕೆ, ಅಕ್ರಮ ಸಂಪತ್ತಿನ ಗಳಿಕೆಯಲ್ಲಿ ಸ್ಪರ್ಧೆಗಿಳಿದಿದ್ದಾರೆ. ''ನನ್ನ ಅಕ್ರಮಗಳನ್ನು ಬಹಿರಂಗ ಮಾಡಿದರೆ ನಿಮ್ಮದನ್ನೂ ಬಹಿರಂಗ ಮಾಡುವೆ'' ಎಂದು ಹೇಳುವುದರ ಮೂಲಕ ನೀವೂ ಸುಮ್ಮನಿರಿ ನಾನೂ ಸುಮ್ಮನಿರುತ್ತೇನೆ ಎಂಬುದು ಇದರ ಹಿಂದಿನ ನೀತಿ. ಈ ಕೆಟ್ಟ ರಾಜಕೀಯ ದೊಂಬರಾಟದಲ್ಲಿ ಸಾಮಾನ್ಯ ಜನರ ಮೂಲ ಸಮಸ್ಯೆಗಳು ಮರೆಮಾಚಿವೆ. ಕಳೆದ ವರ್ಷ ಇಡೀ ಉತ್ತರ ಕರ್ನಾಟಕದಲ್ಲಿ ಪ್ರವಾಹಕ್ಕೆ ಬಲಿಯಾಗಿ ನೆಲೆ ಕಳೆದುಕೊಂಡವರು ಇನ್ನೂ ಬೀದಿ ಬದಿಯಲ್ಲೇ ಬದುಕು ಸಾಗಿಸುತ್ತಿದ್ದಾರೆ. ಒಂದು ಕಡೆ ಸರಕಾರ ಹೈಟೆಕ್ ಆಸ್ಪತ್ರೆಗಳನ್ನು ಆರಂಭಿಸುತ್ತಿರುವಾಗಲೇ ಬಳ್ಳಾರಿ ಜಿಲ್ಲೆಯ ಗ್ರಾಮೀಣ ಭಾಗದಲ್ಲಿ ಜನತೆ ನಿಗೂಢ ಕಾಯಿಲೆಗೆ ಬಲಿಯಾಗಿ ಗ್ರಾಮಗಳನ್ನೇ ತೊರೆಯುತ್ತಿದ್ದಾರೆ. ಈಗಾಗಲೇ ಜ್ವರದ ಬಾಧೆಯಿಂದ ೪೦ಕ್ಕೂ ಹೆಚ್ಚು ಜನ ಮೃತರಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ರೆಡ್ಡಿ – ಶ್ರೀರಾಮುಲು ಪಡೆ ಬೇರೆ ಪಕ್ಷದವರನ್ನು 'ಆಪರೇಶನ್ ಕಮಲ'ದ ಮೂಲಕ ಕೋಟ್ಯಂತರ ದುಡ್ಡು ಸುರಿದು ಖರೀದಿಸಲು ತೋರಿಸಿದ ಆಸಕ್ತಿಯನ್ನು ಬಡಪಾಯಿ ಜನರ ಸಾವುಗಳನ್ನು ನಿಲ್ಲಿಸಲು ತೋರಿಸುತ್ತಿಲ್ಲ. ಮುಖ್ಯಮಂತ್ರಿಗಳು ಸೀರೆ ಭಾಗ್ಯ ಕರುಣಿಸಲು ಜಿಲ್ಲೆಗಳಿಗೆ ಭೇಟಿ ನೀಡುತ್ತಿದ್ದಾರೆ. ಸೀರೆ ಖರೀದಿಯಲ್ಲಿಯೂ ಭ್ರಷ್ಟಾಚಾರದ ಕಮಟು ವಾಸನೆ. ರೈತರು ಬತ್ತಕ್ಕೆ, ಕಬ್ಬಿಗೆ, ಮೆಕ್ಕೆಜೋಳಕ್ಕೆ ವೈಜ್ಞಾನಿಕ ಬೆಲೆ ನಿಗದಿ ಮಾಡಿ ಎಂದು ಹೋರಾಡುತ್ತಿದ್ದಾರೆ. ರೈತರ ಬೆಳೆಗೆ ಸರಿಯಾದ ಬೆಲೆ ಕೊಟ್ಟರೆ ಅವರೇ ತಮ್ಮ ಹೆಂಡತಿ ಮಕ್ಕಳಿಗೆ ಸೀರೆ ಕೊಡಿಸುವ ಶಕ್ತಿ ಪಡೆಯುತ್ತಾರೆ. ಅದು ಯಡಿಯೂರಪ್ಪನವರಿಗೆ ಬೇಕಾಗಿಲ್ಲ. ಅವರಿಗೆ ಬೇಕಾಗಿರುವುದು 'ಭಾಗ್ಯಲಕ್ಷ್ಮಿ' ಹೆಸರಿನಲ್ಲಿ, ಸರಕಾರದ ದುಡ್ಡಿನಲ್ಲಿ ಪುಕ್ಕಟೆ ಪ್ರಚಾರ, ಮುಂಬರುವ ಜಿಲ್ಲಾ, ತಾಲೂಕು ಪಂಚಾಯಿತಿಗಳಲ್ಲಿ ಚುನಾವಣಾ ಲಾಭ. ವಿರೋಧ ಪಕ್ಷಗಳಾದ ಕಾಂಗ್ರೆಸ್ – ದಳದವರು 'ಭಾಗ್ಯಲಕ್ಷ್ಮಿ' ಸೀರೆ ಹಂಚುವ ಸ್ಥಳದಲ್ಲಿ ಪ್ರತಿಭಟನೆ ನಡೆಸುವುದನ್ನು ಬಿಟ್ಟು ನೆರೆ ಪರಿಹಾರ ಸಿಗದೆ ನೊಂದಿರುವ ಜನರನ್ನು, ನಿಗೂಢ ಜ್ವರದಿಂದ ಸಾಯುತ್ತಿರುವ ಪ್ರದೇಶದ ತಮ್ಮ ತಮ್ಮ ಪ್ರಜೆಗಳನ್ನು, ತಮ್ಮ ಕಸುಬನ್ನೇ ಕಳೆದುಕೊಳ್ಳುವ ಭೀತಿಯಲ್ಲಿರುವ ಲಕ್ಷಾಂತರ ಕೈಮಗ್ಗದ ನೇಕಾರರನ್ನು, ಬೆಳೆದ ಬೆಳೆಗೆ ನ್ಯಾಯಯುತ ಬೆಲೆ ಸಿಗದೆ ಬೀದಿಗೆ ಬಿದ್ದ ರೈತರನ್ನು ಸಂಘಟಿಸಿ ಹೋರಾಟಕ್ಕಿಳಿಸಿದರೆ ಒಂದು ರೀತಿಯ ಬದಲಾವಣೆಯಾದರೂ ಬಂದೀತು. ಆದರೆ ಅವರಾರಿಗೂ ಇದು ಬೇಕಿಲ್ಲ. ಇನ್ನು ಕೆಲವೇ ದಿನಗಳಲ್ಲಿ ಜಿಲ್ಲಾ ಪಂಚಾಯತ್ ಚುನಾವಣೆ ಘೋಷಣೆಯಾದರೆ ಈ ಎಲ್ಲ ಸಮಸ್ಯೆಗಳು ಮಾಮೂಲಿನಂತೆ ಯಾವುದೇ ಪರಿಹಾರ ಕಾಣದೆ ಬದಿಗೆ ಸರಿದು ಹೊಸ ಕೆಸರೆರಚಾಟದ ಪರ್ಯಾಯ ಪ್ರಾರಂಭವಾಗುತ್ತದೆ, ಅಷ್ಟೆ.

ಈ ಡಿಸೆಂಬರ್ ೨೦೧೦ರ ಸಂಚಿಕೆ ಓದುಗರ ಕೈಸೇರುವ ಹೊತ್ತಿಗೆ ರಾಜ್ಯದ ರಾಜಕೀಯದಲ್ಲಿ ಏನೇನು ಬದಲಾವಣೆಗಳಾಗುತ್ತವೆಯೋ ಏನೋ !

*   *   *

ಈ ಸಲ ಪಾರ್ಲಿಮೆಂಟಿನ ಚಳಿಗಾಲದ ಅಧಿವೇಶನ ಸರಕಾರವನ್ನು ಅಕ್ಷರಶಃ ಗಡಗಡ ನಡುಗಿಸುತ್ತಿದೆ. ಸುತ್ತಿಕೊಂಡಿರುವ ಹಗರಣಗಳು ಕಾಂಗ್ರೆಸ್ ಪಕ್ಷಕ್ಕೆ, ಪ್ರಧಾನಿ ಮನಮೋಹನ ಸಿಂಗ್‌ಗೆ ಬಿಸಿತುಪ್ಪವಾಗಿವೆ. ನುಂಗಲೂ ಆಗದೆ ಉಗುಳಲೂ ಆಗದೆ ಪರದಾಡುವಂತೆ ಮಾಡಿವೆ. ನುಂಗಣ್ಣ ಸಚಿವ ರಾಜ, ಕಾಮನ್‌ವೆಲ್ತ್ ಕ್ರೀಡೆಯ ಕಲ್ಮಾಡಿ ಇಬ್ಬರೂ ಸದ್ಯಕ್ಕೆ ಬಚಾವು, ನಿರಾಳ. ಉಸಿರುಕಟ್ಟುತ್ತಿರುವುದು ಮೌನಧಾರಿ ಪ್ರಧಾನಿಗೆ. ಬಾಯಿಬಿಟ್ಟರೆ ಬಣ್ಣಗೇಡು – ಆದರೆ ಎಷ್ಟು ದಿನ ಈ ವ್ರತ ! ಸಮ್ಮಿಶ್ರ ಸರಕಾರದ ಗೋಜಲುಗಳು ಹತ್ತಾರು, ಧರ್ಮ ಸಂಕಟ, ಬಾಯಿ ಕಟ್ಟಿ ಹಾಕಿಬಿಡುತ್ತೆ. ಎನ್‌ಡಿಎ ಸರಕಾರದ ಸಾರಥ್ಯ ವಹಿಸಿದ್ದ ಭಾಜಪದ ವಾಜಪೇಯಿ ಇಂಥ ಸನ್ನಿವೇಶಗಳನ್ನು ಅನುಭವಿಸಿದ್ದನ್ನು ನೆನಪಿಸಿಕೊಳ್ಳಬಹುದು. ಗುಜರಾತ್ ಕರ್ಮಕಾಂಡವನ್ನು ಖಂಡಿಸಲೂ ಆಗದೆ, ಸಮರ್ಥಿಸಲೂ ಆಗದೆ ರಾಜಧರ್ಮ ಬೋಧನೆ ಮಾಡಿ ನುಣುಚಿಕೊಂಡು ಚಾಣಾಕ್ಷತನ ಮೆರೆದರು. ಮೊದಲ ಸಲ ಕಾಂಗ್ರೆಸ್ ಸಮ್ಮಿಶ್ರ ಸರಕಾರ – ಯುಪಿಎ-೧ ಸ್ಥಾಪಿಸಿದಾಗ ಎಡಪಕ್ಷಗಳು ಹೊರಗಿನಿಂದ ಬೆಂಬಲ ನೀಡಿದ್ದುವು. ಅವುಗಳ ಒತ್ತಾಯದ ಮೇಲೆ ಅಂಗೀಕರಿಸಿದ ಕನಿಷ್ಠ ಕಾರ್ಯಕ್ರಮ ಕಾಂಗ್ರೆಸ್ಸಿಗೆ ಇರಸುಮುರಸಾಗಿತ್ತು. ಅದಕ್ಕೇ ಕೊನೆಯಲ್ಲಿ ಎಡಪಕ್ಷಗಳನ್ನು ಕೊಡವಿಕೊಂಡಿತು. ಈಗ ಯುಪಿಎ-೨ 'ಕಿಚಡಿ' ಭಾಗಿಗಳೆಲ್ಲ ಸ್ವತಂತ್ರರು. ಷರ್ಲಾಕನಂತೆ ಒಬ್ಬೊಬ್ಬರೂ ತಮ್ಮ ಪಾಲನ್ನು ತೆಗೆದುಕೊಂಡಿದ್ದಾರೆ. ದ್ರಾವಿಡ ಕಳಗಂನ ನಾಯಕ ವಯೋವೃದ್ಧ ಕರುಣಾನಿಧಿ ಒಳ್ಳೆಯ ದಲ್ಲಾಳಿ. ಪಟ್ಟುಹಿಡಿದು ಗಿಟ್ಟಿಸಿಕೊಂಡಿದ್ದಾರೆ ತಮಗೆ ಬೇಕಾದ್ದನ್ನು. ಇವರನ್ನು ಕೈಬಿಡುವುದು ಸುಲಭವಲ್ಲ. ಯಾವ ಕಡೆ ವಾಲಿದರೂ ಸಿಕ್ಕಿಬೀಳುವುದು ಖಚಿತ. ಈಗ ಅಪವಿತ್ರ ಮೈತ್ರಿಯ ಕಷ್ಟ ಅನುಭವಿಸುತ್ತಿರುವುದು ಕಾಂಗ್ರೆಸ್. ಇದರಿಂದ ಪಾರಾಗಲು ಇವರು ಇನ್ನೇನು ಸರ್ಕಸ್ ಮಾಡುತ್ತಾರೋ ನೋಡೋಣ.

ಅನ್ಯಾಯ, ಅಕ್ರಮಗಳನ್ನು ವಿರೋಧಿಸುವವರನ್ನು, ಬಯಲಿಗೆಳೆಯುವವರನ್ನು ಬಗ್ಗು ಬಡಿಯುವ ಕ್ರಮ ಹಿಂದಿನಿಂದಲೂ ಬಂದದ್ದು. ಅಧಿಕಾರಸ್ಥರಿಗೆ, ಬಲಾಢ್ಯರಿಗೆ ಎದುರಾಳಿಗಳನ್ನು ಮುಗಿಸಲು, ಸೊಲ್ಲಡಗಿಸಲು ಮಾರ್ಗ ಹಲವು. ಬೆದರಿಕೆ ಹಾಕುವುದು, ಆಮಿಷ ಒಡ್ಡುವುದು, ಹಿಂಸೆ ಮಾಡುವುದು, ಕೊಲೆ ಮಾಡುವುದು ಮಾಮೂಲಿ. ತಮ್ಮ ಗುಟ್ಟು ಬಯಲಾಗದಿರಲಿ ಎಂದು ಸರಕಾರಗಳು ಸಾಕಷ್ಟು ಭದ್ರಕೋಟೆಯನ್ನು ನಿರ್ಮಿಸಿಕೊಂಡಿರುತ್ತವೆ. ಬಹುಪಾಲು ದಸ್ತಾವೇಜುಗಳು 'ರಹಸ್ಯ'ದ ಹಣೆಪಟ್ಟಿ ಹಚ್ಚಿಕೊಂಡಿರುತ್ತವೆ. ಸಚಿವರುಗಳು ಪ್ರಮಾಣವಚನ ತೆಗೆದುಕೊಳ್ಳುವುದೇ ರಹಸ್ಯ ಕಾಪಾಡಲು ಅಲ್ಲವೆ. ನಮ್ಮ ದೇಶದಲ್ಲಿ ಮಾಹಿತಿ ಹಕ್ಕು ಕಾಯಿದೆ ಜಾರಿಗೆ ಬಂದ ಐದು ವರ್ಷಗಳಲ್ಲಿ, ಈ ಕಾಯಿದೆಯಡಿ ಭ್ರಷ್ಟಾಚಾರವನ್ನು ಧೈರ್ಯವಾಗಿ ಹೊರಗೆಡಹಿದ ಹತ್ತಾರು ಮಂದಿ ಕೊಲೆಯಾಗಿದ್ದಾರೆ.

*   *   *

ಅಮೆರಿಕಾದ ಸಿಐಎ ಗೂಢಚಾರಿ ಸಂಸ್ಥೆ ಈ ವಿದ್ಯೆಯಲ್ಲಿ ಪಾರಂಗತ. ಅದರ ಕಬಂಧಬಾಹು ಅಂತರರಾಷ್ಟ್ರೀಯ ವ್ಯಾಪ್ತಿಯದು. ಎಲ್ಲಂದರಲ್ಲಿ ತನ್ನ ದೇಶಕ್ಕೆ ಅಪಥ್ಯವಾಗಿರುವವನನ್ನು ಹಾರಿಸಿಬಿಡುವುದರಲ್ಲಿ ಆ ಸಂಸ್ಥೆ ಪಾರಂಗತ. ಸರಕಾರದ ಅಧಿಪತಿಗಳನ್ನು ಕೊಲೆಗೈಯ್ಯಲೂ ಅದು ಹಿಂಜರಿದಿಲ್ಲ. ಆ ವಿಷಯ ಬೇರೆ. ಅದು ದೊಡ್ಡ ಪುರಾಣ. ಈಗ ವಿಷಯಕ್ಕೆ ಬರೋಣ. ಇದು ತುಂಬಾ ಈಚೆಗೆ ನಡೆದದ್ದು. ವಿಕಿಲೀಕ್ಸ್ ವೆಬ್‌ಸೈಟ್ ನೀವು ಕೇಳಿರಬಹುದು. ಇದರ ಸಾರಥಿ ಜೂಲಿಯನ್ ಅಸ್ಸಾಂಜ್. ಈತ ವ್ಯವಹರಿಸುತ್ತಿದ್ದುದು ಸ್ವೀಡನ್ನಿನಿಂದ. ಇರಾಕ್, ಅಫ್ಘಾನಿಸ್ತಾನಗಳಲ್ಲಿ ನಡೆಯುತ್ತಿರುವ ಹಿಂಸಾಪ್ರಕರಣ ಕುರಿತ ರಹಸ್ಯ ಮಿಲಿಟರಿ ದಾಖಲೆಗಳನ್ನು ಈತ ತನ್ನ ವೆಬ್‌ಸೈಟ್‌ನಲ್ಲಿ ಹೊರಗೆಡವಿದ್ದಾನೆ. ಇದರಿಂದ ಪೆಂಟಗನ್‌ಗೆ ಕೆಂಡಾಮಂಡಲದ ಕೋಪ. ಅಮೆರಿಕಾ ಸರಕಾರಕ್ಕೆ ಪೇಚು. ಈತನ ಸೊಲ್ಲಡಗಿಸಲು ಸ್ವೀಡಿಷ್ ಸರಕಾರದ ಮೇಲೆ ಅಮೆರಿಕಾ ಒತ್ತಡ ತರುತ್ತಿತ್ತು. ಅದಕ್ಕೆ ಮಣಿದ ಸರಕಾರ ಆತನಿಗೆ ವಲಸೆಗಾರನಾಗಿ ಮುಂದುವರಿಯುವ ಅವಕಾಶ ನಿರಾಕರಿಸಿತು. ಸಿಐಎ ಈತನ ಮೇಲೆ ನಿಗಾ ಇರಿಸಿಯೇ ಇದೆ. ಈಗ ಮತ್ತಷ್ಟು ಒತ್ತಡ ತಂದುದರ ಪರಿಣಾಮವಾಗಿ ಸ್ವೀಡಿಷ್ ಸರಕಾರ ಆತನ ಮೇಲೆ ರೇಪ್ ಹಾಗೂ ಲೈಂಗಿಕ ಕಿರುಕುಳದ ಆಪಾದನೆ ಹೊರಿಸಿ ಮೊಕದ್ದಮೆ ದಾಖಲಿಸಿದೆ. ಅಷ್ಟೇ ಅಲ್ಲ, ಆತನ ಬಂಧನಕ್ಕೂ ಆಜ್ಞೆ ಹೊರಡಿಸಿದೆ. ಹೇಗಿದೆ ನೋಡಿ ವರಸೆ. ●







# ಮಂದಿರ–ಮಸೀದಿ ನ್ಯಾಯಾಲಯದ ತೀರ್ಪು

ವೈಯಕ್ತಿಕ ನೆಲೆಯಲ್ಲೇ ಆಗಲಿ ಅಥವಾ ಸಾಮಾಜಿಕ ನೆಲೆಯಲ್ಲೇ ಆಗಲಿ, ಯಾವುದೇ ಸಮಸ್ಯೆ ಎದುರಾದಾಗ, ತೀರ್ಮಾನ ಕೈಗೊಳ್ಳುವುದು ಜರೂರಾದಾಗ, ಅನಿವಾರ್ಯವಾದಾಗ ನಾವು ಕೆಲವು ಪ್ರಶ್ನೆಗಳನ್ನು ಹಾಕಿಕೊಳ್ಳಬೇಕು. ಇದರ ಪರಿಹಾರ ಏಕೆ ಆಗಬೇಕು, ನಮ್ಮ ಯಾವ ಹಿತಾಸಕ್ತಿಗಾಗಿ ಇದರ ಪರಿಹಾರ ಅಗತ್ಯ, ನಮ್ಮ ಹಿತಾಸಕ್ತಿಯ ಮೇಲೆ ಅದರಿಂದಾಗುವ ಪರಿಣಾಮ ಏನು, ಎಂಬುದರ ತಿಳುವಳಿಕೆ ಮೊದಲಿಗೆ ಇರಬೇಕು. ಅದು ಸ್ಪಷ್ಟವಾದರೆ ಮಾತ್ರ ಅದಕ್ಕೆ ಪೂರಕವಾದ ಪರಿಹಾರದ ಮಾರ್ಗವನ್ನು ಹಿಡಿಯುವುದು ಇಲ್ಲವೇ ಅದಕ್ಕೆ ಆಘಾತಕಾರಿಯಾದ ಮಾರ್ಗವನ್ನು ಕೈಬಿಡುವುದು ಸುಲಭವಾಗುತ್ತದೆ. ಪೂರ್ವಗ್ರಹಪೀಡಿತರಾಗಿ, ಲೋಭ, ಕ್ರೋಧ, ಮದ ಮಾತ್ಸರ್ಯಾದಿ ಅತೀವ ಭಾವುಕತೆಯಲ್ಲಿ ಚಿಂತಿಸತೊಡಗಿದರೆ ದೂರದೃಷ್ಟಿ ಮಸುಕಾಗಿ, ತಪ್ಪು ಕಲ್ಪನೆಗಳಿಗೂ, ತೀವ್ರವಾಗಿ ನಮ್ಮನ್ನೇ ಬಂಧಿಸುವ ತೀರ್ಮಾನಗಳಿಗೂ, ಅವಸರದ ನಿಲುವುಗಳಿಗೂ, ಅತಾರ್ಕಿಕ ಕ್ರಿಯೆಗೂ ಮುಂದಾಗುತ್ತೇವೆ. ಸಮಚಿತ್ತದಿಂದ, ಆವೇಶವಿಲ್ಲದೆ, ಬೌದ್ಧಿಕವಾಗಿ ಚಿಂತಿಸಿದರೆ ಪರಿಹಾರ ಸರಳವಾಗಿ ದಕ್ಕಿಬಿಡುವುದುಂಟು. ನಮ್ಮ ನಾಡಿನಲ್ಲಿ ಸುದೀರ್ಘವೇ ಎನ್ನುವಷ್ಟು ಕಾಲದಿಂದ ನಮ್ಮನ್ನು ಬಂಧಿಸುತ್ತಿರುವ ಸಮಸ್ಯೆಯಲ್ಲದ ಸಮಸ್ಯೆ ಅಯೋಧ್ಯೆಯಲ್ಲಿನ ಬಾಬರಿ ಮಸೀದಿ ಪ್ರಕರಣ. ಈಗಾಗಲೆ ಅಲಹಾಬಾದಿನ ಉಚ್ಚ ನ್ಯಾಯಾಲಯ ಈ ಬಗ್ಗೆ ತೀರ್ಪು ನೀಡಿದೆ. ಇದನ್ನು ಹಲವರು ಪರಿಹಾರದ ಮಾರ್ಗಸೂಚಿ ಎಂಬಂತೆ ಸ್ವೀಕರಿಸಿದರೆ, "ಸೂಜಿ ಮೊನೆಯಷ್ಟನ್ನೂ ನೀಡೆವು" ಎನ್ನುತ್ತ ಕೌರವ ಸಂತತಿಯ ವಾರಸುದಾರರು ಉಚ್ಚತಮ ನ್ಯಾಯಾಲಯಕ್ಕೆ ಮೊರೆಹೋಗುವೆವು ಎಂದಿದ್ದಾರೆ. ಇದನ್ನು ಹಿಂದೂಗಳನ್ನು ಪ್ರತಿನಿಧಿಸುತ್ತೇವೆ ಎನ್ನುವವರು ಒಪ್ಪಿಕೊಳ್ಳುವುದು ಎಂದರೆ, ಕೊನೆಯ ಪಕ್ಷ ಮುಸ್ಲಿಮರು ತಮಗೆ ಉಳಿದ ಭಾಗದಲ್ಲಿ ಮಸೀದಿಯನ್ನು ಕಟ್ಟಿಕೊಳ್ಳ ಬಹುದು ಎಂದು ಒಪ್ಪಿಕೊಳ್ಳಬೇಕು. ಹಾಗಾದಾಗ ಮುಸ್ಲಿಮರು ತೀರ್ಮಾನವನ್ನು ಸ್ವೀಕರಿಸಬಹುದಿತ್ತು ಎನ್ನುವ ಸೂಚನೆಗಳಿವೆ. ಹಾಗೆಯೇ ಮುಸ್ಲಿಂ ಸಮುದಾಯವನ್ನು ಬಾಧಿಸುವ ಮತ್ತೊಂದು ವಿಷಯವೆಂದರೆ, ಈ ತೀರ್ಮಾನವನ್ನೇ ಮುಂದಿಟ್ಟು, ಕಾಶಿ, ಮಥುರಾ ಮುಂತಾದ ಕಡೆಗಳಲ್ಲೆಲ್ಲಾ ಇದೇ ರೀತಿ ಭಾಗ ಮಾಡಿ ಎಂದು ಗಲಾಟೆ ಎಬ್ಬಿಸಬಹುದು ಎಂಬುದು. ಹಾಗೇನೂ ಆಗುವುದಿಲ್ಲ, ಕಾರಣ ಈಗಾಗಲೇ ೧೯೯೧ರಲ್ಲಿ ಭಾರತ ಸರ್ಕಾರ ಒಂದು ಕಾನೂನು ಮಾಡಿದೆ, ಅದರಂತೆ ಆಗಸ್ಟ್ ೧೫, ೧೯೪೭ರಲ್ಲಿ ದೇವಸ್ಥಾನಗಳು, ಪೂಜಾ ಸ್ಥಳಗಳು, ಸ್ಮಾರಕಗಳು ಮುಂತಾದುವು ಹೇಗೆ ಇದ್ದುವೋ ಅದೇ ಸ್ಥಿತಿಯಲ್ಲಿ ಮುಂದುವರಿಯುತ್ತವೆ, ಅವುಗಳನ್ನು ಯಾವುದೇ ರೀತಿಯಲ್ಲಿ ಬದಲಾಯಿಸಲಾಗದು ಎಂಬ ಭರವಸೆಯನ್ನು ಒಳಗೊಂಡಿದೆ ಈ ಕಾನೂನು. ಆಗಲೇ ನ್ಯಾಯಾಲಯದಲ್ಲಿ ಮೊಕದ್ದಮೆಯಾಗಿ ತೀರ್ಮಾನವಾಗದೆ ಇದ್ದ ಬಾಬರಿ ಮಸೀದಿಯನ್ನು ಮಾತ್ರ ಈ ಕಾನೂನಿಂದ ಹೊರಗಿಡಲಾಯ್ತು. ಆ ಕಾನೂನು ಆಗುತ್ತಿದ್ದಂತೆಯೇ ಅರಕ್ಷಿತವಾಗಿದ್ದ ಮಸೀದಿಯೊಳಗೆ ಹಿಂದೂ ಪಂಥದವರು ಕಾನೂನಿಗೆ ವಿರೋಧವಾಗಿ ಒಳನುಗ್ಗಿ,

**ಕೆ. ಎಸ್. ಪಾರ್ಥಸಾರಥಿ**

ಕೇಂದ್ರ ಗುಮ್ಮಟದ ಕೆಳಗೆ ರಾಮಲಲ್ಲನನ್ನು ಪ್ರತಿಷ್ಠಾಪಿಸಿದರು. ಪುನಃ ನ್ಯಾಯಾಲಯದ ಆಜ್ಞೆಯ ಮೇರೆಗೆ ಮಸೀದಿಗೆ ಬೀಗ ಹಾಕಿಸಿ, ರಕ್ಷಣೆ ನೀಡಲಾಯಿತು. ಎಂಭತ್ತರ ದಶಕದಲ್ಲಿ ಜಿಲ್ಲಾ ನ್ಯಾಯಾಧೀಶರ ಬಳಿ ಮೊರೆಹೋದ ಹಿಂದೂ ಪಂಗಡಕ್ಕೆ ಬಾಗಿಲು ತೆಗೆಸಿ ಪೂಜೆ ನಡೆಸಲು ಅನುಮತಿ ದೊರೆಯಿತು. ರಾಮಲಲ್ಲನನ್ನು ಕೂರಿಸಿದ್ದು ತಪ್ಪು ಎಂದು ಮುಸ್ಲಿಂ ಪಂಗಡ ಕೋರ್ಟಿನ ಮುಂದೆ ೧೯೪೯ರಲ್ಲೇ ಹೋಗಲಿಲ್ಲ. ಎರಡು ದಶಕಗಳಷ್ಟು ತಡವಾಗಿ ಮೊರೆ ಹೋದಾಗ, ಆ ಸಂಗತಿ ನಡೆದು ತುಂಬ ದಿನ ಆಯ್ತು, ನಿಮ್ಮ ಮೊರೆ ತೀರ ತಡವಾಯ್ತು, ಆದ್ದರಿಂದ ಈಗೇನೂ ಮಾಡುವಂತಿಲ್ಲ ಎಂದಿತು ನ್ಯಾಯಾಲಯ. ಪೂಜೆಗೆ ಅನುಮತಿ ದೊರೆತದ್ದು ಸಾಲದೆಂಬಂತೆ ಅಲ್ಲಿ ದೇವಸ್ಥಾನ ನಿರ್ಮಿಸುವ ದಿಶೆಯಲ್ಲಿ ರಾಜಕೀಯ ನಡೆಸಿದ ಹಿಂದುತ್ವವಾದಿ ಪಕ್ಷ ೧೯೯೧ರಲ್ಲಿ ಮುತ್ತಿಗೆ ಹಾಕಿ ಮಸೀದಿಯನ್ನೇ ಕೆಡವಿತು. ೧೮೫೦ರ ದಶಕದಲ್ಲಿ ಈ ಕುರಿತು ಒಂದಿಷ್ಟು ಹಿಂದೂ ಮುಸ್ಲಿಂ ಘರ್ಷಣೆಗಳು ನಡೆದಿದ್ದು, ನ್ಯಾಯಾಲಯ ೧೮೮೦ರ ದಶಕದಲ್ಲಿ ಒಂದು ತೀರ್ಮಾನ ನೀಡಿತ್ತು. ಅದು ಮಸೀದಿಯನ್ನು ಜನ್ಮಭೂಮಿಯ ಮೇಲೆ ನಿರ್ಮಿಸಲಾಗಿದೆ ಎಂಬ ಹಿಂದುತ್ವವಾದಿಗಳ ವಾದವನ್ನು ತಳ್ಳಿಹಾಕಿತ್ತು. ಅದು ಹೇಳಿದ್ದೇನು ? ಅಯೋಧ್ಯೆ ಎಂಬ ಊರಿನಲ್ಲಿ ರಾಮ ಜನ್ಮಭೂಮಿ ಎಲ್ಲಿ ಇದೆ ಎಂಬ ತಡಕಾಟ ಬಹಳ ಕಾಲದಿಂದ ನಡೆಯುತ್ತಿದ್ದು, ಆದರೂ ಈ ಮಸೀದಿ ನಿರ್ಮಿಸಿ ಹಲವು ಶತಮಾನಗಳೇ ಆಗಿದ್ದು ಈಗ ಸಮಯ ಮೀರಿರುವುದರಿಂದ ಇವುಗಳ ಕುರಿತ ವಿಚಾರಣೆ ನಡೆಸಲಾಗದು ಎಂದು ಹೇಳಿತ್ತು. ಬ್ರಿಟಿಷರು ಒಡೆದು ಆಳುವ ಮಾರ್ಗವಾಗಿ ಹಿಂದು-ಮುಸ್ಲಿಂ

ಭೇದವನ್ನು ವೃದ್ಧಿಪಡಿಸುವ ನೀತಿಯನ್ನು ಪ್ರಾರಂಭಿಸಿದ ಮೇಲೆ ಮೂವತ್ತರ ದಶಕದಲ್ಲಿ ಈ ಕುರಿತು ಆ ಪ್ರದೇಶದಲ್ಲಿ ಕೋಮುಗಲಭೆ ನಡೆದಿದ್ದು ಮತ್ತೊಂದು ಸಂಗತಿ. ಆದರೆ ಇಂದಿನ ನ್ಯಾಯಾಲಯ ಸಮಯ ಮೀರಿದ ಇತಿಹಾಸದ ಸಂಗತಿಗಳ ಮೇಲೆ, ಅವರೇ ಮುಜುಗರದಿಂದ ಹೇಳಿಕೊಂಡಂತೆ, ಸಮಸ್ಯೆಗೆ ಒಂದು ಪರಿಹಾರವನ್ನು ಹೇಳುವ ಒತ್ತಾಯಕ್ಕೆ ಒಳಗಾಗಿ (ಏಕೆಂದರೆ ನ್ಯಾಯಾಲಯದ ಹೊರಗೆ ಇಬ್ಬರೂ ಕುಳಿತು, ಚರ್ಚೆಯಿಂದ ಒಮ್ಮತಕ್ಕೆ ಬರಲಾಗದಿದ್ದರಿಂದ) ತೀರ್ಮಾನ ಕೊಡುವ ಸಾಹಸ ಮಾಡಿದೆ. ಕಾನೂನು ವಿರೋಧವಾಗಿ ರಾಮಲಲ್ಲನನ್ನು ಪ್ರತಿಷ್ಠಾಪಿಸಿದ್ದು ಈಗ ಗೌಣವಾಗುತ್ತದೆ. ಮಸೀದಿಯನ್ನು ಎರಡು ದಶಕಗಳಷ್ಟು ಹಿಂದೆ ಉರುಳಿಸಿದ್ದು ಗೌಣವೆಂಬಂತೆ ಕಾಣುತ್ತದೆ. ಮೂರೂ ಪಕ್ಷಗಳು ದಾವೆಯಲ್ಲಿವೆ. ಮೂರು ಸಮಭಾಗವೆ? ನಾಲ್ಕು ಪಕ್ಷಗಳಿದಿದ್ದರೆ ನಾಲ್ಕಾಗುತ್ತಿತ್ತೆ? ನಿರ್ಮೋಹಿ ಅಕಾಡದಂತೆ ೧೮ ಅಕಾಡಗಳಿವೆ. ಅವರಲ್ಲಿ ಮೊದಲಿಗೆ ಮತ್ತೊಬ್ಬರು ದಾವೆ ಹಾಕಿದ್ದರು, ನಂತರ, ಬಹುಶಃ ವಕೀಲರೊಡನೆ ಚರ್ಚಿಸಿ ಅವರು ಹಿಂತೆಗೆದುಕೊಂಡುದು ಬೇರೆ ಸಂಗತಿ. ಒಂದೇ ಮುಸ್ಲಿಂ, ಒಂದೇ ಹಿಂದೂ ಪಂಗಡ ದಾವೆ ಹೂಡಿದ್ದರೆ, ಇಬ್ಭಾಗ ಮಾಡುತ್ತಿದ್ದರೆ? ಅಥವಾ ದೇಶದ ಪ್ರಜಾಸಂಖ್ಯೆಯಲ್ಲಿ ಯಾರದು ಎಷ್ಟು ಎಂಬ ವಾದ ಸೃಷ್ಟಿಯಾಗುತ್ತಿತ್ತೆ?

ಈ ತೀರ್ಪನ್ನು ಇಬ್ಬರೂ ಸಮಾಧಾನದಿಂದ ಒಪ್ಪಿಕೊಂಡು, ಮತ್ತಾವುದೇ ಹೊಸ ಪ್ರಕರಣಗಳನ್ನು ತರುವುದಿಲ್ಲ ಎಂದು ಈ ಮೂರೂ ಪಕ್ಷಗಳು ನ್ಯಾಯಾಲಯಕ್ಕೆ ಮುಚ್ಚಳಿಕೆ ಬರೆದುಕೊಟ್ಟರೆ, ನಮ್ಮದೇನೂ ಅಭ್ಯಂತರವಿಲ್ಲ. ಮಸೀದಿ, ದೇವಸ್ಥಾನಗಳು ಶತಮಾನಗಳಷ್ಟು ಕಾಲದಿಂದ ಸಹಬಾಳ್ವೆ ಮಾಡುತ್ತ ಬರುತ್ತಿರುವುದು ನಮ್ಮ ಪರಂಪರೆ. ಅವೇಕೆ ಹಾಗೆ ಉಂಟಾದುವು ಎಂಬುದು ಕಾಲಧರ್ಮದಿಂದ ಗೌಣ. ಹಾಗಾಗಿ ಇಲ್ಲಿ ಮಸೀದಿ ಮತ್ತು ದೇವಸ್ಥಾನ ಎರಡನ್ನೂ ಜನತೆ ಒಟ್ಟಾಗಿ ಕಟ್ಟಿದರೆ ಅದು ನಮಗೆ ಸುದಿನ. ಮುರಿದ ಮಸೀದಿಯನ್ನು ಮರುನಿರ್ಮಾಣ ಮಾಡುತ್ತೇವೆ ಎಂದು ಕೇಂದ್ರ ಸರ್ಕಾರ ೧೯೯೨ರಲ್ಲೇ ಆಶ್ವಾಸನೆ ನೀಡಿದೆ ಎಂಬುದನ್ನು ನಾವು ಮರೆಯುವಂತಿಲ್ಲ.

**ಮಸೀದಿಯ ಕೆಳಗೊಂದು ದೇವಸ್ಥಾನ ಇತ್ತೆಂಬುದು ಸುದ್ದಿಯೇ ಅಲ್ಲ**

ನಮ್ಮ ಇತಿಹಾಸವು ಇಂಥ ಕೃತ್ಯಗಳಿಂದ ತುಂಬಿಹೋಗಿದೆ. ಇದು ವಿಶಿಷ್ಟವಾದುದೇನೂ ಅಲ್ಲ. ಬೆಂಗಳೂರಿನ ಅಭಿವೃದ್ಧಿ ಪ್ರಾಧಿಕಾರ ಅಭಿವೃದ್ಧಿಪಡಿಸಿದ ಜಯನಗರದ ಒಂದು, ಎರಡನೆಯ ಬ್ಲಾಕಿನಲ್ಲಿ ಹೂಳುವ ಸ್ಮಶಾನವಿತ್ತು. ಈಗ ಅಲ್ಲೆಲ್ಲಾ ಮನೆಗಳಿವೆ. ಅಲ್ಲಿ ಅಗೆದರೆ ಮೂಳೆಗಳು ಸಿಗುತ್ತವೆ. ಅದೇ ನಾಲ್ಕನೇ ಬ್ಲಾಕಿನ ಬಸ್‌ಸ್ಟಾಂಡಿನ ಹಿಂದೆ ಮುಸ್ಲಿಮರ ಪ್ರಾರ್ಥನಾ ಸ್ಥಳವಿದೆ. ಅವರು ಅದನ್ನು ಬಸ್‌ಸ್ಟ್ಯಾಂಡ್ ವಿಸ್ತರಣೆಗೆ ಬಿಟ್ಟುಕೊಡಲು ಸಿದ್ಧರಿಲ್ಲ. ಲಂಡನ್ನಿನಲ್ಲಿ ಹೂಳಲು ಸ್ಥಳವೇ ಸಾಲದೆ, ಕ್ರಿಶ್ಚಿಯನ್ನರೂ ಈಗ ಸುಡಲು ಪ್ರಾರಂಭಿಸಿದ್ದಾರೆ. ಚಿತಾಭಸ್ಮವನ್ನೇ ಸಣ್ಣ ಪೆಟ್ಟಿಗೆಯಲ್ಲಿಟ್ಟು, ಜಡ್ಜ್‌ಮೆಂಟ್ ಡೇ ವರೆಗೆ ಕಾಪಾಡಲು ಪ್ರಯತ್ನಿಸಿದ್ದಾರೆ. ಸ್ಮಶಾನದಲ್ಲಿ ಅಗೆದು, ಮೂಳೆ-ರುಂಡಮುಂಡಗಳನ್ನು ಮಾರತೊಡಗಿದ್ದಾರೆ. ಇದು ಆಗಿರುವ ಬದಲಾವಣೆಯ ಒಂದು ನೋಟ. ಚಾರಿತ್ರಿಕವಾಗಿ ಪರಸ್ಪರ ಕದನದಲ್ಲಿ ಸೈನಿಕರನ್ನು ಕೊಲ್ಲುವುದೇ ಅಲ್ಲದೆ, ವಿರೋಧಿಗಳು ಯಾವುದನ್ನು ಪವಿತ್ರವೆಂದು ಪರಿಗಣಿಸುವರೋ ಅದನ್ನು ನಾಶಪಡಿಸುವುದು, ಅವರನ್ನು ಬಲವಂತವಾಗಿ ಮತಾಂತರಗೊಳಿಸುವುದು, ಇವೆಲ್ಲ ಒಂದು ಯುದ್ಧತಂತ್ರ. ತನ್ಮೂಲಕ ಶತ್ರು ದೇಶದ ಪ್ರಜಾಸಮೂಹವನ್ನು ಮಾನಸಿಕವಾಗಿ ಬಾಧಿಸಿ, ಅವರನ್ನು ನಿರ್ವೀರ್ಯಗೊಳಿಸುವುದು ಅಂದಿಗೆ ರೀತಿ ಸಾಮಾನ್ಯವಾಗಿತ್ತು. ಅವರ ದೇವಸ್ಥಾನಗಳು, ಮಂದಿರ, ಮಸೀದಿಗಳು, ಶಾಲೆ, ಪುಸ್ತಕ ಭಂಡಾರಗಳು, ಪಶುಗಳನ್ನು ನಾಶಪಡಿಸಿ ಮುಖ್ಯವಾಗಿ ಹೆಂಗಸರನ್ನು ಬಾಧಿಸುವುದು, ಅಂದಿನ ಕ್ರಮ. ಚಾಲುಕ್ಯರ ವೈಭವವನ್ನು ನೆನೆದಾಗ, ಅವರ ರಾಜಧಾನಿ, ಶಿಲ್ಪ, ಕಟ್ಟಡಗಳು ಯಾರದೇ ಮೆಚ್ಚುಗೆಯನ್ನು ಗಳಿಸುವಂಥವು. ಆದರೆ ಪಲ್ಲವರಿಗೆ ಹಾಗೆನಿಸಲಿಲ್ಲ. ಅವರು ಅದನ್ನೆಲ್ಲ ನೆಲಸಮ ಮಾಡಿದಾಗಲೆ ಅವರ ವಿಜಯ ಸಂಪೂರ್ಣ. ಬುದ್ಧರ ವಿರುದ್ಧ ಹಿಂದೂಗಳು ನಡೆಸಿದ ಹೋರಾಟಗಳಲ್ಲಿ, ಅವರ ದೇವಸ್ಥಾನಗಳನ್ನು ಆಕ್ರಮಿಸಿ, ಅಲ್ಲಿ ಹಿಂದೂ ದೇವತೆಗಳನ್ನು ಪ್ರತಿಷ್ಠಾಪಿಸುವುದು ಮುಖ್ಯವಾಗಿತ್ತು. ಕಂಚಿಯ ಸಾವಿರ ದೇವಸ್ಥಾನಗಳಲ್ಲಿ ಅವೆಷ್ಟು ಜೈನರದೋ! ಪುರಿಯ ಜಗನ್ನಾಥ, ಅವನ ಒಂಬತ್ತನೆಯ ಅವತಾರ ಬುದ್ಧನನ್ನು ಖಾಲಿ ಮಾಡಿಸಿ ಇರಿಸಿದ್ದು, ಬದರಿ, ಕಾಶಿಗಳಲ್ಲಿ ಶಂಕರರು

**ಸುದ್ದಿ ಚಿತ್ರ**



**೨೦೧೦ 'ಸೈನ್ಸ್ ಆನರ್ ಅಂಡ್ ಟ್ರೂತ್' ಅಂತರರಾಷ್ಟ್ರೀಯ ವೈಜ್ಞಾನಿಕ ಪ್ರಶಸ್ತಿ ಪುರಸ್ಕೃತ ತೂಪ್ಪಿಲ್ ವೆಂಕಟೇಶ್ ಅವರಿಗೆ ಅಭಿನಂದನಾ ಸಮಾರಂಭ.**

**ಚಿತ್ರದಲ್ಲಿ ಎಡದಿಂದ : ಶ್ರೀ ಕೆ. ಎಸ್. ಪಾರ್ಥಸಾರಥಿ, ಶ್ರೀ ಆರ್. ಎಸ್. ರಾಜಾರಾಮ್, ಡಾ॥ ಟಿ. ಎಲ್. ಆಂಜನಪ್ಪ, ಡಾ॥ ತೂಪ್ಪಿಲ್ ವೆಂಕಟೇಶ್, ಡಾ॥ ತೂಪ್ಪಿಲ್ ವೆಂಕಟೇಶ್ ಅವರ ತಾಯಿ ಶ್ರೀಮತಿ ಲಕ್ಷ್ಮಿ ಸುಂದರರಾಜನ್, ಡಾ॥ ವಸುಂಧರಾ ಭೂಪತಿ, ಡಾ॥ ಟಿ. ವಿ. ರಾಮಚಂದ್ರ.**

## ಚರ್ಚಿನ ಕಟ್ಟಡ – ಹಿಂದೂಗಳ ದೇವರುಗಳು !

ಅಮೆರಿಕಾ ಸಂಯುಕ್ತ ಸಂಸ್ಥಾನ ನಮಗೆ ಇಂದು ಮೆಚ್ಚುಗೆಯ ಮಾದರಿ ಅಲ್ಲವೆ! ಅಲ್ಲಿಯ ಒಂದು ಸಂಗತಿ. ಅವರ ಸಂವಿಧಾನದಂತೆ ಮತಧರ್ಮ ಸಂಸ್ಥೆಗಳಿಗೆ ಸರ್ಕಾರ ಏನೂ ನೆರವು ನೀಡುವಂತಿಲ್ಲ. ಪ್ರತಿಯೊಂದು ಬಡಾವಣೆಯ ಸಿವಿಕ್ ಕೌನ್ಸಿಲ್‌ನಲ್ಲೂ ಮತಧರ್ಮ ಸಂಸ್ಥೆಗಳಿಗೆ ಅಂದರೆ ಚರ್ಚ್, ಮಸೀದಿ, ದೇವಸ್ಥಾನಗಳಿಗೆ ನಿವೇಶನ ನೀಡಿರುತ್ತಾರೆ, ಜನಸಂಖ್ಯೆಯನ್ನಾಧರಿಸಿ, ಅಲ್ಲಿಯ ಚರ್ಚುಗಳು ಅವರ ಭಕ್ತರ ಕೊಡುಗೆಯ ಮೇಲೆ ಬದುಕಿವೆ. ಇತ್ತೀಚೆಗೆ ಚರ್ಚಿಗೆ ಬರುವವರ ಸಂಖ್ಯೆ ಶೇಕಡ ೬೦ರಷ್ಟು ಕಡಿಮೆಯಾಗಿಬಿಟ್ಟಿದೆ – ಕಾಲಮಹಿಮೆಯೋ ಏನೋ. ಹಾಗಾಗಿ ಚರ್ಚುಗಳನ್ನು ನಿರ್ವಹಿಸಲಾರದೆ ಮುಚ್ಚುತ್ತಿದ್ದಾರೆ. ಅಂಥ ಮುಚ್ಚಿದ ಕೆಲವು ಕಟ್ಟಡಗಳನ್ನು ಹೊಸದಾಗಿ ಹೋಗಿ ನೆಲಸುತ್ತಿರುವ ಹಿಂದೂಗಳಿಗೆ ದೇವಸ್ಥಾನ ಕಟ್ಟಿಕೊಳ್ಳಲು ನಿವೇಶನ ನೀಡಿದ್ದಾರೆ. ಕಟ್ಟಡದ ರೂಪುರೇಷೆಯೆಲ್ಲ ಚರ್ಚಿನದು. ಅವನ್ನು ಬದಲಾಯಿಸುವಂತಿಲ್ಲ. ಈಗ ಅಲ್ಲಿ ಹಿಂದೂ ದೇವತೆಗಳನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿ ಜಾತಿಗೊಂದು ದೇವಸ್ಥಾನವಿರುವ ಹಿಂದೂಗಳು ಅಲ್ಲಿ ಒಂದೇ ದೇವಸ್ಥಾನದಲ್ಲಿ ಎಲ್ಲರ ದೇವರನ್ನು ಇಟ್ಟಿದ್ದಾರೆ. ಬಂದವರ ಜಾತಿ ಕೇಳುವುದಿಲ್ಲ. ಅದೇಕೆ ಭಾರತದಲ್ಲೇ ಇರುವ ಹಿಂದೂಗಳು ಈ ವ್ಯತ್ಯಾಸವನ್ನು ಇನ್ನೂ ಒಪ್ಪಿಕೊಳ್ಳುವುದಿಲ್ಲ? ಪರಿವರ್ತನೆ ಎಂದರೆ ಏನು? ಯಾರು ಅದನ್ನು ಉಂಟುಮಾಡಿದರು? ಚಿಂತಿಸಿ. ಅಮೆರಿಕಾದ ಮುಸ್ಲಿಮರು ಇತ್ತೀಚಿನ ಭಯೋತ್ಪಾದನೆ ಎಂಬ ರಾಜಕೀಯದಿಂದ ಪ್ರೇರೇಪಿತರಾಗುವವರೆಗೆ, ಹೆಣ್ಣು ಗಂಡು ವೇಷಭೂಷಣದ ಸಮಸ್ಯೆ ಇಲ್ಲದೆ ತಮ್ಮ ಸುತ್ತಮುತ್ತಲ ಪರಿಸರಕ್ಕೆ ಹೊಂದಿಕೊಂಡಿದ್ದರು. ಅಮೆರಿಕಾದಂತೆಯೇ ನಮ್ಮದೂ ಒಂದು ಪ್ರಜಾಪ್ರಭುತ್ವ ವ್ಯವಸ್ಥೆ. ನಮ್ಮಲ್ಲಿನ ಇತರ ಧರ್ಮೀಯರು ನಮ್ಮೊಡನೆ ಸಮಾನವಾಗಿ ಇರುವಂತೆ ಪರಿಸರ ಸೃಷ್ಟಿಸುವುದು ಹಿಂದೂಗಳ ಕರ್ತವ್ಯ ಅಲ್ಲವೇ? ಒಂದು ಸಮುದಾಯ ಯಾವಾಗಲೂ ಹಿಂಜರಿಕೆಯ, ಭಯಗ್ರಸ್ತ, ಆಕ್ರಮಣಕ್ಕೆ ಒಳಗಾದವರಂತೆ ಬದುಕಲು ಸಾಧ್ಯವೆ? ಅವರಿಗೆ ದಂಗೆ ಏಳಬೇಕೆಂದೆನಿಸಿದರೆ ಅದರಲ್ಲಿ ತಪ್ಪು ಎಲ್ಲಿಯದು? ನಾವು ಒಂದು ನಿಜವಾದ ಪ್ರಜಾಪ್ರಭುತ್ವವಾಗಿ ಬೆಳೆಯದಿದ್ದರೆ ನಮ್ಮ ರಾಷ್ಟ್ರ ಉಳಿಯಬಲ್ಲುದೆ? ರಾಷ್ಟ್ರ ಹಾಳಾಗಲು ಹೊರಗಿನ ಶತ್ರುಗಳು ಬೇಕಿಲ್ಲ. ಈ ದೃಷ್ಟಿಯಲ್ಲಿ ಚಿಂತಿಸಿದರೆ ಗೋಹತ್ಯೆಯ ವಿಷಯ, ಕಂಚಿ ದೇವಸ್ಥಾನದ ಆನೆಯ ಪೃಷ್ಠದ ಮೇಲೆ ಯಾವ ನಾಮ ಇರಬೇಕು ಮುಂತಾದ ಸಮಸ್ಯೆಗಳು ನ್ಯಾಯಾಲಯದ ಕಟ್ಟೆ ಹತ್ತುವುದು ಎಷ್ಟು ತಿಳಿಗೇಡಿತನ ಎಂದು ತಿಳಿದೀತು. ಅದಕ್ಕಿಂತ ವಿಪತ್ಕಾರಿಯಾದ ಬೆಳವಣಿಗೆ ಎಂದರೆ ವಿದೇಶೀಯರು ನಮ್ಮ ಮಾರುಕಟ್ಟೆಯನ್ನು ಕಬಳಿಸುತ್ತಿರುವುದು ಎಂಬುದು ತಿಳಿಯುತ್ತದೆ.

ಬುದ್ಧನ ಮೂರ್ತಿಯನ್ನು ಕಂಡು, ನಮಸ್ಕರಿಸಿ, ವಿಷ್ಣುವಿನ ಅವತಾರವೆಂದು ಸಾರಿದರು. ಅಹಲ್ಯಾಬಾಯಿಯೂ ಕೇವಲ ಐದು ಶತಮಾನಗಳ ಹಿಂದೆ ಬುದ್ಧನನ್ನು ಕಂಡಿದ್ದಳು. ಆದರೆ ಇಂದು ಅಲ್ಲಿರುವುದು ಕೇವಲ ಒಂದು ಒಡೆದ ಶಿಲೆ. ಅದರ ಮೇಲೆ ಪ್ರತಿದಿನ ವಿಷ್ಣುವಿನ ಮೂರ್ತಿಯನ್ನು ಇಟ್ಟು ಅಲಂಕರಿಸುತ್ತಾರೆ. ಗಯೆಯ ವಿಷ್ಣುಪಾದವೂ ಬುದ್ಧನ ಮೂರ್ತಿಯನ್ನು ಕೊಚ್ಚಿದ ಮೇಲಿನ ಪಳೆಯುಳಿಕೆ. ಹೀಗೆ ಪಟ್ಟಿ ಮಾಡುತ್ತಲೇ ಹೋಗಬಹುದು. ದಕ್ಷಿಣದಲ್ಲಿ ಶೈವ-ವೈಷ್ಣವ, ಶೂದ್ರ-ಬ್ರಾಹ್ಮಣ ಇವರುಗಳ ಜಗಳಗಳಲ್ಲಿ, ದೇವಸ್ಥಾನಗಳು ಪದೇಪದೇ ಕೈ ಬದಲಾಯಿಸಿವೆ. ಇಂದಿಗೂ ಮಧುರೆಯ ಹೊರ ಭಾಗದಲ್ಲಿರುವ ಅಳಹಿಯಮಲೆಯಲ್ಲಿ ಸುಂದರರಾಜ ಪೆರುಮಾಳ ದೇವಸ್ಥಾನ ರಾಮಾನುಜ ಪಂಥದವರ ಆರಾಧ್ಯ ದೇವರು. ಆದರೆ ಅದರ ದಿಡ್ಡಿ ಬಾಗಿಲನ್ನು ಮುಚ್ಚಿ ಶತಮಾನಗಳೇ ಸಂದಿವೆ. ಕಾರಣ ಶೈವರು ಅದು ತಮ್ಮ ದೇವಸ್ಥಾನವೆಂದು ವಾದಿಸುತ್ತಾ ಅಲ್ಲೇ ಕುಳಿತಿದ್ದಾರೆ, ವಿಭೂತಿ, ಪ್ರಸಾದ ನೀಡುತ್ತಾರೆ. ವೈಷ್ಣವರು ಪಕ್ಕದ ಬಾಗಿಲಿನಿಂದ ದೇವಸ್ಥಾನ ಪ್ರವೇಶಿಸುತ್ತಾರೆ. ಇದರಲ್ಲಿ ಚೋಳರ, ಪಾಂಡ್ಯರ ಸೆಣಸಾಟದ ಚರಿತ್ರೆ ಹುದುಗಿದೆ. ರಾಜನು ಮತ ಬದಲಾಯಿಸಿದರೆ, ಬಹುಮಂದಿ ಪ್ರಜೆಗಳೂ ಮತ ಬದಲಾಯಿಸುವುದು, ಬಹುಜನರ ಮತಕ್ಕೆ ರಾಜನೇ ತನ್ನ ಮತ ಬದಲಾಯಿಸಿಕೊಳ್ಳುವುದು, ಇವೆಲ್ಲ ಅಂದಂದಿನ ರಾಜತಂತ್ರಗಳು. ಕರ್ನಾಟಕದಲ್ಲಿ ಶಾಂತಿಯುತವಾಗಿಯೇ ಜಿನ ದೇವಾಲಯಗಳು ಹಿಂದೂ ದೇವಾಲಯಗಳಾಗಿ, ಹಾಗೆಯೇ ಇನ್ನೂ ಇತರ ಬದಲಾವಣೆಗಳಿಗೆ ಸಾಕ್ಷಿಯಾದ ಹಲವಾರು ಸುಂದರ ದೇವಾಲಯಗಳು ಇವೆ. ಅಂದರೆ ಆಧುನಿಕ ಭಾರತವೊಂದನ್ನು ನಿರ್ಮಿಸಲು ಹೊರಟಿರುವ ನಮಗೆ ಇಂಥ ಚಾರಿತ್ರಿಕ ಸಂಗತಿಗಳು ಇಂದಿಗೆ ಸಂಕೇತಗಳಾಗಿ ಹೊರೆಯಾಗಬಾರದು. ಅಂದಂದಿನ ಸಾಮಾಜಿಕ ರಾಜಕೀಯ ಪರಿಸ್ಥಿತಿಗಳು ಅಂದಂದಿನ ನ್ಯಾಯಪೀಠದ ಮೇಲೆ ಪರಿಣಾಮ ಬೀರಿರುವುದು ಸ್ಪಷ್ಟವಾಗುತ್ತದೆ. ೧೯೪೯ರಲ್ಲಿ ಅಂದಿನ ಪರಿಸ್ಥಿತಿಯಿಂದಾಗಿ ಮುಸ್ಲಿಮರಿಗೆ ಇಂದಿನಷ್ಟು ದನಿ ಎತ್ತಲಾಗಿರುವುದಿಲ್ಲ. ಅವರ ದನಿಗೆ ರಾಜಕೀಯವಾಗಿ ಶಕ್ತಿ ತುಂಬಿಕೊಳ್ಳುವ ವೇಳೆಗೆ ಸಮಯ ಮೀರಿದ ಮೊಕದ್ದಮೆ ಎನ್ನಿಸಿಕೊಳ್ಳುತ್ತದೆ. ಕಾನೂನು ವಿರೋಧೀ ಕ್ರಮದಿಂದ ವರ್ತಿಸಿದವರ ವಿರುದ್ಧ ಕಟ್ಟಳೆಯೆಂದು ಒತ್ತಾಯ ಮಾಡುವ ವೇಳೆಗೆ, ಸಾಮಾಜಿಕ ನೆಮ್ಮದಿಯ ದೃಷ್ಟಿಯಿಂದ ರಾಜಿ ಕಬೂಲಿ ಮಾಡಿಕೊಳ್ಳಿ ಎನ್ನುವ ವಾದ ಬಂದಿದೆ. ಹೇಗೋ ಇಬ್ಬರಿಗೂ ಸಮಾಧಾನವಾಗುವಂಥ ರಾಜಿ ಕಬೂಲಿ ಆಗಿ ಈ ಸಮಸ್ಯೆ ಮುಗಿದರೆ ನಾಡಿಗೆ ಒಳ್ಳೆಯದು. ಇದೇ ನ್ಯಾಯಾಲಯ ರಾಮಲಲ್ಲನಿಗೆ ಮಂದಿರ ಕಟ್ಟಿರಿ ಎಂದು ಹೇಳುತ್ತದೆ. ಮುಂದುವರಿದು, ಮುಸ್ಲಿಮರಿಗೆ ನಿಮ್ಮ ಜಾಗದಲ್ಲಿ ಮಸೀದಿ ನಿರ್ಮಿಸಿ ಎಂದೂ, ಸರ್ಕಾರ, ಇದನ್ನು ಕಟ್ಟುತ್ತೇವೆ ಎಂದು ನೀಡಿದ್ದ ಆಶ್ವಾಸನೆಯನ್ನು ನೆನಪು ಮಾಡಿದ್ದರೆ ಎಷ್ಟು ಚೆನ್ನಾಗಿತ್ತು? ಹೋಗಲಿ, ಎರಡೂ ಪಕ್ಷಗಳೂ ಈಗಲೂ ಈ ಹಾದಿಯನ್ನು ತುಳಿಯಲಿ ಎಂದು ಹಾರೈಸೋಣ.

ನಮ್ಮ ಮುಂದಿರುವ ಇಂದಿನ ಮುಖ್ಯ ಪ್ರಶ್ನೆಯನ್ನು ಹೀಗೆ ಹೇಳಬಹುದು: ಇತಿಹಾಸ ಹಿಂದೆಂದೂ ಕಾಣದ ಒಂದು ಭೌಗೋಳಿಕ ನೆಲೆಯಲ್ಲಿ ಈಗಷ್ಟೆ ನಮ್ಮದೆಂದು ಒಂದು ದೇಶ – ಭಾರತ ಉರುಫ್ ಇಂಡಿಯಾವನ್ನು ಮಾಡಿಕೊಂಡಿದ್ದೇವೆ. ಇತಿಹಾಸದುದ್ದಕ್ಕೂ ಈ ಭೂಖಂಡ ಅನುಭವಿಸಿದ ವಿದೇಶಿ ದುರಾಕ್ರಮಣ ಮತ್ತು ಅದರ ತೀವ್ರ ಪರಿಣಾಮಗಳನ್ನು ನೀಗಿಕೊಳ್ಳಲು ಹಿಂದಿನಂತೆ ನೂರಾರು ರಾಜ್ಯಗಳೆಂಬ ಒಡಕು ಹೋಗಿ ಇಂಥದೊಂದು ಒಕ್ಕೂಟದ ರಾಜ್ಯ ಕಟ್ಟಿಕೊಳ್ಳುವುದು ಪರಿಹಾರವೆಂದು ನಮ್ಮ ಹಿರಿಯರು ಮನಗಂಡರು. ನಮ್ಮ ಒಕ್ಕೂಟ ಸಂಕಲ್ಪನೆಯ ಸಾಕಾರವೇ ನಮ್ಮ ಸಂವಿಧಾನ. ಈ ಸಂವಿಧಾನದ ನೆಲೆಯಲ್ಲಿ ನಮ್ಮೆಲ್ಲ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತ ಮುಂದುವರಿದರೆ ಆ ಜಗಳಗಳು ನಿಲ್ಲುತ್ತವೆ. ಇದರ ಜೀವಾಳ ಪ್ರಜಾಪ್ರಭುತ್ವ ಮತ್ತು ಸಮಾಜದ ಎಲ್ಲ ಸ್ತರದಲ್ಲೂ ಸಮಾನತೆ, ಬಡತನವನ್ನು ಪರಿಹರಿಸುವ ನ್ಯಾಯವನ್ನು ಸುವ್ಯವಸ್ಥಿತಗೊಳಿಸುವ ರಕ್ಷಣೆ ಮುಂತಾದುವು. ಅಯೋಧ್ಯೆಯಂಥ ಸಮಸ್ಯೆಗೂ ಈ ಘನೋದ್ದೇಶಕ್ಕೂ ಏನಾದರೂ ನೇರ ಸಂಬಂಧ ಇದ್ದರೆ ಅದು ಒಂದೆ ಎಂದು ನನಗೆ ಅನ್ನಿಸುತ್ತದೆ. ಅದು ನಮ್ಮ ಒಕ್ಕೂಟದ ಪರಿಕಲ್ಪನೆ. ಅದು ಬಯಸುವ ಒಡಂಬಡಿಕೆಗಳನ್ನು ತಿಳಿಯದವರು, ಒಪ್ಪದವರು, ಗ್ರಹಿಸದವರು ಇನ್ನೂ ಬಹಳ ಜನ ಇದ್ದಾರೆ. ಹೀಗೆ ಒಪ್ಪದೆ ಹೋದಾಗ, ಈ ಒಕ್ಕೂಟ ಮುರಿದುಬಿದ್ದರೆ ಎಂಬ ಗ್ರಹಿಕೆ ಉಂಟಾದರೆ ಇವರಲ್ಲಿ ಕೆಲವರು ಬದಲಾಯಿಸಬಹುದು. ಕೆಲವರು ಅದಕ್ಕೂ ತಮಗೂ ಸಂಬಂಧವಿಲ್ಲವೆನ್ನುವರು ಉಳಿದರೆ ಅವರನ್ನು ನಮ್ಮ ಒಕ್ಕೂಟದ ಘನೋದ್ದೇಶಕ್ಕೆ ಎರವಲಾದವರೆಂದು ಕಾನೂನು ಮತ್ತು ಸಾಮಾಜಿಕ ನೆಲೆಯಲ್ಲಿ ಮಟ್ಟ ಹಾಕಬೇಕು. ಅಂಥವರು ಎಲ್ಲ ಬಣಗಳಲ್ಲೂ ಹುದುಗಿದ್ದಾರೆ. ರಾಜ್ಯಾಂಗದಲ್ಲಿ ಎಲ್ಲಾ ಸಮಾನ. ಆದರೆ ಅದರ ವಿರೋಧಿಯಾದವರನ್ನು ಬಲಿಹಾಕಬೇಕು. ಅವರಿಗೆ ಈ ಸಮಾನತೆಯ ರಕ್ಷಣೆ ಇಲ್ಲ. ಇದೊಂದು ಸಮಸ್ಯೆಯಲ್ಲದ ಸಮಸ್ಯೆ ಎಂದು ಪ್ರಾರಂಭದಲ್ಲಿ ಹೇಳಿದ್ದು ಏಕೆಂದರೆ ಬಾಬರಿ ಮಸೀದಿ ಪಾಳು ಬಿದ್ದಿದ್ದ ಒಂದು ಇತಿಹಾಸಕಾಲದ ಕಟ್ಟಡ. ನಮ್ಮ ಇಂದಿನ ಸಮಸ್ಯೆಗಳಿಗೆ ಅದರಿಂದ ಏನೇನೂ ಪ್ರಯೋಜನವಿಲ್ಲ. ಅದನ್ನು ಹಾಗೆ ಬಿಟ್ಟಿದ್ದರೆ ಈ ಒಂದು ಶತಮಾನದ ರಾಜಕೀಯ ಸಾಮಾಜಿಕ ಕ್ಷೋಭೆಯನ್ನು ತಪ್ಪಿಸಿಕೊಳ್ಳಬಹುದಿತ್ತು. ಈಗಲೂ ಅದು ಸಮಸ್ಯೆಯೇ ಅಲ್ಲ, ಬೇಕಾದಷ್ಟು ಮಂದಿರಗಳಿಂದ ತುಂಬಿದೆ ಈ ನಾಡು. ಭಕ್ತರೇ ಕಮ್ಮಿಯಾಗುತ್ತಿದ್ದಾರೆ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭



# ಶಿವನ ಮಾರುವ ಜನರ ನಡುವೆ

ಹಸಿರು ಕಂಡೆನು ಹೂವು ಕಂಡೆನು
ಹಿಗ್ಗಿ ಹಿಗ್ಗಿ ಹೋದೆನು
ಬಣ್ಣ ಹಚ್ಚಿದ ತಗಡು ಕಂಡು
ತುಟಿಯ ಕಚ್ಚಿ ನಿಂದೆನು

ನಗೆಯ ಕಂಡೆನು ನವಿಲು ಕಂಡೆನು
ಖುಶಿಯ ತುಂಬಿ ಹೋದೆನು
ಚೀಟಿ ಚಾಚಿ ರೇಟು ಹೇಳಲು
ನಡುಗಿ ಉಡುಗಿಹೋದೆನು

ಬೆಳಕು ಕಂಡೆನು ಹೊಳಪು ಕಂಡೆನು
ಸತ್ಯ ಸದ್ಗುರು ಎಂದೆನು
ಪ್ಲಾಟು ಸೈಟು ಸಂತಿ ಕಂಡು
ಚಿಂತಿ ಹತ್ತಿ ಅತ್ತೆನು

ಪ್ರೀತಿ ಮಾರುವ ನಗೆಯ ಮಾರುವ
ಜನರನೆಂತು ತಾಳಲಿ
ಶಿವನ ಮಾರುವ ಜನರ ನಡುವೆ
ಬಾಳನೆಂತು ಕಳೆಯಲಿ

**ಪ್ರೊ|| ಜಿ. ಎಚ್. ಹನ್ನೆರಡುಮಠ**
ನಂ. ೫, 'ಮಾವು ಮಲ್ಲಿಗೆ', ಯೋಗಭವನ, ಇಂದ್ರಪ್ರಸ್ಥ, ಬನ್ನೇರುಘಟ್ಟದ ದಾರಿ
ಗೊಟ್ಟಿಗೆರೆ ಅಂಚೆ, ಬೆಂಗಳೂರು - ೫೬೦ ೦೮೩

# ರಾಮಣ್ಣ ಮತ್ತು ಕೋಳಿ ಅಂಕ

■ ಎಂ. ಬಿ. ಸಾಯ್ಕ

ತನ್ನ ಒಂಟೆತ್ತಿನ ಗಾಡಿಯಲ್ಲಿ ಹತ್ತಾರು ಚೀಲಗಳನ್ನು ಹೇರಿಕೊಂಡು ಕೈಯಲ್ಲಿ ಬಾರುಕೋಲು ಹಿಡಿದುಕೊಂಡು ಕುಳಿತಿದ್ದಾನೆ ರಾಮಣ್ಣ. ಹೊರಲಾರದ ಹೊರೆ ಹೊತ್ತು ನಿಧಾನಕ್ಕೆ ಗಾಡಿಯನ್ನು ಎಳೆಯುತ್ತಿದೆ ರಾಮಣ್ಣನ ಒಂಟೆತ್ತು. ರಾಮಣ್ಣ ಗಾಡಿಯ ಮೇಲೆ ಕುಳಿತಿದ್ದರೂ ಅವನ ಮನಸ್ಸು ಮಾತ್ರ ಅಲ್ಲಿಲ್ಲ. ಅವನ ಮನಸ್ಸನ್ನು ಸಂಪೂರ್ಣವಾಗಿ ಆವರಿಸಿಕೊಂಡಿತ್ತು ಅವನ ಪಂಚರಂಗಿ ಕೋಳಿ.

ರಾಮಣ್ಣನ ಕೋಳಿ ಎಂದರೆ ಅಂತಿಂಥ ಕೋಳಿಯಲ್ಲ. ಅದು ದಷ್ಟಪುಷ್ಟವಾಗಿ ಕೊಬ್ಬಿದ ಹಂದಿಯಂತೆ ಬೆಳೆದಿತ್ತು. ಹರಿದು ತಿನ್ನುವಂತಿದ್ದ ಅದರ ತೀಕ್ಷ್ಣವಾದ ಕಣ್ಣುಗಳನ್ನು ನೋಡಿದರೆ ಎಂಥ ಗಂಡೆದೆಯವನಿಗೂ ನಡುಕ ಉಂಟಾಗುತ್ತಿತ್ತು. ಕಾಮನ ಬಿಲ್ಲಿನಂತೆ ಬಾಗಿ ಮೂರ್ನಾಲ್ಕು ಬಣ್ಣಗಳನ್ನು ಹೊಂದಿರುವ ಅದರ ಪುಕ್ಕಗಳು ಆ ಕೋಳಿಗೆ ಒಂದು ಸುಂದರವಾದ ಆಕಾರವನ್ನು ತಂದುಕೊಟ್ಟಿದ್ದವು. ಅಂಕದ ಕೋಳಿಗೆ ಹೇಳಿ ಮಾಡಿಸಿದಂತಿರುವ, ಎದುರಾಳಿಯನ್ನು ಸೀಳಿಬಿಡುವಂತಹ ಅದರ ಕಾಲುಗಳು ಬಲಿಷ್ಠವಾಗಿತ್ತು. ಅಂಥ ಕೋಳಿ ಯಃಕಶ್ಚಿತ್ ಒಂದು ಸಾಮಾನ್ಯ ಪುಕ್ಕಲು ಕೋಳಿಗೆ ಒಟ್ಟೆಯಾಗುವುದೆಂದರೆ...!? (ಹೆದರಿ ಓಡಿಹೋಗುವುದೆಂದರೆ...!?) ನಂಬುವ ಮಾತೇ ಇದು? ರಾಮಣ್ಣನಿಗೆ ಆ ದಿನ ತುಂಬಾ ದುಃಖವಾಗಿತ್ತು; ಅವಮಾನವಾಗಿತ್ತು. ಅವನ ಕೋಳಿಯನ್ನು ನಂಬಿ ಎಷ್ಟೋ ಜನ ಲಕ್ಷಗಟ್ಟಲೆ ರೂಪಾಯಿವರೆಗೆ ಜಿಡ್ಡು ಮಾಡಿದ್ದರು. ಆ ಕೋಳಿಯೂ ಹಾಗೇ ಇತ್ತು. ಎಂಥವನಿಗಾದರೂ ಆತ್ಮವಿಶ್ವಾಸ ತುಂಬಿ ತುಳುಕಲೇಬೇಕು, ಹಾಗಿತ್ತು ಆ ಕೋಳಿ. ರಾಮಣ್ಣ ಯೋಚಿಸುತ್ತಿದ್ದ... ''ಛೀ... ನನ್ನ ಜೀವಮಾನದಲ್ಲೇ ಇಂಥ ಅವಮಾನವನ್ನು ಎದುರಿಸಿರಲಿಲ್ಲ. ನನ್ನ ಮಾನ ಮರ್ಯಾದೆಯನ್ನೆಲ್ಲ ಹಾಳುಮಾಡಿತು ಈ ದರಿದ್ರ ಕೋಳಿ. ಇನ್ನು ನಾನು ಬದುಕಿದ್ದೇನು ಪ್ರಯೋಜನ'' ಎಂದು ನೊಂದುಕೊಂಡ.

ರಾಮಣ್ಣ ಒಬ್ಬ ಹಮಾಲ, ಸಗಟು ವ್ಯಾಪಾರಿಗಳಿಂದ ಚಿಲ್ಲರೆ ವರ್ತಕರಿಗೆ ಸಾಮಾನುಗಳನ್ನು ಸಾಗಿಸುವಾತ. ರಾಮಣ್ಣ ತನ್ನ ವೃತ್ತಿಯಲ್ಲಿ ತುಂಬಾ ನಿಷ್ಠಾವಂತ, ಇತರ ಹಮಾಲರಂತೆ ಕದಿಯುವುದು ಸುಳ್ಳು ಹೇಳುವುದು, ಮೋಸ ಮಾಡುವುದು ಅವನಿಗೆ ಗೊತ್ತಿರಲಿಲ್ಲ. ಈ ಗುಣಗಳಿಂದಾಗಿಯೇ ಜನರಿಗೆ ಅವನ ಮೇಲೆ ಅಪಾರ ವಿಶ್ವಾಸ. ಹಾಗಾಗಿ



ಎಲ್ಲ ವರ್ತಕರು ತಮ್ಮ ಸಾಮಾನುಗಳನ್ನು ತರಲು ಇವನಿಗೇ ಹೇಳುತ್ತಿದ್ದರು. ಇಂಥದೇ ಮಂಡಿಗೆ ಹೋಗಿ ಸಾಮಾನುಗಳನ್ನು ತಗೊಂಡು ಬಾ ಅಂತ ಬಿಲ್ ಕೊಟ್ಟರೆ ಮುಗಿಯಿತು; ಬಳಿಕ ಆ ವ್ಯಾಪಾರಿ ನಿಶ್ಚಿಂತೆಯಾಗಿರಬಹುದು. ಏಕೆಂದರೆ ಅವರು ಹೇಳಿದ ಎಲ್ಲಾ ಸಾಮಾನುಗಳು ಏನೊಂದೂ ಹೆಚ್ಚುಕಡಿಮೆಯಾಗದೆ ಬಂದು ಅವರ ಅಂಗಡಿ ತಲುಪುತ್ತಿದ್ದವು. ಹಮಾಲಿ ತೆಗೆದುಕೊಳ್ಳುವುದರಲ್ಲೂ ಅವನ ತಕರಾರಿಲ್ಲ; ನಿಗದಿತ ಹಮಾಲಿ ಕೊಟ್ಟರೆ ಮುಗಿಯಿತು. ನಗುಮುಖದಿಂದ ಹಮಾಲಿ ಹಣ ಪಡೆದು ಅವರಿಗೆ ಒಂದು ಸಲಾಮು ಹೊಡೆದು ತೆರಳುತ್ತಿದ್ದ. ಇಷ್ಟೇ ಕೊಡಿ, ಅಷ್ಟೇ ಕೊಡಿ ಎಂದು ಪೀಡಿಸುತ್ತಿರಲಿಲ್ಲ.

ಅವನ ಒಂಟೆತ್ತಿನ ಗಾಡಿ ಕೆಲಸವಿಲ್ಲದೆ ಖಾಲಿ ನಿಂತಿದ್ದೇ ಇಲ್ಲ. ಆದರೂ ಒಮ್ಮೊಮ್ಮೆ ಅವನ ಗಾಡಿ ಸ್ಟ್ಯಾಂಡಿನಲ್ಲಿ ನಿಂತುಬಿಡುತ್ತಿತ್ತು. ಸ್ಟ್ಯಾಂಡಿನಲ್ಲಿ ಅವನ ಗಾಡಿ ಮತ್ತು ಎತ್ತು ಮಾತ್ರ ಇರುತ್ತಿತ್ತು, ಅವನಿರುತ್ತಿರಲಿಲ್ಲ. ಆಗ ಅವನ ಗಿರಾಕಿಗಳು ತಿಳಿದುಕೊಂಡುಬಿಡುತ್ತಿದ್ದರು, ಓಹೋ! ಇಂದು ಎಲ್ಲೋ ಕೋಳಿ ಅಂಕವಿರಬೇಕು, ರಾಮಣ್ಣ ಕೋಳಿ ಅಂಕಕ್ಕೆ ಹೋಗಿದ್ದಾನೆ ಎಂದು. ರಾಮಣ್ಣನಿಗೆ ಬೇರೆ ಯಾವ ಹವ್ಯಾಸಗಳಿಲ್ಲದಿದ್ದರೂ ಕೋಳಿ ಅಂಕದ ಹುಚ್ಚು ಮಾತ್ರ ಜೋರಾಗಿಯೇ ಇತ್ತು. ಸುತ್ತಮುತ್ತಲ ಯಾವುದೇ ಹಳ್ಳಿಯಲ್ಲಿ ಕೋಳಿ ಅಂಕ ನಡೆದರೂ ಅವನು ಮತ್ತು ಅವನ ಕೋಳಿ ಹಾಜರಿರುತ್ತಿದ್ದುದು ಮಾಮೂಲಿನ ವಿಷಯ. ಆ ದಿನ ಅವನಿಗೆ ಹಬ್ಬದ ಸಂಭ್ರಮ.

ಪೊಲೀಸರ ಕಣ್ಣು ತಪ್ಪಿಸಿ ನಡೆಯುವ ಕೋಳಿ ಅಂಕ ಹಳ್ಳಿಯ ಯಾವುದೋ ಮೂಲೆಯಲ್ಲಿ ನಡೆಯುತ್ತಿತ್ತು. ಕೋಳಿ ಅಂಕ ಎಲ್ಲಿ ನಡೆಯುತ್ತಿದೆ ಎಂಬ ಸುದ್ದಿ ಅಂಕ ಪ್ರಿಯರಿಗೆ ಹೇಗೋ ತಲುಪುತ್ತಿತ್ತು. ಸುತ್ತಮುತ್ತಲ ಊರುಗಳಿಂದ ಸ್ಪರ್ಧಿಗಳು ತಮ್ಮ ಅಂಕದ ಕೋಳಿಗಳೊಂದಿಗೆ ಅಲ್ಲಿ ಹಾಜರಿರುತ್ತಿದ್ದರು. ಆ ಸ್ಥಳದಲ್ಲಿ ಒಂದು ಪುಟ್ಟ ಜಾತ್ರೆಯೇ ನಡೆಯುತ್ತಿತ್ತು. ಸಣ್ಣಪುಟ್ಟ ಚಹಾ ಅಂಗಡಿಗಳು, ಗೂಡಂಗಡಿಗಳು ಇದ್ದಕ್ಕಿದ್ದಂತೆ ತಲೆಯೆತ್ತುತ್ತಿದ್ದವು. ಕೋಳಿ ಅಂಕ ನಡೆಯುವಲ್ಲಿ ಸಾರಾಯಿ ಅಂಗಡಿ ಮಾತ್ರ ಇದ್ದೇ ಇರುತ್ತಿತ್ತು. ಆ ದಿನ ಸಾರಾಯಿ ಅಂಗಡಿಗೆ ಭರ್ಜರಿ ವ್ಯಾಪಾರ. ಅಲ್ಲಿಗೆ ಬರುವವರೆಲ್ಲರೂ ಕುಡಿಯುವವರೇ... ಆದರೆ ರಾಮಣ್ಣ ಮಾತ್ರ ಎಂದೂ ಕುಡಿಯುತ್ತಿರಲಿಲ್ಲ.

ಈಗ ಒಟ್ಟೆಯಾದ ಪಂಚರಂಗಿ ಕೋಳಿಯನ್ನು ರಾಮಣ್ಣ ಮುತುವರ್ಜಿಯಿಂದ ಸಾಕಿದ್ದ. ಒಂದು ದಿನ ಮಾದೇವಣ್ಣನ ಮನೆಗೆ ಹಿಂಡಿಚೀಲ ಹಾಕಿ ಬರಲು ಹೋದವನಿಗೆ ಅವರ ಮನೆಯಂಗಳದಲ್ಲಿ ತಾಯಿಯೊಂದಿಗೆ ಮೇಯುತ್ತಿದ್ದ ಈ ಕೋಳಿಮರಿ ರಾಮಣ್ಣನ

ಎಕ್ಸರೇ ಕಣ್ಣಿಗೆ ಬಿದ್ದಿತು. ಕೋಳಿಮರಿಯನ್ನು ನೋಡಿದ ರಾಮಣ್ಣನಿಗೆ ಇದು ಬೆಳೆದು ದೊಡ್ಡದಾದ ಮೇಲೆ ಅಂಕದ ಕೋಳಿಯಾಗುವ ಎಲ್ಲಾ ಲಕ್ಷಣಗಳೂ ಗೋಚರಿಸಿದವು. ಮಾದೇವಣ್ಣನನ್ನು ಕಾಡಿಬೇಡಿ ಅವನು ಹೇಳಿದ ದರ ಕೊಟ್ಟು ಆ ಮರಿಯನ್ನು ತಂದು ಕಣ್ಣಲ್ಲಿ ಕಣ್ಣಿಟ್ಟು ಸಾಕಿದ. ಅದು ದಷ್ಟಪುಷ್ಟವಾಗಿ ಬೆಳೆಯಲು ಅಕ್ಕಿ, ಭತ್ತ, ಕಾಳುಕಡಿಗಳನ್ನು ಯಥೇಚ್ಛವಾಗಿ ತಿನ್ನಿಸಿದ. ಕುಡಿಯಲು ನೀರಿನೊಂದಿಗೆ ಈರುಳ್ಳಿ ರಸವನ್ನು ಸೇರಿಸಿ ಕೊಟ್ಟ. ಆದರೆ ಗೋಧಿಯನ್ನು ಮಾತ್ರ ಕೊಡಲಿಲ್ಲ. ಗೋಧಿ ತಿಂದ ಕೋಳಿ ಮಂಕಾಗಿ ಬೆಳೆಯುತ್ತದೆ ಎಂದು ಯಾರೋ ಹೇಳಿದ್ದು ಅವನ ನೆನಪಿನಲ್ಲಿತ್ತು. ರಾಮಣ್ಣನ ಆರೈಕೆಯಲ್ಲಿ ಕೋಳಿ ದಿನದಿಂದ ದಿನಕ್ಕೆ ದಷ್ಟಪುಷ್ಟವಾಗಿ ಬೆಳೆಯುತ್ತಿತ್ತು. ಕೇವಲ ಆರೇ ತಿಂಗಳಲ್ಲಿ ಅಂಕದ ಕೋಳಿಯಾಗಿ ರೂಪುಗೊಂಡಿತು. ರಾಮಣ್ಣ ತನ್ನ ಕೋಳಿಯನ್ನು ಎಂದೂ ಹೊರಗೆ ಮೇಯಲು ಬಿಡುತ್ತಿರಲಿಲ್ಲ. ಕಟ್ಟಿಹಾಕಿಯೇ ಸಾಕುತ್ತಿದ್ದ. ಹೊರಗೆ ಮೇಯಲು ಬಿಟ್ಟರೆ ಇತರೆ ಹಡಬೆ ಕೋಳಿಗಳೊಂದಿಗೆ ಸೇರಿ ಕೋಳಿ ತನ್ನ ಸೇಡಿನ ಗುಣವನ್ನು ಮರೆಯ ಬಹುದೆಂಬ ಹೆದರಿಕೆ ಅವನಿಗೆ. ಅಲ್ಲದೆ, ಹೆಣ್ಣು ಕೋಳಿಯೊಂದಿಗೆ ಸರಸ ಆಡಿ ತನ್ನ ಶಕ್ತಿಯನ್ನು ಕಳೆದುಕೊಳ್ಳಬಹುದೆಂಬ ಭಯವೂ ಇತ್ತು. ಅಟ್ಟದ ಮೇಲಿಂದ ಕೋಳಿ ಸರ ಹೊಡೆದರೆ (ಕೂಗಿದರೆ) ಸುತ್ತಮುತ್ತಲೆಲ್ಲ ಅದರ ಧ್ವನಿ ರಿಂಗಣಿಸುತ್ತಿತ್ತು.

ಮೊದಲ ಸಲ ತನ್ನ ಕೋಳಿಯನ್ನು ಅಂಕದ ಅಖಾಡಕ್ಕೆ ಒಯ್ದಿದ್ದು ರಾಮಣ್ಣನಿಗೆ ಚೆನ್ನಾಗಿ ನೆನಪಿದೆ. ಅದಕ್ಕಾಗಿ ಅವನು ಒಂದು ವಾರದ ಹಿಂದಿನಿಂದಲೇ ತಯಾರಿ ನಡೆಸಿದ್ದ. ಕೋಳಿ ಅಂಕದ ಪುಸ್ತಕವನ್ನು ತಂದು ಪರೀಕ್ಷೆಗೆ ಹೋಗುವ ವಿದ್ಯಾರ್ಥಿಯಂತೆ ಚೆನ್ನಾಗಿ ಉರುಹೊಡೆದಿದ್ದ. ಯಾವ ದಿನ ಯಾವ ಮುಹೂರ್ತಕ್ಕೆ, ಯಾವ ವರ್ಣದ ಕೋಳಿಯೊಂದಿಗೆ ತನ್ನ ಕೋಳಿಯನ್ನು ಕಾದಾಡಲು ಬಿಡಬೇಕೆಂಬುದನ್ನು ಮನನ ಮಾಡಿಕೊಂಡ. ತನ್ನ ಮನೆಯ ಆರಾಧ್ಯ ದೈವ ಜಟಗ ಮತ್ತು ಬೇಟೆ ಬೀರಪ್ಪನಿಗೆ ಹರಕೆ ಹೇಳಿಕೊಂಡ. ರಾಮಕೃಷ್ಣ ಭಟ್ಟರ ಮನೆಗೆ ಹೋಗಿ ತನ್ನ ಕೋಳಿಯ ಗುಣಲಕ್ಷಣಗಳ ಬಗ್ಗೆ ಕೇಳಿ ತಿಳಿದುಕೊಂಡು ಅದು ಎಂದೂ ಸೋಲದಂತೆ ತಾಯತವನ್ನು ಮಂತ್ರಿಸಿ ತಂದು ಕಟ್ಟಿದ. ಒಂದು ಶುಭ ಮುಹೂರ್ತದಲ್ಲಿ ಊರ ದೇವರುಗಳನ್ನೆಲ್ಲಾ ನೆನೆದು, ಮನೆಯ ತುಳಸಿ ಎದುರು ಕಾಯಿ ತೆಗೆದಿಟ್ಟು ಹೇಳಿಕೆ ಮಾಡಿಕೊಂಡು ಯುದ್ಧಕ್ಕೆ ತೆರಳಲಿರುವ ವೀರ ಸೈನಿಕನಂತೆ ಕೋಳಿ ಅಂಕ ನಡೆಯುವ ಸ್ಥಳಕ್ಕೆ ತೆರಳಿದ.

ಅಂಕ ನಡೆಯುವ ಸ್ಥಳಕ್ಕೆ ಬಂದಾಗ ಅಲ್ಲಿ ಸೇರಿದ್ದ ಎಲ್ಲರ ಕಣ್ಣು ರಾಮಣ್ಣನ ಕೋಳಿಯ ಮೇಲೆ ಕೇಂದ್ರೀಕೃತವಾಗಿತ್ತು. ''ವಾಹ್! ಎಂಥಾ ಅದ್ಭುತ ಕೋಳಿ... ಅಂಕಕ್ಕೆ ಹೇಳಿ ಮಾಡಿಸಿದ ಕೋಳಿ... ರಾಮಣ್ಣ ಇದನ್ನು ಎಲ್ಲಿಂದ ತಂದೆ?'' ಎಂಬ ಉದ್ಗಾರ ಎಲ್ಲರ ಬಾಯಿಂದ. ಇದನ್ನು ಕೇಳಿ ರಾಮಣ್ಣನಿಗೆ ಕಸಿವಿಸಿ. ಎಲ್ಲಿ ನನ್ನ ಕೋಳಿಗೆ ಜನರ ದೃಷ್ಟಿ ತಗಲೀತೋ ಎಂಬ ಆತಂಕ. ಸ್ವಲ್ಪ ಹೊತ್ತಿನ ನಂತರ ಕೋಲಕಾರ (ಕೋಳಿ ಬಿಡುವಾತ) ರಾಮಣ್ಣನ ಕೋಳಿಗೆ ಒಂದು ಜೋಡಿಯನ್ನು ಹುಡುಕಿ ಅಂಕಕ್ಕೆ ಸಿದ್ಧಗೊಳಿಸಿದ. ಮೊದಲ ಬಾರಿಗೆ ರಾಮಣ್ಣನ ಕೋಳಿಯ ಕಾಲಿಗೆ ಕತ್ತಿಯನ್ನು ಕಟ್ಟಲಾಯಿತು. ಆ ದಿನ ಎಲ್ಲರೂ ರಾಮಣ್ಣನ ಕೋಳಿಯ ಮೇಲೆ ಬಿಡ್ಡು ಮಾಡಿದವರೇ! ರಾಮಣ್ಣನಿಗೋ ತನ್ನ ಕೋಳಿಗೆ ಎಲ್ಲಿ ಏನಾಗಿಬಿಡುತ್ತದೋ ಎಂಬ ಆತಂಕ. ಏಕೆಂದರೆ ರಾಮಣ್ಣ ತನ್ನ ಕೋಳಿಯನ್ನು ಅಷ್ಟೊಂದು ಪ್ರೀತಿಸುತ್ತಿದ್ದ. ರಾಮಣ್ಣನ ಕೋಳಿ ಎದುರಾಳಿ ಕೋಳಿಯೊಂದಿಗೆ ಕಾದಾಟಕ್ಕೆ ರೆಡಿಯಾಯಿತು. ಎರಡೂ ಕೋಳಿಗಳು ರೋಷದಿಂದ ಕೂದಲನ್ನು ಸೆಟೆಸಿಕೊಂಡು ಗುಟುಕುಹಾಕುತ್ತಾ ಕಾಳಗಕ್ಕೆ ಅಣಿಯಾದುವು. ಎರಡೂ ಕೋಳಿಗಳ ನಡುವೆ ಜೋರಾದ ಕಾದಾಟ ಶುರುವಾಯಿತು. ಶುರುವಾದ ಒಂದೇ ನೆಗೆತಕ್ಕೆ ರಾಮಣ್ಣನ ಕೋಳಿ ತನ್ನ ಎದುರಾಳಿ ಕೋಳಿಯನ್ನು ತನ್ನ ಕತ್ತಿನಿಂದ ಬಗಿದುಹಾಕಿತು. ಎದುರಾಳಿ ಕೋಳಿ ವಿಲವಿಲ ಒದ್ದಾಡುತ್ತ ಪ್ರಾಣ ಬಿಟ್ಟಿತು ಎಲ್ಲರೂ ಹೋ... ಎಂದು ಕೂಗಿದರು. ರಾಮಣ್ಣನ ಕೋಳಿ ಮೇಲೆ ಬಿಡ್ಡು ಮಾಡಿದವರೆಲ್ಲ ಹಣ ಬಾಚಿಕೊಂಡರು. ಸತ್ತ ಕೋಳಿಯನ್ನು ಚೀಲದಲ್ಲಿ ಹಾಕಿಕೊಂಡು ರಾಮಣ್ಣ ಯುದ್ಧದಲ್ಲಿ ಗೆದ್ದ ವೀರಯೋಧನಂತೆ ಮನೆ ಕಡೆಗೆ ಹೆಜ್ಜೆ ಹಾಕಿದ. ಆ ದಿನ ರಾಮಣ್ಣನ ಮನೆಯಲ್ಲಿ ಎಲ್ಲರಿಗೂ ಕೋಳಿ ಸಾರು ಮತ್ತು ಅಕ್ಕಿ ರೊಟ್ಟಿಯ ಭೂರಿಭೋಜನ.

ಕೋಳಿ ಅಂಕಕ್ಕೆ ಸರಕಾರದ ಅನುಮತಿ ಇಲ್ಲ. ಹಾಗಾಗಿ ಕೋಳಿ ಅಂಕ ನಡೆಯುವಲ್ಲೆಲ್ಲ ಪೊಲೀಸರು ರೇಡ್ ನಡೆಸುವುದು ಸಾಮಾನ್ಯ. ಪೊಲೀಸರಿಗೆ ಕಮಾಯಿ ಮಾಡಲು ಇದೊಂದು ಉಪಧಂಧೆ. ಅಂಕ ನಡೆಯುವ ಸ್ಥಳಕ್ಕೆ ಹೋಗಿ ರೇಡ್ ಮಾಡಿ ನಾಲ್ಕಾರು ಜನರನ್ನು ಹಿಡಿದ ನಾಟಕ ಮಾಡಿ ಅವರಲ್ಲಿದ್ದ ಹಣವನ್ನೆಲ್ಲ ಕಸಿದುಕೊಂಡು ಬಿಡುತ್ತಿದ್ದರು. ಕೆಲವು ಪೊಲೀಸರು ಅವರಲ್ಲಿದ್ದ ಕೋಳಿಗಳನ್ನು ವಶಪಡಿಸಿಕೊಂಡು ಮನೆಗೊಯ್ದು ಬಿರಿಯಾನಿ ಮಾಡಿ ತಿನ್ನುವುದೂ ಉಂಟು. ರಾಮಣ್ಣ ತುಂಬಾ ಚಾಣಾಕ್ಷ. ಅವನು ಇಂಥದರಲ್ಲೆಲ್ಲ ಸಿಕ್ಕಿ ಬೀಳುತ್ತಿರಲಿಲ್ಲ. ಒಂದೊಮ್ಮೆ ಸಿಕ್ಕಿಬಿದ್ದರೂ ಕೇಸ್ ಹಾಕಿಸಿ ಕೊಳ್ಳುತ್ತಿರಲಿಲ್ಲ. ಅವನ ಕಿಸೆಯಲ್ಲಿ ಯಾವಾಗಲೂ ಸಾಕಷ್ಟು ಹಮಾಲಿ ದುಡ್ಡು ಇದ್ದೇ ಇರುತ್ತಿತ್ತು. ಅದನ್ನೇ ಪೊಲೀಸರಿಗೆ ಕೊಟ್ಟು ಪಾರಾಗಿಬಿಡುತ್ತಿದ್ದ. ಕೋಳಿ ಅಂಕದಲ್ಲಿ ಕೆಲವರು ಹೆಂಡ ಕುಡಿದು ಗಲಾಟೆ ಮಾಡುವುದು, ಹೊಡೆದಾಟ ಮಾಡುವುದು ಸಾಮಾನ್ಯ. ಅಂಥ ವಿಷಯಗಳಲ್ಲೆಲ್ಲ ರಾಮಣ್ಣ ಕೆಸುವಿನ ಎಲೆಯ ಮೇಲೆ ಬಿದ್ದ ನೀರಿನಂತಾಗಿಬಿಡುತ್ತಿದ್ದ.

ರಾಮಣ್ಣನ ಹತ್ತಿರ ಇನ್ನೂ ಮೂರು ಅಂಕದ ಕೋಳಿಗಳಿದ್ದವು. ಒಂದು ಕೆಂಪು ಕಡ್ಲ, ಇನ್ನೊಂದು ಕರಿಗಿರಿಯ ಬಿಳಿ ಕಡ್ಲ. ಮತ್ತೊಂದು, ಅಚ್ಚ ಬಿಳಿ ಬಣ್ಣದ ಬೆಳ್ಳಿ. ಆದರೆ ರಾಮಣ್ಣನಿಗೆ ಅವನ ಪಂಚರಂಗಿ ಕೋಳಿಯ ಮೇಲೆಯೇ ಹೆಚ್ಚು ಪ್ರೀತಿ. ಈ ಪಂಚರಂಗಿ ಕೋಳಿ ಈಗಾಗಲೆ ನೂರಾರು ಕೋಳಿಗಳನ್ನು ಗೆದ್ದುಕೊಟ್ಟಿದೆ ರಾಮಣ್ಣನಿಗೆ. ಸಾವಿರಾರು ರೂಪಾಯಿಗಳನ್ನು ಗೆದ್ದುಕೊಟ್ಟಿದೆ ಬಿಡ್ಡುದಾರರಿಗೆ. ಈ ಕೋಳಿ ಎಂದೂ ಸೋಲು ಕಂಡಿದ್ದೇ ಇಲ್ಲ. ಹೊಟ್ಟೆ ಹರಿದುಹಾಕಿಕೊಂಡು ಮೂರ್ನಾಲ್ಕು ಹೊಲಿಗೆ ಹಾಕಿಸಿಕೊಂಡು ಸಾಯುವ ಪರಿಸ್ಥಿತಿಯಲ್ಲೂ ರಾಮಣ್ಣನ ಮೀಸೆ ಮಣ್ಣಾಗಲು ಬಿಡಲಿಲ್ಲ. ಹಾಗಾಗಿ ರಾಮಣ್ಣನಿಗೆ ಈ ಕೋಳಿಯೆಂದರೆ ಜೀವಕ್ಕಿಂತ ಹೆಚ್ಚು ಪ್ರೀತಿ.

ರಾಮಣ್ಣನಿಗಿರುವ ಈ ಕೋಳಿ ಅಂಕದ ಹುಚ್ಚಿನಿಂದಾಗಿ ಮನೆಯವರೆಲ್ಲರಿಗೆ ಬೇಸರ. ಸುಮ್ಮನೆ ಕೆಲಸ ಬಿಟ್ಟು ಎರಡು ಮೂರು ದಿನ ಕೋಳಿ ಅಂಕದಲ್ಲೇ ಬಿದ್ದುಕೊಂಡಿರುತ್ತಾನೆ ಎಂದು ಅಸಮಾಧಾನ. ರಾಮಣ್ಣನ ಹೆಂಡತಿ ರಾಮಕ್ಕನದಂತೂ ಪ್ರತಿದಿನ ಈ ವಿಷಯದಲ್ಲಿ ಜಗಳ. ಹಾಗೆಂದು ರಾಮಣ್ಣ ಕೋಳಿ ಗೆದ್ದುಕೊಂಡು ಬಂದರೆ ಎಲ್ಲರೂ ಪಟ್ಟಾಗಿ ಹೊಡೆಯುವವರೇ... ಕೋಳಿ ತಿಂದು ಡರ್... ಅಂತ ತೇಗುವವರೇ. ಗಂಡನೊಂದಿಗೆ ಎಷ್ಟೇ ಜಗಳ ಆಡಿದರೂ ಹೆಂಡತಿ ರಾಮಕ್ಕನಿಗೆ ರಾಮಣ್ಣನೆಂದರೆ ತುಂಬಾ ಪ್ರೀತಿ. ತನ್ನ ಗಂಡ ಹಮಾಲಿ ಮಾಡುತ್ತಾನೆ, ದುಡಿದ ದುಡ್ಡನ್ನೆಲ್ಲ ತಂದು ಹೆಂಡತಿ ಮಕ್ಕಳ ಸಂಸಾರಕ್ಕೆ ಹಾಕುತ್ತಾನೆ, ಇತ್ತಿತ್ತಲಾಗಿ ಹೊಸ ಮನೆ ಕಟ್ಟಿಸಿದ್ದಾನೆ, ಎರಡು ಹೆಣ್ಣುಮಕ್ಕಳ ಮದುವೆಯನ್ನು ಅದ್ದೂರಿಯಾಗೇ ಮಾಡಿದ್ದಾನೆ ಎಂಬ ಅಭಿಮಾನ. ಇದ್ದೊಬ್ಬ ಮಗನಿಗೆ ''ನೀನೂ ಹಮಾಲಿ ಮಾಡು ಒಂದು ಒಂಟೆತ್ತಿನ ಗಾಡಿ ತೆಗೆಸಿಕೊಡುತ್ತೇನೆ'' ಎಂದಿದ್ದ ರಾಮಣ್ಣ. ಆದರೆ ಮಗನಿಗೆ ಅಪ್ಪನ ಕೆಲಸದಲ್ಲಿ ಆಸಕ್ತಿ ಇಲ್ಲ. ಅವನು ಗಾರೆ ಕೆಲಸಕ್ಕೆ ಹೋಗುತ್ತಿದ್ದಾನೆ. ರಾಮಕ್ಕ ಯೋಚಿಸುತ್ತಾಳೆ : ತನ್ನ ಗಂಡ ತಮಗೆ ಯಾವುದಕ್ಕೂ ಕಮ್ಮಿ ಮಾಡಲಿಲ್ಲ, ಇತರ ಹಮಾಲರಂತೆ ದುಡಿದದ್ದನ್ನೆಲ್ಲ ಹೆಂಡದಂಗಡಿಗೆ ಹಾಕಿ ಮನೆಗೆ ಬಂದು ಹೆಂಡತಿ ಮಕ್ಕಳಿಗೆ ಹೊಡೆಯುವುದು ಬಡಿಯುವುದು ಮಾಡುವುದಿಲ್ಲ. ಅವರಿಗಿರುವ ಒಂದೇ ಒಂದು ಚಟವೆಂದರೆ ಕೋಳಿ ಅಂಕ. ಮನುಷ್ಯ ಎಂದ ಮೇಲೆ ಯಾವುದಾದರೂ ಒಂದು ಚಟವಿದ್ದೇ ಇರುತ್ತದೆ. ಚಟವಿಲ್ಲದ ಮನುಷ್ಯರಾರು ಈ ಭೂಮಿ ಮೇಲೆ ? ಈ ಕೋಳಿ ಅಂಕದಿಂದ ಅವರು ಕಳೆದುಕೊಂಡದ್ದಕ್ಕಿಂತ ಪಡೆದದ್ದೇ ಹೆಚ್ಚು. ಹಾಗಿರುವಾಗ ಅವರಿಗಿರುವ ಒಂದೇ ಒಂದು ಆಸೆಗೆ ನಾವ್ಯಾಕೆ ತಣ್ಣೀರೆರಚಬೇಕು ? ಅವರಿಷ್ಟದಂತೆ ಅವರಿರಲಿ – ಎಂದು ಸಮಾಧಾನ ಮಾಡಿಕೊಳ್ಳುತ್ತಾಳೆ ರಾಮಕ್ಕ.

ಬರುವ ಭಾನುವಾರ ಮಾಸ್ತಿಬೈಲಿನಲ್ಲಿ ಗ್ರಾಮ ಪಂಚಾಯಿತಿ ವತಿಯಿಂದ ಗ್ರಾಮದ ಜನರಿಗೆ ವಿವಿಧ ಜಾತಿಯ ಕೋಳಿಗಳ ಪ್ರದರ್ಶನ, ಕೋಳಿ ಸಾಕಾಣಿಕೆಯ ಬಗ್ಗೆ ತರಬೇತಿ, ಕೋಳಿ ಸಾಕಣಿಕೆಯಿಂದಾಗುವ ಲಾಭದ ಬಗ್ಗೆ ತಿಳಿಹೇಳುವ ಒಂದು ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಮಾಸ್ತಿಬೈಲಿನ ಗ್ರಾಮಪಂಚಾಯಿತಿ ಅಧ್ಯಕ್ಷರು ಈ ಕಾರ್ಯಕ್ರಮವನ್ನು ಉದ್ಘಾಟಿಸುವವರಿದ್ದರು. ಅಲ್ಲದೇ ಸರಕಾರಿ ಅಧಿಕಾರಿಗಳು, ಗ್ರಾಮವನ್ನು ದತ್ತು ತೆಗೆದುಕೊಂಡಿರುವ ಬ್ಯಾಂಕಿನ ಅಧಿಕಾರಿಗಳೂ ಸಹ ಬರುವವರಿದ್ದರು. ಅಷ್ಟೇ ಅಲ್ಲ, ಕಾರ್ಯಕ್ರಮ ಮುಗಿದ ಮೇಲೆ ಕೋಳಿ ಅಂಕದ ಭಾರಿ ಸ್ಪರ್ಧೆಯನ್ನು ಏರ್ಪಡಿಸಲಾಗಿದೆ ಎಂಬ ಸುದ್ದಿ ರಾಮಣ್ಣನಿಗೆ ಬಂದು ತಲುಪಿತು. ಅದಕ್ಕಾಗಿ ಅವನು ಭರ್ಜರಿ ತಯಾರಿ ನಡೆಸಿದ್ದ.



ತನ್ನ ಅಂಕದ ಕೋಳಿಗೆ ವಿಶೇಷವಾದ ಆಹಾರವನ್ನು ಕೊಡುತ್ತಿದ್ದ. ಪ್ರತಿದಿನ ಬೆಳಿಗ್ಗೆ ಎದ್ದು ತನ್ನ ಇತರ ಕೋಳಿಗಳೊಂದಿಗೆ ಕಾದಾಟದ ತರಬೇತಿಯನ್ನು ಕೊಡುತ್ತಿದ್ದ. ರಾಮಣ್ಣನ ಕೋಳಿ ಅಂಕದಲ್ಲಿ ಎಷ್ಟೊಂದು ಪಳಗಿತ್ತೆಂದರೆ ಅದಕ್ಕೆ ಕಾದಾಟದ ಹೊಸ ಹೊಸ ಪಟ್ಟುಗಳನ್ನು ಕಲಿಸಿಕೊಡುತ್ತಿದ್ದ. ತಾನೂ ಸಹ ಅಂಕದ ಪುಸ್ತಕವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದ. ಆ ದಿನ ಯಾವ ಜಾತಿಯ ಕೋಳಿಯೊಂದಿಗೆ ತನ್ನ ಕೋಳಿ ಕಾದಾಡಬೇಕೆಂಬುದನ್ನೂ ತಿಳಿದುಕೊಂಡಿದ್ದ.

ಅಂತೂ ಇಂತೂ ಆ ದಿನ ಬಂದೇಬಿಟ್ಟಿತು. ರಾಮಣ್ಣ ಪೂರ್ಣ ತಯಾರಿಯೊಂದಿಗೆ ಅಂಕಕ್ಕೆ ಹೊರಡಲು ಸಜ್ಜಾದ. ಅವನ ಹೆಂಡತಿ ರಾಮಕ್ಕ ದೇವರ ಮನೆಯಿಂದ ಕುಂಕುಮ ತಂದು ಗಂಡನಿಗೆ ಮತ್ತು ಆತನ ಕೋಳಿಯ ಹಣೆಗೆ ಹಚ್ಚಿ, ''ವಿಜಯಶಾಲಿಗಳಾಗಿ ಬನ್ನಿ'' ಎಂದು ಹರಸಿದಳು. ಅಂಗಳಕ್ಕೆ ಬಂದ ರಾಮಣ್ಣ ತುಳಸಿಕಟ್ಟೆಯ ಎದುರಿಗೆ ನಿಂತು ಜಟಗ ದೇವರನ್ನು ನೆನೆದು ಒಂದು ತೆಂಗಿನಕಾಯಿಯನ್ನು ತನ್ನ ಕೋಳಿಗೆ ಸುಳಿದು ತೆಗೆದಿರಿಸಿದ. ಇನ್ನೇನು ದಣಪೆಯನ್ನು ದಾಟಿ ಆಚೆಗೆ ಕಾಲಿಡಬೇಕು ಎನ್ನುವಷ್ಟರಲ್ಲಿ ಎಲ್ಲಿಂದಲೋ ಬಂದ ಕಪ್ಪು ಬೆಕ್ಕು ಬಲದಿಂದ ಎಡಕ್ಕೆ ಹಾದುಹೋಯಿತು. ''ಥೂ... ಅಪಶಕುನ !'' ಎಂದವನೇ ಮುಂದಿಟ್ಟ ಕಾಲನ್ನು ಹಿಂದಕ್ಕೆಳೆದುಕೊಂಡು ತಿರುಗಿ ಮನೆಗೆ ಹೋಗಿ ಹತ್ತು ನಿಮಿಷ ಕುಳಿತುಕೊಂಡು ಮತ್ತೆ ಹೊರಡಲನುವಾದ. ಆಗ ಮನೆಯ ಎದುರಿಗಿದ್ದ ಮಾವಿನ ಮರದ ಮೇಲೆ ಕುಳಿತ ಮಂಡೆ ಕಾಗೆ ಕರ್ಕಶ ಶಬ್ದ ಮಾಡುತ್ತಾ ಕೂಗುತ್ತಿತ್ತು. ರಾಮಣ್ಣನಿಗೆ ಅದೂ ಸಹ ಒಂದು ರೀತಿಯ ಅಪಶಕುನದಂತೆ ಕಂಡಿತು. ''ಥೂ, ಇದನ್ನೆಲ್ಲಾ ಲೆಕ್ಕ ಹಾಕುತ್ತ ಕುಳಿತರೆ ತಡವಾಗುತ್ತೆ'' ಎಂದು ದೇವರ ಮೇಲೆ ಭಾರ ಹಾಕಿ ನಡೆದ ರಾಮಣ್ಣ.

ಮಾಸ್ತಿಬೈಲಿನ ಸಮಾರಂಭ ಚೆನ್ನಾಗಿ ನಡೆಯಿತು. ಅಲ್ಲಿ ವಿವಿಧ ಜಾತಿಯ ವಿವಿಧ ತಳಿಯ ಕೋಳಿಗಳನ್ನು ಪ್ರದರ್ಶಿಸಲಾಯಿತು. ಗ್ರಾಮ ಪಂಚಾಯಿತಿ ಅಧ್ಯಕ್ಷರು ಮತ್ತು ಬ್ಯಾಂಕಿನ ಅಧಿಕಾರಿಗಳು ನೆರೆದ ಜನರಿಗೆ ಕೋಳಿ ಸಾಕಾಣಿಕೆ ಮತ್ತು ಅದರ ಮಹತ್ವದ ಕುರಿತು ಹಲವಾರು ಮಾಹಿತಿಗಳನ್ನು ತಿಳಿಹೇಳಿದರು. ಕೋಳಿ ಸಾಕಾಣಿಕೆಯನ್ನು ಒಂದು ಉಪಕಸುಬನ್ನಾಗಿ ಮಾಡಿಕೊಳ್ಳಬಹುದು ಮತ್ತು ಅದರಿಂದ ದುಡಿಮೆ ಮಾಡಬಹುದೆಂದು ತಿಳಿಸಿ ಹೇಳಿದರು. ಸಮಾರಂಭ ಸಾಂಗವಾಗಿ ನೆರವೇರಿ ಮುಕ್ತಾಯ ಕಂಡಿತು.

ಆ ದಿನ ಸಾಯಂಕಾಲ ಐದು ಗಂಟೆಯ ನಂತರ ಕೋಳಿ ಅಂಕ ಆರಂಭವಾಯಿತು. ಅಲ್ಲಿ ಹಲವು ಅಂಗಡಿಗಳು ತೆರೆದಿದ್ದುದು ಒಂದು ಸಣ್ಣ ಜಾತ್ರೆಯನ್ನು ನೆನಪಿಸುವಂತಿತ್ತು. ಆ ದಿನ ಅಂಕ ನಡೆಯುವ ಸ್ಥಳದಲ್ಲಿ ಘಟಾನುಘಟಗಳೆಲ್ಲ ಹಾಜರಿದ್ದರು. ಕುಮಟಾದಿಂದ ಬಿಡ್ಡುದಾರರೆಲ್ಲ ಬಂದಿದ್ದರು. ಆ ದಿನ ರಾಮಣ್ಣನ ಕೋಳಿ ರಾಜನಂತೆ ಕಾಣುತ್ತಿತ್ತು. ಬಂದವರೆಲ್ಲರ ಕಣ್ಣುಗಳು ರಾಮಣ್ಣನ ಮೇಲೆ ಕೇಂದ್ರೀಕೃತವಾಗಿತ್ತು. ರಾಮಣ್ಣನ ಕೋಳಿ ಗೆದ್ದೇಗೆಲ್ಲುತ್ತದೆ ಎಂಬ ಭರವಸೆ ಇತ್ತು. ಬಂದವರಲ್ಲಿ ಹೆಚ್ಚಿನ ಜನರು ರಾಮಣ್ಣನ ಕೋಳಿಯ ಮೇಲೆಯೇ ಬಿಡ್ಡು ಮಾಡಿದರು. ಆ ದಿನ ರಾಮಣ್ಣನ ಕೋಳಿಗೆ ಎದುರಾಳಿ ಕುಳವೆಯ ಮಂಜಣ್ಣನ ಕೋಳಿ. ರಾಮಣ್ಣನ ಕೋಳಿಯೆದುರು ಮಂಜಣ್ಣನ ಕೋಳಿ ಆನೆಯೆದುರಿನ ಆಡಿನಂತೆ ಕಾಣುತ್ತಿತ್ತು. ಆದರೂ ಮಂಜಣ್ಣನ ಕೋಳಿ ರೋಷದಿಂದ ಎಗರಿ ಎಗರಿ ಬೀಳುತ್ತಿತ್ತು. ಅದರ ಆಕ್ರೋಶವನ್ನು ನೋಡಿದ ಕೆಲವರು ಮಂಜಣ್ಣನ ಕೋಳಿಯೇ ಗೆಲ್ಲಬಹುದೇನೋ ಎಂದು ಲೆಕ್ಕ ಹಾಕುತ್ತಿದ್ದರು. ಮೊದಲೆರಡು ಜೋಡಿ ಕೋಳಿಗಳ ಕಾದಾಟ ಮುಗಿದ ನಂತರ ರಾಮಣ್ಣನ ಕೋಳಿಯೊಂದಿಗೆ ಮಂಜಣ್ಣನ ಕೋಳಿಯನ್ನು ಕಾದಾಟಕ್ಕೆ ಬಿಡಲಾಯಿತು.

ಎರಡೂ ಕೋಳಿಗಳು ಭರ್ಜರಿಯಾಗಿ ಕಾದಾಡಿದವು. ಯಾವ ಕೋಳಿಯೂ ಸೋಲುವ ಲಕ್ಷಣಗಳು ಕಾಣಲಿಲ್ಲ. ಪ್ರತಿ ಹತ್ತು ನಿಮಿಷಗಳ ಕಾದಾಟದ ನಂತರ ಕೋಲಕಾರರು ಕೋಳಿಗಳನ್ನು ಹಿಂದಕ್ಕೆಳೆದುಕೊಂಡು ಅವಕ್ಕೆ ನೀರು ಕುಡಿಸಿ ಸ್ವಲ್ಪ ವಿಶ್ರಮಿಸಿಕೊಳ್ಳಲು ಅವಕಾಶ ಮಾಡಿಕೊಟ್ಟು ಮತ್ತೆ ಕಾದಾಡಲು ಬಿಡುತ್ತಿದ್ದರು. ಹೀಗೆ ಮೂರು ಆವೃತ್ತಿಯಾದರೂ ಯಾವ ಕೋಳಿಯೂ ಸೋಲದೆ ಭರ್ಜರಿಯಾಗಿ ಕಾದಾಡುತ್ತಿದ್ದವು. ಎರಡೂ ಕೋಳಿಗಳ ದೇಹವೆಲ್ಲಾ ರಕ್ತಸಿಕ್ತವಾಗಿತ್ತು. ಜನರು ಕುತೂಹಲಭರಿತರಾಗಿ ತುದಿಗಾಲಿನಲ್ಲಿ ನಿಂತು ಕೋಳಿಗಳ ಕಾದಾಟವನ್ನು ನೋಡುತ್ತಿದ್ದರು. ನೋಡನೋಡುತ್ತಿರುವಂತೆ ರಾಮಣ್ಣನ ಕೋಳಿ ತೀರಾ ಬಳಲಿದಂತೆ ಕಂಡುಬಂದಿತು. ರಾಮಣ್ಣ ಉತ್ಸಾಹ ಭರಿತನಾಗಿ, ''ಹೊಡಿಮಗ, ಹೊಡಿ'' ಎಂದು ಉತ್ತೇಜನ ಕೊಡುತ್ತಿದ್ದ. ಆದರೆ ಮಂಜಣ್ಣನ ಕೋಳಿ ಹಸಿದ ಹೆಬ್ಬುಲಿಯಂತೆ ವೀರಾವೇಶದಿಂದ ಹೋರಾಡುತ್ತಲೇ ಇತ್ತು. ನಂತರದ ಕೆಲವೇ ನಿಮಿಷಗಳಲ್ಲಿ ಕಾದಾಡಿ ಕಾದಾಡಿ ಸುಸ್ತಾದ ರಾಮಣ್ಣನ ಕೋಳಿ ಅಂಕದ ಅಖಾಡದಿಂದ ಹೊರಕ್ಕೆ ಓಡಿಹೋಯಿತು. ಎಲ್ಲರೂ ನಿಬ್ಬೆರಗಾಗಿ ಈ ದೃಶ್ಯವನ್ನು ನೋಡುತ್ತಲೇ ಇದ್ದರು. ಆದರೆ ಏನೂ ಮಾಡುವಂತಿರಲಿಲ್ಲ. ರಾಮಣ್ಣನ ಕೋಳಿ ಒಟ್ಟೆಯಾಯಿತು ಎಂದು ತೀರ್ಮಾನವಾಯಿತು. ರಾಮಣ್ಣನ ಕೋಳಿಯನ್ನು ನಂಬಿ ಬಿಡ್ಡು ಮಾಡಿದವರೆಲ್ಲರ ಮುಖ ಕಪ್ಪಿಟ್ಟುಹೋಯಿತು. ದುಡ್ಡು ಕಳೆದುಕೊಂಡ ಅವರೆಲ್ಲ ರಾಮಣ್ಣನಿಗೆ ಬಾಯಿಗೆ ಬಂದಂತೆ ಬೈಯತೊಡಗಿದರು. ಎಂದೂ ಯಾರಿಂದಲೂ ಬೈಸಿಕೊಳ್ಳದ ರಾಮಣ್ಣ ಆ ದಿನ ಜನರಾಡಿದ ಮಾತಿನಿಂದ ಅವಮಾನಿತನಾಗಿ ತಲೆತಗ್ಗಿಸಿ ನಿಂತ. ಅವನ ಕಣ್ಣಿನಿಂದ ದಳದಳನೆ ನೀರು ಸುರಿಯುತ್ತಿತ್ತು. ಇಂಥ ಅವಮಾನವನ್ನು ಸಹಿಸಿಕೊಂಡು ತಾನು ಬದುಕಿರಬಾರದು ಎಂದುಕೊಂಡ ರಾಮಣ್ಣ, ''ಇಷ್ಟುದಿನ ಕಾಪಾಡಿಕೊಂಡು ಬಂದಿದ್ದ ನನ್ನ ಮಾನಮರ್ಯಾದೆಯೆಲ್ಲ ಯಃಕಶ್ಚಿತ್ ಒಂದು ಅಂಕದ ಕೋಳಿಯಿಂದ ಮಣ್ಣುಪಾಲಾಯಿತು. ಮಾನ ಮರ್ಯಾದೆಯನ್ನು ಕಳೆದುಕೊಂಡ ನಾನು ಬದುಕಿದ್ದೇನು ಪ್ರಯೋಜನ'' ಎಂದು ಮನದಲ್ಲೇ ರೋದಿಸಿದ. ರಾಮಣ್ಣ ಹೇಗೋ ಮನೆ ಸೇರಿಕೊಂಡ.

ಮರುದಿನ ಗಾಡಿ ಹೊಡೆದುಕೊಂಡು ಪೇಟೆಗೆ ಹೋದರೂ ಕೆಲಸ ಮಾಡಲು ಮನಸ್ಸಾಗಲಿಲ್ಲ. ತನ್ನ ಗಿರಾಕಿಗಳೊಂದಿಗೆ ಮನಸ್ಸು ಬಿಚ್ಚಿ ಮಾತನಾಡಲಿಲ್ಲ. ರಾಮಣ್ಣನ ಈ ವರ್ತನೆ ಅವರಿಗೆಲ್ಲ ವಿಚಿತ್ರವಾಗಿ ಕಂಡಿತು. ಗಾಡಿಯ ಮೇಲೆ ಚೀಲ ಹೇರಿಕೊಂಡು ಕುಳಿತಿದ್ದರೂ ಮನಸ್ಸು ಮಾತ್ರ ಎಲ್ಲೋ ಓಡುತ್ತಿತ್ತು. ''ರಾಮಣ್ಣಾ ನಿನ್ನ ಕೋಳಿ ಹೇಡಿ... ಒಟ್ಟೆಯಾಗಿ ಹೋಯಿತು ಪುಕ್ಕಲು ಕೋಳಿ ನೋಡಲಿಕಷ್ಟೆ ಸೈತಾನ. ಆದರೆ ಕೋಳಿ ಮಾತ್ರ ಹೇಟಿ ಕೋಳಿ, ಇಂಥ ಕೋಳಿಯನ್ನು ಇಟ್ಟುಕೊಂಡು ಏಕೆ ಅಂಕಕ್ಕೆ ಬರ್ತ್ತೀಯಾ... ಎಲ್ಲಾದರೂ ಹೋಗಿ ಸಾಯಿ...'' ಎಂಬ ಕುಚೋದ್ಯದ ಮಾತುಗಳೂ ಕಿವಿಯಲ್ಲಿ ರಿಂಗಣಿಸತೊಡಗಿದವು.

ರಾಮಣ್ಣ ಅಂದು ಮನೆಗೆ ಹೋಗಲಿಲ್ಲ. ಸ್ಟ್ಯಾಂಡಿಗೆ ಬಂದು ಅಲ್ಲೇ ಒಂದು ಕಡೆ ಗಾಡಿ ನಿಲ್ಲಿಸಿ, ಆ ಗಾಡಿಗೆ ತನ್ನ ಎತ್ತನ್ನು ಕಟ್ಟಿ, ಅದಕ್ಕೆ ತಿನ್ನಲು ಹುಲ್ಲುಹಾಕಿದ. ಪೇಟೆಗೆ ಹೋಗಿ ಒಂದು ಬಾಟಲು ವಿಸ್ಕಿ ಖರೀದಿಸಿದ. ಸಾರಾಯಿ ವಾಸನೆ ಎಂದರೆ ಆಗದ ರಾಮಣ್ಣ ಆ ದಿನ ಕಂಠಪೂರ್ತಿ ಕುಡಿದು ಎಚ್ಚರ ತಪ್ಪಿದ. ಇತ್ತ ಮನೆಯಲ್ಲಿ ರಾಮಣ್ಣ ಮನೆಗೆ ಬರಲಿಲ್ಲ ಎಂದು ಕಾದೇ ಕಾದಳು ರಾಮಕ್ಕ. ಕೋಳಿ ಅಂಕಕ್ಕೆ ಹೋದರೆ ಒಮ್ಮೊಮ್ಮೆ ಮನೆಗೆ ಬರುವುದಿಲ್ಲ ಎನ್ನುವ ವಿಷಯ ರಾಮಕ್ಕನಿಗೆ ಗೊತ್ತಿದ್ದರಿಂದ ಎಲ್ಲೋ ಕೋಳಿ ಅಂಕಕ್ಕೆ ಹೋಗಿರಬೇಕೆಂದು ಸಮಾಧಾನ ಮಾಡಿಕೊಂಡಳು. ಆದರೆ ಕೋಳಿ ಅಂಕಕ್ಕೆ ಹೋಗುವುದಾದರೆ ರಾಮಣ್ಣ ಗಾಡಿಯನ್ನು ಒಯ್ಯುತ್ತಿರಲಿಲ್ಲ. ಮನೆಯಲ್ಲೇ ಇಡುತ್ತಿದ್ದ. ಇಂದು ರಾಮಣ್ಣನೂ ಬರಲಿಲ್ಲ, ಅವನ ಗಾಡಿಯೂ ಬರಲಿಲ್ಲ. ಗಾಡಿಯನ್ನೂ ಸಹ ಅಂಕ ನಡೆಯುವ ಸ್ಥಳಕ್ಕೆ ಒಯ್ದಿರಬೇಕು, ಹಾಗಾಗಿ ಗಾಡಿ ಬರಲಿಲ್ಲ ಎಂದು ಸಮಾಧಾನ ಮಾಡಿಕೊಂಡಳು ರಾಮಕ್ಕ.

ಎಂದಿನಂತೆ ಬೆಳಿಗ್ಗೆ ಎದ್ದು ಅಂಗಳ ಗುಡಿಸಿ ನೀರು ಚಿಮುಕಿಸಿ ರಂಗವಲ್ಲಿ ಹಾಕುತ್ತಿದ್ದಳು ರಾಮಕ್ಕ. ಆಗ ಕೊನೆ ಮನೆಯ ಗೋಪಾಲ ಸುದ್ದಿ ತೆಗೆದುಕೊಂಡು ಬಂದ. ''ರಾಮಕ್ಕಾ, ರಾಮಕ್ಕಾ... ಬೇಗ ಬಾ. ಸ್ಟ್ಯಾಂಡಿನಲ್ಲಿ ರಾಮಣ್ಣ...!? ಎಂದು ರಾಗ ಎಳೆದ. ಈ ಮಾತನ್ನು ಕೇಳಿ ರಾಮಕ್ಕನ ಶಕ್ತಿಯೇ ಉಡುಗಿಹೋಯಿತು. ''ಏನಾಯ್ತೊ ಗೋಪಾಲ ? ಏನಾಯ್ತೊ ರಾಮಣ್ಣಂಗೆ ?'' ಎಂದವಳೇ ಅವನ ಹಿಂದೆ ಓಡಿಹೋದಳು. ಸ್ಟ್ಯಾಂಡಿಗೆ ಬಂದು ನೋಡಿದರೆ ಅಲ್ಲಿ ರಾಮಣ್ಣ ರಕ್ತದ ಮಡುವಿನಲ್ಲಿ ಬಿದ್ದಿದ್ದ. ಅವನ ಪ್ರಾಣಪಕ್ಷಿ ಹಾರಿಹೋಗಿತ್ತು. ಅವನ ಪಕ್ಕದಲ್ಲಿ ಅವನ ಗಾಡಿ ಅನಾಥವಾಗಿ ಬಿದ್ದಿತ್ತು. ಗಾಡಿಗೆ ಕಟ್ಟಿದ್ದ ಎತ್ತು ಮೆಲುಕುಹಾಕುತ್ತಾ ಮಲಗಿತ್ತು. ರಾಮಣ್ಣ ಅಂಕದ ಕೋಳಿಗೆ ಕಟ್ಟುವ ಕತ್ತಿಯಿಂದಲೇ ತನ್ನ ಕೊರಳಿನ ನರ ಕತ್ತರಿಸಿಕೊಂಡಿದ್ದ. ಈ ದೃಶ್ಯವನ್ನು ನೋಡಿದ ರಾಮಕ್ಕ ಎದೆ ಬಿರಿಯುವಂತೆ ಅತ್ತಳು. ಈ ರೀತಿಯಾಗಿ ರಾಮಣ್ಣನ ಕೋಳಿ ಅವನ ಜೀವವನ್ನೇ ಬಲಿ ತೆಗೆದುಕೊಂಡಿತು.



ಎಂ. ಬಿ. ನಾಯ್ಕ
C/o ರಾಮಶೆಟ್ಟಿ, ೬ನೇ ಅಡ್ಡರಸ್ತೆ, ಶಾಂತಿನಗರ, ಕಾವೇರಿ ಪ್ರೌಢಶಾಲೆಯ ಹಿಂಭಾಗ
ತಮಲಾಪುರ, ಹಾಸನ - ೫೭೩ ೨೦೧

"ತ್ರಿಕಾಲ ಸಾಹಿತ್ಯವನ್ನು
ಯಾರೂ ಬರೆಯಬಹುದು,
ಆದರೆ ಈಗ ನಮಗೆ ಬೇಕಾಗಿರುವುದು
ಸಕಾಲ ಸಾಹಿತ್ಯ."

– ಕುವೆಂಪು ಭಾಷಣದಿಂದ

# ಕುಟ್ಟುಂಡಿ





ಕುದಾಳ್ ಜಗದೀಶ್

ಮಂಗಳೂರಿನಲ್ಲಿ ನನ್ನಣ್ಣನ ಮಗಳ ಮದುವೆಗೆ ಹೊರಟಿದ್ದೆ. ದಕ್ಷಿಣ ಕನ್ನಡದ ಪ್ರಸ್ತುತ ವಿದ್ಯಮಾನ ಆತಂಕಕ್ಕೀಡುಮಾಡಿತ್ತು, ಸಕಲೇಶಪುರ ದಾಟಿ ಗುಂಡ್ಯಾ ಸಮೀಪಿಸುತ್ತಿದ್ದಂತೆ ಸೆಕೆಯಿಂದ ಕಿಟಕಿಯ ಗಾಜು ಸರಿಸಿದೆ. ನುಗ್ಗಿ ಬಂದ ಗಾಳಿ, ಇಲ್ಲಿ ಎಲ್ಲವೂ ಸರಿ ಇಲ್ಲ ಹುಷಾರ್ ! ಎಂಬಂತೆ ಧ್ವನಿ ಹೊರಡಿಸಿತು.

ಬಸ್ಸು ಒಂದೊಂದು ಕಿಲೋಮೀಟರ್ ಕಲ್ಲುಗಳ ಹಿಂದಿಕ್ಕಿ ಮುನ್ನುಗ್ಗುವಾಗ ನನ್ನಲ್ಲಿ ಆತಂಕ ಹೆಚ್ಚುತ್ತಿತ್ತು. ಬಸ್ಸು ಮಂಗಳೂರು ಕೇಂದ್ರ ನಿಲ್ದಾಣದಲ್ಲಿ ನಿಂತಾಗ ದೊಡ್ಡ ನಿಟ್ಟುಸಿರುಬಿಟ್ಟೆ, ಬಸ್ಸಿನಿಂದ ಇಳಿದು ನನ್ನಣ್ಣನ ಮನೆಗೆ ಹೋಗುವಂತಹ ಬಂಧುಗಳು ಯಾರಾದ್ರೂ ಇದ್ರೆ ಒಂದೇ ಆಟೋದಲ್ಲಿ ಹೋಗಬಹುದೆಂದು ಸುತ್ತಾಮುತ್ತ ಕಣ್ಣಾಡಿಸಿದೆ. ನನ್ನೆದುರಾಗಿ ಖಾಕಿ ಯೂನಿಫಾರಂ ತೊಟ್ಟು ಬರುತ್ತಿದ್ದ ವ್ಯಕ್ತಿಯೊಂದಿಗಿದ್ದ ಹೆಣ್ಣುಮಗಳು ನನ್ನ ನೋಡಿ ಗಪ್ಪಂತ ನಿಂತಳು. ನನ್ನ ಮುಖವನ್ನು ದೃಷ್ಟಿಸುತ್ತ, "ಜಗ್ಗು" ಅಂದ್ಲು. "ಹುಂ...ನೀ...ವು ? ಕುಟ್ಟುಂಡಿ ?" ಅಂದೆ. ನಾಚಿ ನೀರಾದಳು. ಸಾವರಿಸಿಕೊಂಡು "ಇವ್ರು ನಮ್ಮ ಯಜಮಾನ್ರು" ಎಂದು ಗಂಡನನ್ನ ಪರಿಚಯಿಸುವಾಗ, "ನಾನು ಜಗದೀಶ" ಅಂದು ಕೈ ಕುಲಕಲು ಹೋದೆ. ಆತ ನನ್ನನ್ನು ತಬ್ಬಿಕೊಂಡ. ನಾನೂ ತಬ್ಬಿಕೊಂಡು ಬೆನ್ನು ಸವರಿದೆ, ಭಾವಪರವಶತೆಯಿಂದ. ಆತ ಮಾತು ಕಳೆದುಕೊಂಡಿದ್ದ.

"ನೆನ್ನೆಸ್ರು ? ಮರೆತು ಹೋಯಿತು" ಅಂದೆ, "ಮಮ್ತಾಜ್. ಅಲ್ವೇನೋ ? ಅದ್ಸರಿ ನೀನಿಲ್ಲಿ ?" "ಅಣ್ಣನ ಮಗಳ ಮದ್ವೆ ಇತ್ತು. ಬಂದಿದ್ದೆ." "ನಿನ್ನೊಟ್ಟಿಗೆ ತುಂಬಾ ಮಾತ್ನಾಡಬೇಕು. ಎಲ್ಲಿ ಮದ್ವೆ ?" ಪ್ರಶ್ನಿಸಿದಳು, "ಮಂಗಳ ದೇವಿ ಕಲ್ಯಾಣಮಂಟಪದಲ್ಲಿ, ನಾಳೇನೆ ಮದ್ವೆ" ಅಂದೆ. "ನಾನೇ ಅಲ್ಲಿಗೆ ಬರ್ತೀನೆ. ಈಗ ಹೋಗು" ಎಂದು ನಿಲ್ಲದೆ ಹೋದಳು ತಿರುತಿರುಗಿ ನೋಡುತ್ತ.

ಸಂತೇಬೆನ್ನೂರಿನಲ್ಲಿ ಒಂದೇ ಓಣಿಯಲ್ಲಿ ನಮ್ಮಿಬ್ಬರ ಮನೆಯಿತ್ತು, ಅವಳು ನಾಲ್ಕು, ನಾನು ಐದನೇ ತರಗತಿ. ಅವರ ಮನೆಯಲ್ಲಿ ಗಂಡು ಮಕ್ಕಳಿರಲಿಲ್ಲ. ನಮ್ಮ ಮನೆಯಲ್ಲಿ ನನಗೆ ಅಣ್ಣಂದಿರಿದ್ದರೇ ಹೊರತು ಅಕ್ಕ ತಂಗಿಯರು ಇರಲಿಲ್ಲ, ಹಾಗಾಗಿಯೇ ಏನೋ ಮಮ್ತಾಜ್ ಮತ್ತು ನನ್ನಲ್ಲಿ ಅಣ್ಣ ತಂಗಿಯ ಬಾಂಧವ್ಯ ಬೆಳೆದಿತ್ತು.

ಮಮ್ತಾಜ್‌ಗೆ ಕುಟ್ಟುಂಡಿ ಅಂದ್ರೆ ಪಂಚಪ್ರಾಣ. ಆಕೆ ಮಾಡುತ್ತಿದ್ದ ಕುಟ್ಟುಂಡಿ ತುಂಬಾ ರುಚಿ ಇರುತ್ತಿತ್ತು. ಒಮ್ಮೆ ನನಗಾಗಿ ತೆಗೆದಿಟ್ಟಿದ್ದ ಕುಟ್ಟುಂಡಿ ತುಂಬಾ ಹೊತ್ತು ಇಟ್ಟುಕೊಂಡು ಕಾದಿದ್ದಳು, ನಾನು ಬರುವುದು ತಡವಾಗಿತ್ತು. ನಾನು ಬಂದು ನೋಡಿದಾಗ ಕುಟ್ಟುಂಡಿ ಚೀಪಿ ಚೀಪಿ ಅದು ಸವೆದುಹೋಗಿತ್ತು. ಅದನ್ನೇ ಕೊಡಬಂದಳು. ಏನೂ ಬೇಡ ಹೋಗು ಎಂದು ಹೊರಟುಬಂದಿದ್ದೆ, ಮರುದಿನ ಶಾಲೆಗೆ ಹೋಗುವಾಗ ದಾರಿಯಲ್ಲಿ ಕಾಯುತ್ತಿದ್ದಳು. ನನ್ನ ಕೊರಳ ಪಟ್ಟಿ ಹಿಡಿದು ಹೋ ಎಂದು ಅತ್ತಳು. ಕೊರಳ ಪಟ್ಟಿಯನ್ನೇ ಬಿಡಿಸಿಕೊಳ್ಳುತ್ತ "ನಾನೇನು ಮಾಡ್ದೇ ನಿನಗೆ ?" ಅಂದೆ. "ನೀನು ಕೊಟ್ಟ ಎಂಜಲು ನಾನು ಎಷ್ಟು ಸರ್ತಿ ತಿಂದಿಲ್ಲಾ ? ನನ್ನೆಂಜಲು ನೀ ತಿಂದ್ರೆ ಸತ್ತು ಹೋಗ್ತಿದ್ಯಾ ?" ಅಂದು ಅಳು ಮುಂದುವರಿಸಿದಳು, ಆಗ ನನ್ನ ತಪ್ಪಿನ ಅರಿವಾಗಿ, "ಆಯಿತು ಬಿಡು. ಇನ್ಮುಂದೆ ಹಂಗೆ ಮಾಡಲ್ಲ" ಅಂದೆ. ಆಕೆಯ ಕೆನ್ನೆ ಮೇಲಿದ್ದ ಕಣ್ಣೀರನ್ನು ಒರೆಸಿದೆ. ಮುಖದಲ್ಲಿ ನಗೆ ಇತ್ತು. ಕಣ್ಣಲ್ಲಿ ಬೆಳಕಿತ್ತು.

ಅಂದಿನಿಂದ ನಾನು ಅವಳಿಗೆ ಕೀಟಲೆ ಮಾಡ್ಬೇಕಿದ್ರೆ 'ಕುಟ್ಟುಂಡಿ ಕಳ್ಳಿ' ಅಂದ್ರೆ ಅವಳಿಗೆ ಸಿಟ್ಟು ಸರ್ರನೆ ಬರುತ್ತಿತ್ತು, ಆ ಸಿಟ್ಟು ವಿಪರೀತಕ್ಕೆ ಹೋದಾಗ, "ಜಗ್ಗು ಭಟ್ಟ ತೇಗು ಬಿಟ್ಟ. ಮನೆ ಮನೆಗೆಲ್ಲ ನಾತ ಕೊಟ್ಟ" ಅಂತೆಲ್ಲ ಹೇಳಿ...ವ್ವ...ವ್ವ ಎಂದು ಹಂಗಿಸುತ್ತಿದ್ದಳು.

ಹೀಗೆ ಕಾಲಚಕ್ರ ಉರುಳಿತ್ತು, ಕುಟ್ಟುಂಡಿ ಅಲಿಯಾಸ್ ಮಮ್ತಾಜ್ ಎಸ್.ಎಸ್.ಎಲ್.ಸಿ.ಗೆ ಬರುವಷ್ಟರಲ್ಲಿ ಹೆಣ್ಣಾಗಿದ್ದಳು. ನಮ್ಮಿಬ್ಬರ ಸ್ನೇಹ ಹಾಗೆ ಇತ್ತು, ಹುಡುಗಿ ಹೆಣ್ಣಾಗುವುದು ಅಂದರೇನೆಂದು ನನಗೆ ಗೊತ್ತಿರಲಿಲ್ಲ.

ಪಿ.ಯು.ಸಿ. ಸೆಕೆಂಡ್ ಇಯರ್ ಹೊತ್ತಿಗೆ ನನ್ನ ಬೂಸ ಕಟ್ಟಿ ಕತ್ತೆಯು ಸುಂದರವಾಗಿ ಕಾಣುವಷ್ಟರಲ್ಲಿ ಮಮ್ತಾಜ್. ಅಹಮದ್‌ನನ್ನು

ಮದುವೆಯಾಗಿ ಹಾರಿಹೋಗಿದ್ದಳು. ನಾನು ದಾವಣಗೆರೆಯಲ್ಲಿ ಬಿ.ಎ., ಎಲ್‌ಎಲ್.ಬಿ. ಮಾಡಿ ಪ್ರಾಕ್ಟೀಸ್‌ಗೆಂದು ಬೆಂಗಳೂರಿಗೆ ಬಂದವನು ಬೆಂಗಳೂರಿನವನಾಗಿ ಹೋಗಿದ್ದೆ; ಹೆಂಡತಿ, ಒಬ್ಬ ಮಗ, ಸೊಸೆಯೊಂದಿಗೆ.

ಬೆಳಗ್ಗೆ ಮದುವೆ ಮನೆಯಲ್ಲಿ ಸಡಗರದಿಂದ ನೆಂಟರಿಷ್ಟರನ್ನು ಸ್ವಾಗತಿಸುತ್ತ ಮಮ್ತಾಜ್‌ಳ ನಿರೀಕ್ಷೆಯಲ್ಲಿದ್ದೆ, ನನಗೆ ಹಸಿವು, ತಿಂಡಿಗೆ ಹೋಗೋಣವೆಂದ್ರೆ ಅಕಸ್ಮಾತ್ ನಾನು ಆ ಕಡೆ ಹೋಗಿ ಇವಳೂ ಈ ಕಡೆ ಬಂದುಬಿಟ್ರೆ ಎಂಬ ಅಳುಕು. ಹಾಲ್‌ನಲ್ಲಿ ಕುಳಿತಿದ್ದವರನ್ನು ತಿಂಡಿ ಆಯಿತಾ, ಎಂದು ಒಂದು ಕಡೆಯಿಂದ ಕೇಳುತ್ತ ಬಂದೆ. ಹಿಂದಿನ ಸೀಟುಗಳ ಮೂಲೆಯಲ್ಲಿ ಕುಳಿತಿದ್ದ ಮಮ್ತಾಜ್, ಮುಗುಳ್ನಗುತ್ತ ಎದ್ದು ಬಂದಳು. ''ಏನ್ರೀ ನಿಮ್ಮ ವೇಷ ?'' ಅಂದೆ. ''ನಿಮ್ಮ ಅಲ್ಲ, ನಿನ್ನ ಅನ್ನು. ನಾನು ನಿನ್ನ ಎಂಜಲು ತಿಂದು ಬೆಳೆದ ತಂಗಿ,'' ಅಂದಳು. ''ಸಾರಿ ಕಣೆ ಮಮ್ತಾಜ್ ಅಂದೆ. ''ಉ...ಶ್... – ಮಮ್ತಾಜ್ ಅನ್ಬೇಡ ಮಮತ ಅನ್ನು, ಇಲ್ಲ ಕುಟ್ಟುಂಡಿ ಅಂತಾನೇ ಅನ್ನು ಪರ್ವಾಗಿಲ್ಲ'' ಅಂದ್ಲು, ಬೆರಗಾಗಿ ಅವಳನ್ನೇ ನೋಡುತ್ತ ನಿಂತೆ. ''ಬಾ, ನನಗೂ ಹಸಿವಾಗಿದೆ. ಬೆಳಗ್ಗೆಯಿಂದ ನೋಡ್ತಿದ್ದೀನಿ. ಎಲ್ಲರಿಗೂ ತಿಂಡಿಗೆ ಕಳಿಸ್ತಿದ್ದೀಯಾ, ನೀನು ಮಾತ್ರ ಹೋಗ್ಲೇ ಇಲ್ಲ, ನಡಿ ನಡಿ'' ಎಂದು ನನ್ನ ಹೊರಡಿಸಿದಳು.

ಮುಂಜಾನೆಯ ತಿಂಡಿಗೆ ಸಜ್ಜಿಗೆ, ಬಜೀಲು ಮಾಡಿದ್ರು ಅವಲಕ್ಕಿಯನ್ನು ಬಾಯಿಗೆ ಹಾಕಿಕೊಳ್ಳುತ್ತ ''ನನಗೆ ನಂಬಿಕೆಯಾಗ್ತಿಲ್ಲ'' ಅಂದೆ.




''ಇಲ್ಲಿಯ ಪರಿಸ್ಥಿತಿ ನಿಂಗೇನೋ ಗೊತ್ತು? ನೀನು ನನ್ನ ಬಾಲ್ಯದ ಗೆಳೆಯ ಮಾತ್ರವಲ್ಲ, ಅಣ್ಣ ಇದ್ದಂಗೆ. ನಿನ್ನೆ ಬಸ್ಟಾಂಡ್‌ನಲ್ಲಿ ಏನಾಯಿತು ಗೊತ್ತ? ನಿನ್ಹತ್ರ ಮಾತಾಡುವಾಗ ನಾಲ್ಕೈದು ಜನ ಬಂದ್ರು. ಅವ್ರನ್ನ ನೋಡಿಯೇ ನನಗೆ ಭಯ ಆಯಿತು, ಅದ್ಕೇ ಹೋಗಿಬಿಟ್ಟೆ. ''ಸಾರಿ ಕಣೋ'' ಅಂದ್ಲು ''ಇರಲಿ ಬಿಡು. ಪರ್ವಾಗಿಲ್ಲ, ಮುಂದೆ ಒಳ್ಳೆ ದಿನ ಬಂದೇ ಬರುತ್ತೆ. ಆಗ ನಾನೇ ನೇರವಾಗಿ ನಿನ್ನ ಮನೆಗೆ ಬರ್‍ತೇನೆ.'' ಅಂದೆ. ಮಮ್ತಾಜ್ ನನ್ನ ಕಣ್ಣಲ್ಲಿ ಕಣ್ಣು ನೆಟ್ಟಿದಳು. ಅದರಲ್ಲಿ ಕಿಡಿ ಹಾರುತ್ತಿತ್ತು. ನಾನು ಹಣೆಗೆ ಬೊಟ್ಟಿಟ್ಟಿದ್ದರಿಂದ ''ನನ್ನ ಧರ್ಮ ಹಾಳಾದ್ರೆ ಹಾಳಾಗಿ ಹೋಗ್ಲಿ, ಇಲ್ಲ ನಿನ್ನ ಧರ್ಮ ಹಾಳಾಗುತ್ತ? ಹಾಳಾಗ್ಲಿ ಅಣ್ಣ ತಂಗಿ ಒಟ್ಟಿಗೆ ಕೂತು ಮಾತಾಡ್ಲಿಕ್ಕೆ ಬಿಡದ ಧರ್ಮ ಅದೊಂದು ಧರ್ಮಾನಾ ? ಬೆಂಕಿ ಹಾಕ್ತು ಆ ಧರ್ಮಕ್ಕೆ'' ಅಂದ ಅವಳ ಮುಖದಲ್ಲಿ ಒಳಗಿನ ಬೆಂಕಿ ದಿಗಿದಿಗಿ ಅಂತ ಉರಿತೀತ್ತು.

''ಬೆಂಗಳೂರಲ್ಲಿ ನೀನು ಏನು ಮಾಡಿ ಕೊಂಡಿದ್ದೀಯಾ ?'' ಅವಳ ಪ್ರಶ್ನೆಗೆ, ನನ್ನ ಲಾಯರ್ ವೃತ್ತಿಯ, ಕಷ್ಟನಷ್ಟ, ನೋವುನಲಿವುಗಳನ್ನೆಲ್ಲ ಹೇಳಿಕೊಂಡೆ. ನಂತರ ತನ್ನ ಪ್ರವರ ಬಿಚ್ಚಿಟ್ಟಳು (ಡೈನಿಂಗ್ ಹಾಲ್‌ನಲ್ಲಿ ನಾವಿಬ್ಬರೆ ಇದ್ದಿದ್ದರಿಂದ ಮನಬಿಚ್ಚಿ ಮಾತಾಡಿದೆವು.) ಆಕೆ ತನ್ನ ಗಂಡನೊಂದಿಗೆ ನನ್ನ ಬಗ್ಗೆ ಆಗಾಗ ಮಾಡಾಡುತ್ತಿದ್ದಳಂತೆ.

ಅಹಮದ್ ನಿನ್ನೆ ನಾನು ಬಂದಿದ್ದ ಗೌರ್ನಮೆಂಟ್ ಬಸ್ಸಿನ ಡ್ರೈವರ್, ಮಗ ದುಬೈನಲ್ಲಿದ್ದಾರೆ. ಮಗ ಕಳಿಸಿದ ಹಣದಿಂದ ರಜಿಯಾ ಎಲ್‌ಎಲ್.ಬಿ. ಮಾಡಿ, ಪ್ರಾಕ್ಟೀಸಿಗೆ ಮಂಗಳೂರಿನಲ್ಲಿ ಒಬ್ಬ ಸೀನಿಯರ್ ಲಾಯರ್ ಹತ್ತಿರ ಸೇರಿಕೊಂಡಿದ್ದಳು. ಇತ್ತೀಚೆಗೆ ಈಕೆಯೊಂದಿಗೆ ಕಕ್ಷಿದಾರನೊಬ್ಬ ಮಾತಾಡಿದ್ದಕ್ಕೆ ಕಕ್ಷಿದಾರನ ಮೇಲೆ ಹಲ್ಲೆಯಾಗಿತ್ತು, ಹಾಗಾಗಿ ಸೀನಿಯರ್ ಇವಳನ್ನು ತನ್ನ ಛೇಂಬರ್‌ನಿಂದ ಹೊರಹಾಕಿದ್ದರು. ಪಕ್ಷಪಾತವಾದ್ರೂ ಪರ್ವಾಗಿಲ್ಲ ಎಂದು ಬರೆ ಸಾಬರ ಕೇಸುಗಳನ್ನೇ ಹಿಡಿದಳು. ಒಂದನೇ ಹಿಯರಿಂಗ್, ಎರಡನೇ ಹಿಯರಿಂಗ್ ಗಳಲ್ಲಿ, ಪಾಲುಗೊಳ್ಳುತ್ತಿದ್ದ ಕಕ್ಷಿದಾರ ಮೂರನೇ ಹಿಯರಿಂಗ್‌ಗೆ ಕಕ್ಷಿದಾರನೇ ಸ್ವಇಚ್ಛೆಯಿಂದ ಕೇಸನ್ನು ಹಿಂದೆ ಪಡೆಯುತ್ತಿದ್ದ, ರೋಸಿಹೋದ ರಜ಼ಿಯಾ ಯಾವ ಕೇಸನ್ನೂ ಹಿಡಿಯದೆ ಮನೆಯಲ್ಲೇ ಉಳಿದು ಮೌನಿಯಾದಳು, ಆದರೆ ಆಕೆಯ ಮುಂದಿದ್ದ ಸವಾಲು ಮತ್ತು ಆಕೆಯ ಯೌವನ ಅವಳನ್ನು ಸುಮ್ಮನಿರಗೊಡಲಿಲ್ಲ. ಆಕೆ ಗಾಂಧಿ, ಅಂಬೇಡ್ಕರ್ ಅವರನ್ನು ಚೆನ್ನಾಗಿ ಓದಿಕೊಂಡಿದ್ದ ದಿನಗಳಲ್ಲಿ ನಾನು ಮಂಗಳೂರಿಗೆ ಹೋಗಿದ್ದೆ.

ಮದುವೆ ಮಂಟಪದಿಂದ ಸ್ವಲ್ಪವೇ ದೂರದಲ್ಲಿ ಕೂತಿದ್ದ, ಮಮ್ತಾಜ್ ಧಾರೆಯಾದ ನಂತರ ನನ್ನ ಸಮೀಪ ಬಂದು, ಎಲ್ಲಾದರೂ ಕುಳಿತುಕೊಳ್ಳೋಣ ಬಾ ಅಂದ್ಲು. ತೀರ ಹಿಂದೆ ಯಾವುದಾದರೂ ಎರಡು ಖಾಲಿ ಚೇರ್ ಇದೆಯಾ ಅಂತ ನೋಡಿದೆ, ದೂರದಲ್ಲಿ ಕುಳಿತಿದ್ದ ನನ್ನ ಸೋದರಮಾವ ಸುಬ್ಬಣ್ಣ, ಬಾ, ಬಾ ಅಂತ ಕರೆದರು. ನಾನು ಅವರಿದ್ದಲ್ಲಿ ಹೋಗಿ ಅವರ ಕಾಲು ಮುಟ್ಟಿ ನಮಸ್ಕರಿಸಿದೆ. ಬೆನ್ನ ಹಿಂದೆ ಮಮ್ತಾಜ್ ಬಂದಿದ್ದು ನನ್ನ ಗಮನಕ್ಕೆ ಬಂದಿರಲಿಲ್ಲ. ಮಾವ, ''ಅವರ್‍ಯಾರು ?'' ಅಂದ್ರು. ''ಇವ್ರು ಮಮತಾಂತ ನನ್ನ ಕ್ಲೈಂಟ್. ನಾನು ಮಂಗಳೂರಿಗೆ ಹೋಗ್ತೇನೆ ಅಂದಾಗ ''ನಾನು ನಿಮ್ಮೊಂದಿಗೆ ಬರಬಹುದಾ ? ಹಾಗೇ ನಾನು ಧರ್ಮಸ್ಥಳ ನೋಡಬೇಕು ಅಂದ್ರು. ಆಯಿತು ಬನ್ನಿ ಅಂದ್ರೆ, ಬಂದ್ರು.'' ಮಮ್ತಾಜ್ ಅವರಿಗೆ ಕೈ ಮುಗಿದು ಹಲ್ಕು ಕಿಸಿದಳು. ಮಾವ ಬೊಚ್ಚು ಬಾಯಿ ತೆರೆದು ನಮಸ್ಕರಿಸಿ, ಇಲ್ಲೆ ಕುಳಿತುಕೊಳ್ಳಿ ಎಂದು ಸನ್ನೆ ಮಾಡಿದರು. ನಾನು ಮಮ್ತಾಜ್ ಕಡೆ ನೋಡಿದೆ. ಆಕೆ ಅಲ್ಲಿದ್ದ ಚೇರಲ್ಲಿ ಕೂತೇಬಿಟ್ಟಳು. ನನಗೊಂಥರ ಕಸಿಪಿಸಿ. ಆದರೂ ಕೂತೆ. ನನ್ನ ವ್ಯವಹಾರದಿಂದ ಶುರುವಾದ ಮಾತುಕತೆಗಳಲ್ಲಿ ನೇಜಿ ನೆಡುವುದರಿಂದ ಹಿಡಿದು ಕೂಲಿಗಳ ಬರ, ಕಷ್ಟಕಾರ್ಪಣ್ಯ ಎಲ್ಲವೂ ಬಂದುಹೋಯಿತು. ಮಾತಿನ ಕೊನೆಯಲ್ಲಿ ಇಲ್ಲಿಯ, ಅಂದ್ರೆ ಇಡೀ ದಕ್ಷಿಣ ಕನ್ನಡದ ಇಂದಿನ ಪರಿಸ್ಥಿತಿಗೆ ಕಾರಣವೇನು ? ಎಂದು ಕೇಳಿದೆ.

ಸಂಸಾರಿಗೆ ಒಂದೇ ಚಿಂತೆಯಾದ್ರೆ, ಸನ್ಯಾಸಿಗೆ ನೂರಾರು ಚಿಂತೆ ಅಂದ್ರು ಮಾವ. ನನ್ನ ಪ್ರಶ್ನೆಗೆ ಇದು ಸಮಂಜಸ ಉತ್ತರವಲ್ಲ ಅಂದೆ. ಬೊಚ್ಚುಬಾಯಿ ತೆರೆದು ದೊಡ್ಡದಾಗಿ ನಕ್ಕರು. ನಾನು ಮತ್ತು ಮಮ್ತಾಜ್ ಪೆಚ್ಚಾಗಿ ಅವರ ಮುಖವನ್ನೇ ನೋಡುತ್ತಿದ್ದೆವು. ''ಅರ್ಥ ಆಗಲಿಲ್ಲವಾ'' ಎಂದು ಕೇಳಿದೆವು. ''ಇಲ್ಲ'' ಎಂದು ತಲೆ ಆಡಿಸಿದೆ. ''ದಡ್ಡ'', ದಡ್ಡ! ಈಗ ನಮ್ಮ ಸೌತ್ ಕೆನರಾದಲ್ಲಿ ಹೆಣ್ಣಿಗೆ ಬರ ಮಾರಾಯ. ಇಪ್ಪತ್ತರ ಪ್ರಾಯದಿಂದ ಹಿಡಿದು ಐವತ್ತರ ಪ್ರಾಯದವರೆಗೂ ಮದುವೆಯಾಗದಿರುವವರು ಇದ್ದಾರೆ. ಇವತ್ತು ಎಲ್ಲರಿಗೂ ಒಂದೊಂದು ಹೆಣ್ಣು ಸಿಕ್ಕು, ಮದ್ವೆ, ಮಕ್ಳು ಮರಿ ಅಂತ ಆಗದಿದ್ರೆ ಏನು ಸಂಸಾರ ಅಂತ ಮೈ ಬಗ್ಗಿಸಿ ದುಡಿಯೋದು ? ಯಾವ ಪುರುಷಾರ್ಥಕ್ಕೆ ಅಂತ ದುಡಿಯುವುದು ಹೇಳು ?'' ಎಂದರು.

''ಮಾವ ಇಷ್ಟೆಲ್ಲ ಅನಾಹುತಕ್ಕೆ ಮೂಲ ಕಾರಣವೇನು ?'' ಅಂದೆ, ಭೂಸುಧಾರಣಾ ಕಾಯ್ದೆ ಎನ್ನುತ್ತ ನನ್ನ ಮತ್ತು ಮಮ್ತಾಜ್‌ಳ ಮುಖ ನೋಡುತ್ತ ಕುಳಿತರು. ಮಾಮನ ಮಾತನ್ನು ನಾನು ಬಿಲ್‌ಕುಲ್ ಒಪ್ಪಲಿಲ್ಲ. ''ಕಾರಣ ಉಂಟು ಮಹಾರಾಯ. ನೀನು ವಕೀಲ ಅಲ್ವಾ, ಬಿಡಿಸಿ ಹೇಳಿಯೇ ಬಿಡು ನೋಡೋಣ'' ಎಂದು ಸವಾಲ್ ಹಾಕಿದರು.

ಸವಾಲ್‌ಗೆ ಪಾಟಿ ಸವಾಲ್ ಹಾಕಿ ನ್ಯಾಯಾಲಯದಲ್ಲಿ ಇಪ್ಪತ್ತು ವರ್ಷದಿಂದ ಕೇಸುಗಳ ಗೆಲ್ಲುತ್ತಿದ್ದ ನಾನು ನಾಲ್ಕನೇ ಇಯತ್ತೆಯನ್ನು ಓದದ ನನ್ನ ತಾಯಿಯ ಅಣ್ಣನ ಮುಂದೆ ತಲೆ ತಗ್ಗಿಸಿ ಕುಳಿತಿದ್ದೆ.

ಮಮ್ತಾಜ್‌ಳ ಮುಖ ನೋಡಿದೆ. ನಿನಗೆ ಹಂಗೇ ಆಗ್ಬೇಕು ಅನ್ನುವಂಥ ನಗೆ ಇತ್ತು ಅವಳ ಮುಖದಲ್ಲಿ. ಅದಕ್ಕೆ ಸರಿಯಾಗಿ ಅಡುಗೆಯವರ ಕಡೆಯವನೊಬ್ಬ ''ಇದೆ ಕೊನೆ ಪಂಕ್ತಿ, ಊಟ ಆಗದೆ ಇದ್ದವರು ಊಟಕ್ಕೆ ಬರಬೇಕು'' ಎಂದು ದೊಡ್ಡ ಗಂಟಲಿನಲ್ಲಿ ಕೂಗಿದ, ಎರಡು ಮೂರು ಬಾರಿ.

ನಡೀರಿ ಊಟಕ್ಕೆ ಎಂದು ಹೊರಡಿಸಿದ ಮಾಮ ನನ್ನ ಕೈಯನ್ನು ಮೃದುವಾಗಿ ಹಿಸುಕಿ ಮನಸ್ಸಿಗೆ ನೋವು ಮಾಡಿಕೊಂಡು ಪ್ರಶ್ನೆಗೆ ಉತ್ತರ ಹುಡುಕಬೇಡ, ಫಕ್ಕನೆ ಉತ್ತರ ಸಿಕ್ಕಲ್ಲ, ಅಂದ್ರು.

ಅವರೊಂದಿಗೆ ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದೆವು. ''ಪರ್ವಾಗಿಲ್ಲ, ನೀವು ಹೋಗಿ. ನಾನು ಸ್ವಲ್ಪ ನಿಧಾನವೇ'' ಅನ್ನುತ್ತ ಹಿಂದೆ ಉಳಿದರು. ಮಮ್ತಾಜ್, ನಾನು ಸರಸರ ಹೋಗಿ ಇಬ್ಬರೆ ಕುಳಿತುಕೊಳ್ಳಲು ಜಾಗ ಇರುವ ಸಾಲಿನಲ್ಲಿ ಊಟಕ್ಕೆ ಕೂತೆವು. ''ತಿರ್ಗಾ ಎಲ್‌ಎಲ್.ಬಿ. ಕಟ್ತಿಯೇನೋ ?'' ಅಂದ್ಲು, ಯಾಕೆ, ಅನ್ನುವಂತೆ ಅವಳ ಮುಖ ನೋಡಿದೆ. ತಿರ್ಗಾ ಎಲ್‌ಎಲ್.ಬಿ. ಕಟ್ಟೋ ನಿಂ ಮಾವಂಗೆ ಉತ್ತರಿಸಬೇಕಲ್ಲ? ಅಂದಳು. ನನಗೆ ಮೈಯೆಲ್ಲ ಉರಿದುಹೋಯಿತು.

''ಕುಟ್ಟುಂಡಿ ತಮಾಷೆ ಮಾಡ್ಲಿಕ್ಕೂ ಒಂದು ಮಿತಿ ಇದೆ ಅಂದೆ.'' ''ಸಾರಿ ಕಣೋ. ಅಣ್ಣ, ಸಾರಿ'' ಅಂತ ತುಂಬ ನೈಸ್ ಮಾಡಿದ್ಲು, ನನ್ನ ಕೋಪ ಅಷ್ಟಕ್ಕೆಲ್ಲ ತಕ್ಷಣಕ್ಕೆ ತಣ್ಣಗಾಗುವಂತೆ ಇರಲಿಲ್ಲ.

ಹೊಟ್ಟೆ ತುಂಬಿದ ಮೇಲೆ ನನ್ನ ಕೋಪ ಇಳಿದಿತ್ತು, ಸುಬ್ಬಣ್ಣ ಮಾಮನಿಂದ ಕಣ್ಣು ತಪ್ಪಿಸಲಿಕ್ಕಾಗಿ ಛತ್ರದಿಂದ ದೂರದಲ್ಲಿ ತಾಂಬೂಲ ಜಗಿಯುತ್ತ, ಕುಟ್ಟುಂಡಿ ಬಾರೆ. ಹಾಗೆ ಪೇಟೆ ಸುತ್ತೋಣ ಅಂದೆ. ''ದಮ್ಮಯ್ಯ ನಾ ಬರೋಲ್ಲ ಮಾರಾಯ'' ಅಂದಾಗ ಅವಳ



ತಿಂಗಳ ಪತ್ರಿಕೆ

# ಹೊಸತು

ನೆನ್ನೆದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

## ವಿಶೇಷ ಸಂಚಿಕೆ - ೨೦೧೧

ಜನವರಿ ೨೦೧೧ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿ ಪ್ರಕಟವಾಗುತ್ತದೆ.

ಸಮಕಾಲೀನ ವಿದ್ಯಮಾನಗಳ ಮೇಲೆ ಬೆಳಕು ಬೀರುವ ವಿಚಾರಪೂರ್ಣ ಲೇಖನಗಳು

ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆ ಗುರುತು ಮೂಡಿಸಿರುವ ಮಹನೀಯರೊಂದಿಗೆ ಸಂದರ್ಶನಗಳು

ಜೊತೆಗೆ ಖ್ಯಾತ ಹಿರಿಯ ಹಾಗೂ ಕಿರಿಯ ಲೇಖಕರ ಕಥೆಗಳು, ಕವಿತೆಗಳು, ಪ್ರಬಂಧಗಳು, ಸಚಿತ್ರ ಪ್ರವಾಸ ಲೇಖನಗಳು

ಇವೆಲ್ಲಾ ಸೇರ್ಪಡೆಗೊಳ್ಳುತ್ತವೆ.

ಇನ್ನೂ ಹಲವಾರು ವೈಶಿಷ್ಟ್ಯಗಳೊಂದಿಗೆ ಪ್ರಕಟವಾಗಲಿದೆ.

'ಹೊಸತು' ಚಂದಾದಾರರಿಗೆ ವಾರ್ಷಿಕ ವಿಶೇಷ ಸಂಚಿಕೆ ಉಚಿತ !

## ಒದುಗರ ವೇದಿಕೆ ವಿಷಯ

ಪ್ರತಿಯೊಂದು ಜಾತಿ-ಉಪಜಾತಿಗೂ ಒಬ್ಬರೋ ಅಥವಾ ಹತ್ತಾರೋ ಸ್ವಾಮಿಗಳು ಬೇಕೆನಿಸಿರುವುದೊಂದು ಸೋಜಿಗ. ಮಾದಾರ ಸ್ವಾಮಿಗಳೊಬ್ಬರು ಅಸ್ತಿತ್ವಕ್ಕೆ ಬಂದನಂತರ ಒಂದು ಸಾಂಸ್ಕೃತಿಕ ಸಂಚಲನೆ ಉಂಟಾಗಿದೆಯೇ? ಅವರನ್ನೇಕೆ ಪೇಜಾವರ ಸ್ವಾಮಿಗಳು ವಿಶೇಷವಾಗಿ ಗುರುತಿಸಿ ಕೇರಿಯಿಂದ ಬೀದಿಗೆ ತರುವ ಯತ್ನದಲ್ಲಿ ಮಗ್ನರಾಗಿದ್ದಾರೆ ? ಮಾದಾರ ಸ್ವಾಮಿಗಳಿಗೆ ದೊರೆತ ಅಥವಾ ದೊರೆಯುವ 'ಪಾದಪೂಜೆ' ಸಾಂಪ್ರದಾಯಿಕವಾದದ್ದೆ? ಏನೇ ಇರಲಿ ಈಗಿನ ಇಡೀ ಪ್ರಸಂಗದ ಫಲಾಫಲಗಳೇನು, ಸಾಂಸ್ಕೃತಿಕ ಮಹತ್ವವೇನು ? ಏನೂ ಇಲ್ಲವೆಂದಾದರೆ ಅದಕ್ಕೇಕಿಷ್ಟು ಪ್ರಚಾರದ ಅಬ್ಬರ ? ಬೇರೆ ನೂರಾರು ಸ್ವಾಮಿಗಳ ಮೌನವು ಸಮ್ಮತಿ ಲಕ್ಷಣವೋ ಅಥವಾ ಉಪೇಕ್ಷೆಯೋ ?

ಜನವರಿ ೨೦೧೧ರ 'ಹೊಸತು' ವಿಶೇಷ ಸಂಚಿಕೆಯಲ್ಲಿ ಪ್ರತಿ ವರ್ಷದಂತೆ ಈ ವರ್ಷವೂ ಒದುಗರಿಗಾಗಿ ಒಂದು ಮುಕ್ತ ವೇದಿಕೆಯನ್ನು ಆಯೋಜಿಸಲಾಗಿದೆ. ವಿಷಯ : 'ಮಾದಾರ ಮತ್ತು ಪೇಜಾವರ ಸ್ವಾಮಿಗಳ ತಥಾಕಥಿತ ಸಾಮಾಜಿಕ ಸುಧಾರಣೆ'. ಈ ಕುರಿತ ಲೇಖನಗಳಿರುತ್ತವೆ.


ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್


ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೨೦೩೫೮೦, ೩೦೫೭೮೦೨೨
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com


ಕಣ್ಣಲ್ಲಿ ಆತಂಕವಿತ್ತು. "ಛತ್ರದೊಳಗೆ ನಂ ಮಾವ ಇದ್ದಾರ ನೋಡ್ತಿಯಾ ?" ಅಂದೆ. ತುಂಟ ನಗೆ ಬೀರುತ್ತ ಹೋದಳು. ಒಳಗೆಲ್ಲ ನೋಡಿ ಮಾವ ಮಾಯವಾಗಿದ್ದ ಖಾತ್ರಿ ಪಡಿಸಿಕೊಂಡು, ಬಾ ಎಂದು ಕರೆದಳು.

ಛತ್ರದೊಳಗೆ ಕೂತು ಅಪಾರ ಸಮಯ ಮಾತಾಡಿದೆವು. ನಾಳೆ ಸತ್ಯನಾರಾಯಣ ಪೂಜೆ ಮುಗಿಸಿ ಬೀಗರ ಮನೆಯಿಂದ ನೇರವಾಗಿ ನಾನು ಮಂಗಳೂರು ಕೇಂದ್ರ ಬಸ್ ನಿಲ್ದಾಣಕ್ಕೆ ಬರುವುದು. ಅಲ್ಲಿ ರಜ಼ಿಯಾ ಬಂದಿರುತ್ತಾಳೆ. ರಜ಼ಿಯಾಳನ್ನು ನನ್ನ ಶಿಷ್ಯೆಯಾಗಿ, ನನ್ನ ಬಳಿ ಇಟ್ಟುಕೊಳ್ಳುವುದೆಂದು ತೀರ್ಮಾನವಾಯಿತು. ನಾವು ಬೆಂಗಳೂರಿಗೆ ಹೋಗುವ ಬಸ್ಸಿನ ಚಾಲಕ ರಜ಼ಿಯಾಳ ಅಪ್ಪ ಅಹಮದ್.

ಮಾತಿನಂತೆ ಮರುದಿನ ರಾತ್ರಿ ಸಕಾಲಕ್ಕೆ ನಾನು ಕೇಂದ್ರ ನಿಲ್ದಾಣಕ್ಕೆ ಬಂದೆ. ನನ್ನನ್ನು ಕಂಡು ಅಹಮದ್ ಮತ್ತು ಮಮ್ತಾಜ್ ಹರ್ಷಿತರಾದರು. ರಜ಼ಿಯಾ ಮಾತ್ರ ಮುಗುಮ್ಮಾಗಿದ್ದಳು. ರಜ಼ಿಯಾಳನ್ನು ಆಪಾದಮಸ್ತಕ ದೃಷ್ಟಿಸಿ, "ಕುಟ್ಟುಂಡಿ ನಿನ್ನ ಮಗಳು ನಿನ್ನಂಗೆ ಇದ್ದಾಳೆ" ಅಂದೆ. "ಏ ಬುದ್ದು, ಹೆಣ್ಣುಮಕ್ಕಳು ತಾಯಿಯಲ್ಲದೆ ತಂದೆ ಹಾಗೆ ಇರ್ತಾರ," ಎನ್ನುತ್ತ ತಂದೆ ತಾಯಿಯೊಂದಿಗೆ ಮಗಳೂ ನಕ್ಕಳು. "ರಜ಼ಿಯಾ, ನೀ ನಕ್ಕರೆ ಇನ್ನೂ ಚಂದ !" ಅಂದೆ. "ಥ್ಯಾಂಕ್ಸ್" ಅಂದಳು. ಪರ್ವಾಗಿಲ್ಲ ಮೂಕಿಯೇನೋ ಅಂದುಕೊಂಡಿದ್ದೆ ಅಂದರೂ ಮರುಮಾತಿಲ್ಲ.

ಕಂಡಕ್ಟರ್ ವಿಷಲ್ ಹೊಡೆದ, ಅಹಮದ್ "ಹತ್ತಿ ಹೋಗುವಾ" ಅಂದ. ಬಸ್ಸನ್ನು ಏರಿದೆವು. ವಿಂಡೋ ಸೈಡ್‌ನ ಸೀಟಿನಲ್ಲಿ ಹೋಗಿ ರಜ಼ಿಯಾ ಕುಳಿತಳು. ಬಸ್ಸಿನ ಹೊರ ಬದಿಯಲ್ಲಿ ಮಮ್ತಾಜ್ ನಿಂತಿದ್ದವಳು "ಜಗ್ಗು" ಅಂದಳು. ಗಾಜಿಂದ ಹೊರ ಇಣುಕಿದೆ. "ಅವಳು ಇನ್ಮುಂದೆ ನಿಮ್ಮ ಮನೆಮಗಳು" ಅಂದಳು. "ಆಯಿತು" ಅಂದೆ. ಅವಳ ಕಣ್ಣಲ್ಲಿ ನೀರಿತ್ತು. ಅದು ಆನಂದಬಾಷ್ಪವೋ, ಮಗಳು ದೂರ ಹೋಗುತ್ತಿರುವುದಕ್ಕೆ ಆಗುತ್ತಿರುವ ದುಃಖವೋ ತಿಳಿಯಲಿಲ್ಲ. ಬಸ್ಸು ಹೊರಟಿತು. ಮಮ್ತಾಜ್‌ಗೆ ಟಾಟಾ ಮಾಡಿದೆ. ಬಿ.ಸಿ. ರೋಡ್‌ನಿಂದ ಮುಂದಿರುವ ನೇತ್ರಾವತಿ ನದಿಯ ಸೇತುವೆಯ ಮೇಲೆ ಬಸ್ಸು ಹೋಗುತ್ತಿರುವಾಗ, "ಸರ್, ಒಂದು ಪ್ರಶ್ನೆ" ಅಂದು ನನ್ನ ಮುಖ ನೋಡಿದಳು ರಜ಼ಿಯಾ. "ಕೇಳು" ಅಂದೆ. "ಸರ್ ನನ್ನ ತಾಯಿ, ನಿಮ್ಮ ಪ್ರೀತಿಯ ಕುಟ್ಟುಂಡಿ ಮತ್ತು ನಿಮ್ಮ ಬಾಂಧವ್ಯ ವಿಚಿತ್ರದ್ದು, ನಂಬಲಿಕ್ಕಾಗದ ಸತ್ಯ. ನನ್ನ ತಾಯಿಯ ಪಾಲಿಗೆ ನೀವು ಅಣ್ಣ. ತಂಗಿಯ ಊರಿಗೆ ಬಂದು ಎರಡು ದಿನ ಇದ್ದಿರಿ. ಒಂದು ಘಳಿಗೆ ನಿಮ್ಮ ತಂಗಿಯ ಮನೆಗೆ ಹೋಗ್ಬೇಕು ಅನ್ನಿಸಲಿಲ್ಲವಾ ಸರ್ ?" "ರಜ಼ಿಯಾ, ಇಲ್ಲಿಯ ಪರಿಸ್ಥಿತಿ ನನಗಿಂತ ನಿನಗೆ ಚೆನ್ನಾಗಿ ಗೊತ್ತು. ಹಾಗಿದ್ದೂ ಹೀಗೆ ಕೇಳುವುದು ಸರೀನಾ ?" ಎಂದು ಕೇಳಿದೆ.

"ಹಾಂ, ಇಲ್ಲಿ ಇದು ಜಾತಿಗೂ ಮೀರಿದ ಬಾಂಧವ್ಯ. ನನ್ನಮ್ಮ ಬೊಟ್ಟಿಟ್ಟುಕೊಂಡು ಬಂದಂತೆ. ನೀವು ಒಂದು ಟೋಪಿ ಹಾಕಿಕೊಂಡು ಬರಬಹುದಿತ್ತಲ್ಲ? ಹಾಗೆ ಮಾಡ್ಲಿಕ್ಕೆ ನಿಮ್ಮ ಬ್ರಾಹ್ಮಣ್ಯ ಅಡ್ಡ ಬಂತಾ ...?"

"ಹಾಗಲ್ಲ ರಜ಼ಿಯಾ. ಮುಂದೆ ಒಳ್ಳೆ ದಿನ ಬಂದೇ ಬರುತ್ತೆ. ಆಗ ನೇರವಾಗಿ ನಿಮ್ಮ ಮನೆಗೆ ಬರ್ತೀನೆ ಅಂದಿದ್ದೇನೆ. ನಿಮ್ಮಮ್ಮನ್ನೆ ಕೇಳು..."

"ಸರ್, ಇದು ಆಶಾವಾದವಲ್ಲ. ಪಲಾಯನವಾದ ಅಲ್ವಾ ?"

"ರಜ಼ಿಯಾ ನೀನು ಅಪಾರ್ಥ ಮಾಡಿಕೊಂಡಿದ್ದೀಯಾ. ಹುಲಿಯಂತೆ ಮೂರು ದಿನ ಬದುಕುವುದಕ್ಕಿಂತ ಇಲಿಯಂತೆ ನೂರು ದಿನ ಬದುಕು ಅಂತಾರೆ. ಅಲ್ಲಮ್ಮ, ತಲೆ ಗಟ್ಟಿಯಿದೆ ಅಂತ ಕಲ್ಲಿಗೆ ಚಚ್ಚಿಕೊಳ್ಳುವವನು ಮೂರ್ಖ ಅಲ್ವಾ ?"

"ಏನೇ ಹೇಳಿ ಸರ್. ನೀವೊಬ್ಬ ಲಾಯರ್ ಆಗಿ ಹೀಗೆ ಮಾತಾಡುವುದು ನಿಮ್ಮ ವೃತ್ತಿಗೆ ಶೋಭೆ ತರುವಂಥದ್ದಲ್ಲ."

"ಛೇ, ಹಾಗಲ್ಲ ರಜ಼ಿಯಾ. ನೀನು ನನ್ನ ವೃತ್ತಿಯ ಬಗ್ಗೆ ಮಾತಾಡಿದ್ದೀಯಾ ಇರ್ಲಿ. ನಾನೇನು ಓದಿದ್ದೇನೋ ನೀನು ಅದನ್ನೇ ಓದಿದ್ದೀಯ. ವೃತ್ತಿ ವಿಷಯ ಹಾಗಿರಲಿ. ಈಗ ನಿನ್ನ ಅಭಿಪ್ರಾಯ ತಿಳಿಸು, ನಿನ್ನ ದೃಷ್ಟಿಯಲ್ಲಿ ಬದುಕು ಅಂದ್ರೇನು ?"

"ಹೋರಾಟ !"

"ಹ್ಹ... ಹ್ಹ... ಹ್ಹ...! ಈ ಭೂಮಿ ಮೇಲೆ ನನ್ನ ನಿನ್ನಂಥ, ಅಂದ್ರೆ ಪೂರ್ವಿಕರ‍್ಯಾರೋ ಹೇಳಿದ್ದ ಕಟ್ಟುಪಾಡುಗಳನ್ನು ಇಟ್ಟುಕೊಂಡು ಹೇಗೋ ಬದುಕು ಸಾಗಿಸುತ್ತೇವೆ. ಅಷ್ಟೆ. ಉದಾರಣೆಗೆ, ಹಿಂದು, ಮುಸ್ಲಿಂ, ಕ್ರೈಸ್ತ ಹೀಗೆ ಸಾವಿರಾರು ಧರ್ಮಗಳು ಇವೆ. ಇಲ್ಲಿ ತಮ್ಮ ತಮ್ಮ ಧರ್ಮ ಶ್ರೇಷ್ಠ ಅಂತ ಎಲ್ಲ ಧರ್ಮೀಯರು ಬಡಿದಾಡಿ ಸಾಯುತ್ತಿದ್ದಾರೆ. ಈ ನಮ್ಮೆಲ್ಲರ ಮಧ್ಯೆ ನಾಸ್ತಿಕರು ತಣ್ಣಗೆ ಜೀವಿಸುತ್ತಿದ್ದಾರೆ, ಅಲ್ವಾ ? ಇನ್ನು ಕೆಲವರು ತಮ್ಮ ಬದುಕನ್ನೇ ಅರ್ಥೈಸಿಕೊಂಡು ಕಾವ್ಯ ಮಾಡಿಕೊಂಡಿದ್ದಾರೆ. ಇವರೆಲ್ಲ ಬಾಳಿ ಬದುಕು ಬರೆದಿಟ್ಟು ಹೋಗುತ್ತಾರೆ. ಅದನ್ನೇ ಮುಂದೆ ನಾವು ಓದಿ, ಅಬ್ಬಾ !! ಎಂತಹ ದಿವ್ಯದರ್ಶನ !! ಅಂತ ಉದ್ಗಾರ ತೆಗೀತೀವಿ ಅಲ್ವಾ ?"

''ಸರ್, ನಮ್ಮ ನಡುವೆ ಬದುಕನ್ನ ಕಾವ್ಯ ಮಾಡಿಕೊಂಡಿರುವವರು ಇದ್ದಾರೆ ಅಂತೀರಾ? ಇಂದಿನ ಇಂತಹ ಪರಿಸ್ಥಿತಿಯಲ್ಲಿ?''

''ಇದ್ದಾರೆ, ಅವರ ಮುಂದೆ ನೀನು ಹೋಗಿ ಬದುಕೊಂದು ಹೋರಾಟ ಅನ್ನು. ನಕ್ಕು ಮುಂದೆ ಹೋಗ್ತಾರೆ. ಹಾಗೆ ಹೋಗಲಿಲ್ಲಾಂದ್ರೆ ನಿನ್ನಂತೆ ಅವರು ಗೊಂದಲದ ವ್ಯಕ್ತಿಗಳು, ಅಷ್ಟೆ.''

''ಸರ್, ಮಾತು ಎಲ್ಲೆಲ್ಲಿಗೋ ಹೋಗಿ ಎಲ್ಲಿಗೋ ಬಂತು, ಸುಮ್ನೆ ಕೆದಕಿ ಪ್ರಯೋಜನವಿಲ್ಲ. ಗಾಂಧಿ ಒಂದು ಕಡೆ ''ವ್ಯರ್ಥವಾಗಿ ಮಾತಾಡುವ ಜಾಗದಲ್ಲಿ ಮೌನ ಬಂದು ನೆಲಸಲಿ, ಅಂದಿದ್ದಾರೆ'' ಅಂದಳು ರಜ಼ಿಯಾ. ''ನೀನು ನನ್ನ ಶಿಷ್ಯೆ ಆಗ್ಲಿಕ್ಕೆ ಲಾಯಕ್ಕಿದ್ದೀಯಾ, ಆ ಗಾಂಧಿಗೆ ಥ್ಯಾಂಕ್ಸ್, ನಿನಗೆ ಗುಡ್‌ನೈಟ್'' ಅಂದು ಆಕೆಯ ಕೆನ್ನೆ ಹಿಂಡಿ ಕಿಟಕಿಯ ಗಾಜಿಗೆ ಒರಗಿ ನನ್ನೊಳಗೇ ತರ್ಕಿಸಿದೆ. ನನ್ನ ನಿರ್ಧಾರ ಸರಿ ಅನ್ನಿಸಿತು. ಬಸ್ಸು ಉಪ್ಪಿನಂಗಡಿ ಬಿಡುತ್ತಿದ್ದ ನನಗೆ ಹಾಗೇ. ನಿದ್ರೆ ಆವರಿಸಿತು.

ಒಂದು ನಿದ್ದೆ ತೆಗೆದು ಎಚ್ಚರವಾದಾಗ, ''ಹಾಸನ ಇಳಿಯೋರು ಇಳಿಯಿರಿ'' ಅಂದ ಕಂಡಕ್ಟರ್. ''ರಜ಼ಿಯಾ ನಿಂಗೆ ನಿದ್ದೆ ಬರಲಿಲ್ಲವಾ?'' ಅಂದೆ. ಆಕಳಿಸುತ್ತ ಇಲ್ಲ ಅಂದಳು. ಗಾಜು ಬಡಿದ ಶಬ್ದವಾಯಿತು. ಗಾಜು ಸರಿಸಿದೆ, ಅಹಮದ್, ''ಟೀ ಕುಡಿತೀರಾ'' ಎಂದು ಕೇಳಿದ. ನಾನು ಕಿರಿ ಬೆರಳು ಎತ್ತಿ ತೋರಿಸಿದೆ. ಬೇಗ ಬನ್ನಿ ಅಂದ. ಓ ಅಲ್ಲಿದೆ ಟಾಯ್ಲೆಟ್ ಎಂದು ತೋರಿಸಿದ. ನಾನು ಟಾಯ್ಲೆಟ್‌ನಿಂದ ಬರುವಷ್ಟರಲ್ಲಿ ಟೀ ಸಿದ್ಧವಿತ್ತು. ಚಹಾ ಹೀರುತ್ತಾ ನಿಂತಿದ್ದೆ, ಕೈಯಲ್ಲಿ ಟೀ ಗ್ಲಾಸ್ ಹಿಡಿದಿದ್ದ ಅಹಮದ್, ''ನಿಕ್ಕು ಬೋಡಚಾ?'' ಅಂದ. ಬೋಡಚಿ ಅನ್ನುವ ಶಬ್ದ ಬೆನ್ನ ಹಿಂದಿನಿಂದ ಬಂತು. ರಜ಼ಿಯಾ ನಿಂತಿದ್ದಳು. ''ರಜ಼ಿಯಾ, ಟೀ?'' ಅಂದೆ. ಬೇಡವೆಂದು ನಸುನಕ್ಕಳು, ನಾ ಬೇಗ ಟೀ ಕುಡಿದಿಟ್ಟೆ, ''ಜಗ್ಗಣ್ಣರೇ, ಸಿಗರೇಟ್?'' ಅಂದ ಅಹಮದ್‌ಗೆ ''ಸಿಗರೇಟ್ ಸೇದುವುದಿಲ್ಲ'' ಅಂದೆ. ''ಅವೂ ಎಡ್ಡೆ ಜನ. ಬನ್ನಿ ಹೋಗುವಾ, ಅಂದ. ನಾವು ಬಸ್ಸನ್ನೇರಿ ಕುಳಿತೆವು. ಬಸ್ಸು ಹೊರಟಿತು. ''ರಜ಼ಿಯಾ ನಿನಗೆ ನಿದ್ದೆ ಬರಲ್ಲವಾ?'' ಅಂದೆ. ಇಲ್ಲ ಅಂದ್ಲು, ''ಏನು ಮಂಗಳೂರಿನಿಂದ ಇಲ್ಲಿಯವರೆಗೆ?'' ಅಂದೆ. ರಜ಼ಿಯಾ ನಕ್ಕಳು. ಎಲ್ಲ ಲೈಟನ್ನೂ ಆರಿಸಿದ ಅಹಮದ್ ''ಅಲ್ಲ ಮಾಮ, ಅಲ್ಲಿಂದ ಇಲ್ಲಿಯವರೆವಿಗೂ ಯೋಚಿಸುವಂಥದ್ದೇನಿದೆ, ಅಲ್ವ?''

''ಇದೇನು ಇದು? ಆಗೆಲ್ಲ ಸರ್, ಸರ್, ಅಂತಿದ್ದೆ, ಈಗ ಮಾಮ ಅಂತಿದ್ದೀಯ. ಏನೀ ಬದಲಾವಣೆ?''

''ಏನಿಲ್ಲ ಮಾಮ. ನಮ್ಮಿಬ್ಬರ ವಾದವನ್ನು ತರ್ಕಿಸಿ ನೋಡಿದೆ. ನೀವು ಹೇಳೋ ಮಾತಿನಲ್ಲಿ ನ್ಯಾಯ ಇದೆ ಅನ್ನಿಸ್ತಿತ್ತು. ಅಲ್ಲಿಗೂ ಅನುಮಾನ ಮಾಮ. ನಮ್ಮ ಸೌತ್ ಕೆನರಾದ ಪ್ರಸ್ತುತ ಸ್ಥಿತಿ ಕ್ರಮೇಣ ಸುಧಾರಿಸುತ್ತೆ ಅಂತೀರಾ?''

''ಖಂಡಿತವಾಗಿಯೂ ಕಣಮ್ಮ. ಕಟುಕನ ಹೃದಯದಲ್ಲಿಯೂ ಕರುಣೆ ಇರುತ್ತಲ್ವೇ?''

''ಹೌದು ಮಾಮ. ಆ ಒಂದು ಸಣ್ಣ ನಂಬಿಕೆಯೇ ನಮ್ಮಲ್ಲಿ ಆಶಾಭಾವನೆ ಮೂಡಿಸುತ್ತೆ ಅನ್ನಬಹುದು, ಇಲ್ಲದಿದ್ರೆ ಈ ಕೋಮುವಾದಿಗಳೊಂದಿಗೆ ಬಡಿದಾಡಿಕೊಂಡು, ಇಲ್ಲ ಏನೇನೋ ಕಲ್ಪಿಸಿಕೊಂಡು ಬದುಕು ನರಕ ಮಾಡಿಕೊಳ್ಳುವುದರಲ್ಲಿ ಯಾವ ಅರ್ಥ ಇದೆ ಅಲ್ವಾ?''

''ಗುಡ್ ಗರ್ಲ್. ನಿನ್ನಂಥ ಜೀನ್ಸ್‌ಧಾರಿ ಹುಡುಗಿಯರಲ್ಲೂ ಮುಳ್ಳಿನ ಮೇಲೆ ಹರಡಿದ ಹಳೆಯ ಸೀರೆಯನ್ನು ಚಾಣಾಕ್ಷತನದಿಂದ ಬಿಡಿಸಿಕೊಳ್ಳುವ ಕಲೆಯನ್ನು ಕೊಟ್ಟ ಆ ಭಗವಂತನನ್ನ ಮೆಚ್ಚಲೇಬೇಕು ನೋಡು.''

''ಮಾಮ, ನಿಮ್ಮನ್ನ ಕೆಲವು ವೈಯಕ್ತಿಕ ಪ್ರಶ್ನೆಗಳನ್ನು ಕೇಳಬೇಕು ಅಂದ್ಕೊಂಡಿದ್ದೀನಿ. ಕೇಳ್ಲಾ?''

''ಕೇಳಮ್ಮ ಕೇಳು.''

''ಅದ್ಸರಿ ಮಾಮ, ನೀವು ಮದ್ವೆಗೆ ನಿಮ್ಮ ಹೆಂಡತಿ, ಮಗ, ಸೊಸೆ ಇವರನ್ನೆಲ್ಲ ಯಾಕೆ ಕರಕೊಂಡು ಬರಲಿಲ್ಲ?''

''ಅಯ್ಯೋ, ಅದೊಂದು ದೊಡ್ಡ ಕಥೆ ಕಣೆ ತಾಯಿ, ನನ್ನ ಮಗ ನನ್ನಂತೆ ಲಾಯರ್ ಆಗಿರಲಿ ಅಂತ ಅವನಿಗೆ ಓದಿಸಿದೆ. ನನ್ನೊಟ್ಟಿಗೇ ಇದ್ದ. ಈ ಲ್ಯಾಂಡ್ ಲಿಟಿಗೇಷನ್ ವಿಚಾರವಾಗಿ ಅವನಿಗೆ ಚೆನ್ನಾಗಿ ಟ್ರೈನಿಂಗ್ ಕೊಟ್ಟೆ. ಆದ್ರೆ ಅದೇ ನನಗೆ ಮುಳುವಾಯ್ತು. ಈ ಸೈಟು, ಜಮೀನು, ಇಂಥವೇ ಕೇಸುಗಳನ್ನೆಲ್ಲ ಅವನಿಗೆ ಒಪ್ಪಿಸುತ್ತ ಹೋದೆ. ಅದರಲ್ಲಿ ಅವನು ಪರಿಣತನಾದ ಹಾಗೆಲ್ಲ ತನ್ನದೆ ಒಂದು ಆಫೀಸ್ ತೆರೆದ. ನನಗೆ ಗೊತ್ತಾಗದಂತೆ ಗಂಟು ಮಾಡಿದ. ಸೈಟ್, ಲ್ಯಾಂಡ್ ಡೀಲಿಂಗೆ ಇಳಿದು ಕೋಟ್ಯಂತರ ರೂಪಾಯಿಗಳ ಆಸ್ತಿಯ ಒಡೆಯನಾದ, ಇಷ್ಟು ಆಗುವುದರೊಳಗೆ ಅವನದೆ ಕ್ಲಾಸ್‌ಮೇಟ್ ಒಬ್ಬಳನ್ನು ಮದುವೆಯೂ ಆದ. ಸೊಸೆ ಮಾದಿಗರೊಳು ಅನ್ನೋ ಕಾರಣಕ್ಕೆ ನನ್ನಾಕೆ ಮಗನನ್ನು ಕೂಡ ಮನೆಯೊಳಗೆ ಸೇರಿಸಲಿಲ್ಲ. ನಾನು ಪರಿ ಪರಿಯಾಗಿ ಹೇಳಿ ನೋಡಿದೆ. ಋಷಿ ಮೂಲ, ಸ್ತ್ರೀ ಮೂಲ, ನದಿ ಮೂಲಗಳನ್ನು ಹುಡುಕಬಾರದು ಅಂತಾರೆ. ಹಾಗೆ ಸೊಸೆಯ ಮೂಲ ಹುಡುಕಬೇಡ. ಅವರನ್ನೆಲ್ಲ ಮನೆಗೆ ಕರೆಸಿಕೋ, ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ'' ಅಂದೆ. ಹೋ ಅಂತ ಅಳುತ್ತ ಪ್ರಪಂಚದಲ್ಲಿ ಲಾಯರನ್ನು ಮದುವೆಯಾದವಳ ಹಣೆ ಬರಹ ಇಷ್ಟೇ ಏನೋ? ಹೀಗೆ ಅವತ್ತಿನಿಂದ ನನ್ನ ಯಾವುದೇ ಮಾತಿಗೆ ಇದೇ ಉತ್ತರವಾಯಿತು. ರೋಸಿ ಹೋಗಿ ಆ ವಿಷ್ಯವನ್ನೇ ಬಿಟ್ಟೆ. ಮಗ ಮನೆಗೆ ಬರದೆ ಸುಮಾರು ೮ ವರ್ಷಗಳೇ ಆದುವು. ಈ ನಡುವೆ ಇವಳಿಗೆ ಹುಷಾರೇ ಇರಲ್ಲ. ಈಗ ಅವಳಿಗೆ ದಿನಗಳು. ಈ ದಿನಗಳಲ್ಲಿ ಅವಳಿಗೆ ವಿಪರೀತ ರಕ್ತಸ್ರಾವವಾಗುತ್ತೆ. ಗರ್ಭಚೀಲ ತೆಗೆದರೆ ಸರಿಹೋಗುತ್ತೆ ಅಂತಾರೆ ಡಾಕ್ಟರ್, ಅದನ್ನೆ ತೆಗೆಸೋಣ ಎಂದರೆ ಸಕ್ಕರೆ ಕಾಯಿಲೆ. ಹಾಳಾದ ಈ ಶುಗರ್‌ನಿಂದ ನನಗೂ ನೆಮ್ಮದಿ ಇಲ್ಲ, ಅವಳಿಗೂ ನೆಮ್ಮದಿ ಇಲ್ಲ. ಮೊನ್ನೆ ನಾನು ಮಂಗಳೂರಿಗೆ ಹೊರಟಾಗ ಏನೇನೋ ಆಸೆಗಳನ್ನಿಟ್ಟುಕೊಂಡು ಇಷ್ಟು ದೊಡ್ಡ ಮನೆ ಕಟ್ಟಿಕೊಂಡಿದ್ವಿ. ಈಗ ನೋಡಿದ್ರೆ ದೊಡ್ಡ ಆಲದ ಮರದಲ್ಲಿ ಎರಡು ಮುದಿ ಗೂಬೆಗಳು. ಹಾಗಾಯಿತು. ನಾನು ಎರಡು ದಿನ ಇರಲ್ಲ ಈ ಇಡೀ ಮನೆಯಲ್ಲಿ ನೀನೊಬ್ಬಳೆ ಹೇಗಿರ್ತೀಯಾ?'' ಅಂದೆ, ''ರೀ, ಮೊನ್ನೆ ಶುಗರ್ ಲೆವೆಲ್ ಚೆಕ್ ಮಾಡಿಸ್ಲಿಕ್ಕೆ ಹೋಗಿದ್ದಾಗ ನಿಮಗೆ ಬಿ.ಪಿ. ಶುರುವಾಗುತ್ತಿದೆ. ಆದಷ್ಟು ಉಪ್ಪು ಇಲ್ಲದ ಪದಾರ್ಥ ರೂಢಿ ಮಾಡಿಕೊಳ್ಳಿ ಅಂದ್ರು ಕಣ್ರಿ. ನಂಗ್ಯಾಕೋ ಸಾಯ್ತೀನಿ ಅನ್ನಿಸಿದೆ. ಸಾಯೋ ಕಾಲಕ್ಕಾದ್ರೂ ಮೊಮ್ಮಕ್ಕಳನ್ನು ನೋಡಬೇಕು'' ಎಂದು ದುಃಖಿಸಿದಳು. ಸಾಯೋಕಾಲಕ್ಕಾದ್ರೂ ಬುದ್ಧಿ ಬಂತಲ್ಲ. ಆ ದೇವರು ದೊಡ್ಡವನು ಅಂದು ಕೊಂಡು ಮಗನ ಮೊಬೈಲ್‌ಗೆ ಫೋನ್ ಮಾಡಿದೆ. ಅಪ್ಪ, ಕಾರ್ ಡ್ರೈವ್ ಮಾಡ್ತಿದ್ದೀನಿ. ಮನೆಗೆ ಹೋದ್ಮೇಲೆ ನಾನೇ ಫೋನ್ ಮಾಡ್ತೀನಿ ಅಂದ. ಲೈನ್ ಕಟ್‌ಮಾಡಿ ಅವನ ಫೋನ್‌ಗೆ ಕಾಯ್ತ ಕೂತೆ. ಸುಮಾರು ಮುಕ್ಕಾಲು ಗಂಟೆ ನಂತರ ಫೋನ್ ಬಂತು, ಇರುವ ವಿಚಾರ ಹೇಳಿದೆ. ಅವಳ ಹತ್ರ ಈ ವಿಷಯ ತಿಳಿಸ್ತೇನೆ ಎಂದು ಮೊಬೈಲ್‌ಅನ್ನು ಟೇಬಲ್ ಮೇಲಿಟ್ಟ ಶಬ್ದ ಕೇಳಿಸ್ತು. ಹಾಗೇನೇ ಮೊಮ್ಮಕ್ಕಳ ಜಗಳ ಕೇಳಿಸುತ್ತಿತ್ತು, ನನ್ನವಳ ಕಿವಿಗೆ ಮೊಬೈಲ್ ಆನಿಸಿದೆ, ಹರ್ಷದಿಂದ ಮೊಮ್ಮಕ್ಕಳ ಹೆಸರು ಹಿಡಿದು ಕರೆದಳು. ಮುದ್ದು ಮಕ್ಕಳ ತೊದಲು ನುಡಿಗಳ ಸವಿಯನ್ನು ನನ್ನ ಕಿವಿಗೆ ಹನಿಸಿಕೊಳ್ಳುವ ಉಮೇದಿನಿಂದ ಮೊಬೈಲನ್ನು ನನ್ನ ಕಿವಿಗೆ ಆನಿಸಿದೆ. ಆಗ ಕೇಳಿದ್ದು, ''ಇಷ್ಟು ದಿನ ಎಲ್ಲೋಗಿತ್ತು ಈ ಕಕ್ಕುಲಾತಿ. ಈಗ ಸಾಯೋಕಾಲಕ್ಕೆ ನಾವು ಬೇಕಾಯಿತಲ್ವ? ಇವರ ಹೇಲು, ಉಚ್ಚೆ ಬಳಿದ್ದಾಕಿ ನಾನೇನು ಪಾವನವಾಗಬೇಕಿಲ್ಲ. ಅದಕ್ಕೆ ಬೇಕಿದ್ರೆ ಯಾರನ್ನಾದ್ರು ನೋಡ್ಕೊಳ್ಳಿ. ನಾನು ಬೇಕಾದ್ರೆ ವಾರಕ್ಕೊಮ್ಮೆನೋ ಎರಡು ಸರ್ತಿನೋ ಹೋಗಿ ಅವ್ರ ಮೊಮ್ಮಕ್ಕಳನ್ನು ತೋರಿಸಿಕೊಂಡು ಬರ್ತೀನಿ. ನಾ ಮಾತ್ರ ಅಲ್ಲಿ ಹೋಗಿ ಇರ್ಲಿಕ್ಕಾಗಲ್ಲ,'' ನನ್ನ ಮಗ ಏನೋ ಹೇಳಬೇಕೆಂದು ಅಡ್ಡಬಾಯಿ ಹಾಕಿದ, ನಾನು ಫೋನ್ ಆಫ್ ಮಾಡಿದೆ.

''ಸಾರಿ ಮಾಮ, ನಾನು ನಿಮ್ಮ ಪರ್ಸನಲ್ ಮ್ಯಾಟರ್ ತೆಗೆದು ನಿಮ್ಮ ಮನಸ್ಸಿಗೆ ನೋವು ಮಾಡಿದೆ'' ಎಂದು ರಜ಼ಿಯಾ ನನ್ನ ಕೈಯನ್ನು ಮೃದುವಾಗಿ ಹಿಸುಕಿದಳು. ''ಪರ್ವಾಗಿಲ್ಲ ಬಿಡು ರಜ಼ಿಯಾ, ಮನುಷ್ಯನಿಗೆ ನೋವು ಬಿದ್ದಷ್ಟು ಗಟ್ಟಿಯಾಗ್ತ ಹೋದರೆ ಇನ್ನೂ ಪಕ್ವ ಆಗ್ತಾ ಹೋಗ್ತಾನೆ'' ಅಂದೆ. ''ಮಾಮ, ವೆರಿ ವರಿ ಸಾರಿ, ಹಾಂ?'' ಎಂದಳು. ''ದಟ್ಸ್ ಓ.ಕೆ.'' ಅಂದೆ, ಕತ್ತಲಲ್ಲಿ ಪುಟ್ಟ ಮಗುವಂತೆ ನನ್ನ ಗದ್ದ ಹಿಡಿದು, ''ಮಾಮ, ನಿಮ್ಮ ತೊಡೆಯ ಮೇಲೆ ತಲೆ ಇಟ್ಟು ಮಲಗಲಾ?'' ಅಂದಳು. ''ಆಯಿತು ಪುಟ್ಟಿ, ತಾಚಿ ಮಾಡು'' ಅಂದೆ. ಆ ಸೀಟಲ್ಲೆ ಕಾಲು ಮುದುರಿ ಮಲಗಿ ನನ್ನ ತೊಡೆಯ ಮೇಲೆ ತಲೆ ಇಟ್ಟಳು, ಕೂದಲಲ್ಲಿ ಕೈಯಾಡಿಸಿದೆ. ರೇಷ್ಮೆಯಂತ ನಯವಾದ ಕೂದಲು. ಬೆಳೆದು ನಿಂತ ನನ್ನ ಮಗಳೆ, ಮಡಿಲಲ್ಲಿ ತಲೆ ಇಟ್ಟು ಮಲಗಿದಂತೆ ಭಾಸವಾಗಿ ಹೃದಯ ತುಂಬಿ ನನ್ನ ಕಣ್ಣಿಂದ ಆನಂದಬಾಷ್ಪ ಉರುಳಿ ರಜ಼ಿಯಾಳ ಕೆನ್ನೆ ಮೇಲೆ ಬೀಳಲೆಂದು ಹೊರಟಿತ್ತು, ಅದನ್ನ ನನ್ನ ಕೆನ್ನೆಗಳಲ್ಲೆ ತಡೆದೆ.

---

* ಕುಟ್ಟುಂಡಿ : ಹುಣಸೆಹಣ್ಣು, ಜೀರಿಗೆ, ಬೆಲ್ಲ, ಒಣ ಮೆಣಸಿನ ಕಾಯಿ ಎಲ್ಲವನ್ನೂ ರುಚಿಗೆ ತಕ್ಕಂತೆ ಹಾಕಿ ಚೆನ್ನಾಗಿ ಕುಟ್ಟಿ ನಂತರ ಒಂದು ಕಡ್ಡಿಗೆ ಆ ಮಿಶ್ರಣದ ಮುದ್ದೆಯನ್ನು ಚುಚ್ಚಿ ಚೀಪುವ ತಿನಿಸು. ಈ ತಿನಿಸು ಹುಡುಗಿಯರಿಗೆ ಅಚ್ಚುಮೆಚ್ಚು.

* ಸಜ್ಜಿಗೆ ಬಜೀಲು : ಸಜ್ಜಿಗೆ ಉಪ್ಪಿಟ್ಟು, ಖಾರಾಬಾತ್, ಬಜೀಲು - ಹಚ್ಚಿದ ಅವಲಕ್ಕಿ, ಉಪ್ಪುಕರಿ ಅವಲಕ್ಕಿ.



**ಕುದಾಳ್ ಜಗದೀಶ್**
ನಂ. ೨೪೨, ಗೋದಾವರಿ ರಸ್ತೆ, ೨೩ನೇ ಅಡ್ಡರಸ್ತೆ
೨೪ನೇ ಮುಖ್ಯರಸ್ತೆ, ಪರಂಗಿಪಾಳ್ಯ ಬಡಾವಣೆ
ಎಚ್.ಎಸ್.ಆರ್. ೨ನೇ ಸೆಕ್ಟರ್, ಬೆಂಗಳೂರು - ೫೬೦ ೧೦೨

# ಅಂದಿನಿಂದಿಂದಿಗೂ... ಮುಂದಿಗೂ

ಮನೆಯ ಮೂಲೆ ಮುಡುಕುಗಳಲ್ಲಿ ಜಮೆಯಾಗಿರುವ ಬೇಡದ ವಸ್ತುಗಳನ್ನು ಹೆಕ್ಕಿ ತೆಗೆದು ಗತಿ ಕಾಣಿಸುವುದಕ್ಕೆ ಮುಹೂರ್ತ ಬರುವುದು ಬೇಸಗೆ ರಜೆಯಲ್ಲಿ. ಇಂಥ ವಸ್ತುಗಳಿಂದ ಇಡಿಕಿರಿದು ತುಂಬಿ ತುಳುಕುತ್ತಿದ್ದ ಮನೆಯ ಅಟ್ಟದ ಹೊಟ್ಟೆ ಹೊಟ್ಟಿಹೋದೀತೇನೋ ಎನಿಸಿದಾಗ ಮೆಟ್ಟಲಿಲ್ಲದ ಅಟ್ಟವನ್ನು ಕಷ್ಟಪಟ್ಟಾದರೂ ಹತ್ತುವುದು ಅನಿವಾರ್ಯವಾಯಿತು. ಹಾಗೆ ಅಲ್ಲಿ ಜಾಲಾಡ್ತಿದ್ದಾಗ 'ಅದು' ಕೈಗೆ ಸಿಕ್ಕಿ ಒಂದು ಕಂಪಿನ ತಂಗಾಳಿ ಸುಳಿದಂಥ ತಂಪಿನ ಅನುಭವ ಆಯ್ತು. ಕೈಯಲ್ಲಿದ್ದುದು ನಲ್ವತ್ತು ವರ್ಷಗಳಿಗೂ ಹಿಂದಿನ ಆ ಗ್ರೂಪ್ ಫೋಟೋ!! ನನ್ನ ಎಸ್ಸೆಸ್ಸೆಲ್ಸಿಯ ಕ್ಲಾಸ್ಮೇಟ್ಸ್, ಎಲ್ಲ ಗುರುಗಳು, ಸಿಬ್ಬಂದಿ ವರ್ಗದವರು ಎಲ್ಲರೂ ಫೋಟೋ ಫ್ರೇಮಿನೊಳಗಿಂದ ಮೂಡಿಬರುತ್ತಿದ್ದರು. ಈ ಫೋಟೋ ತೆಗೆಸಿದ ಕ್ಲಾಸ್ ಸೋಷಲ್ ಡೇ ಕಾರ್ಯಕ್ರಮ ಪ್ರಾರಂಭವಾಗಿದ್ದು ಇದೇ ಈ ವಿವೇಕಾನಂದ ಕಾಮತನ 'ಕೊಡು ಬೇಗ ದಿವ್ಯಮತಿ' ಹಾಡಿನಿಂದಲ್ಲವೇ? ಅಂದು ತಿಂದ ಉಪ್ಪಿಟ್ಟಿನ ಬಿಸಿ, ಜಿಲೇಬಿಯ ಸಿಹಿ ನೆನೆದರೆ ಈಗಲೂ ನಾಲಗೆ ಮೇಲಿದ್ದಂತೆನಿಸುತ್ತಿದೆಯಲ್ಲ! ಅಧ್ಯಾಪಕರೆಲ್ಲರೂ ಅಂದು ಹೇಳಿದ ಹಿತ ನುಡಿ ಈಗ ಕೇಳುತ್ತಿರುವಂತಿದೆಯಲ್ಲ! ಮತ್ತೆ ನಾವು ಪಡೆದಿದ್ದ ಅವರೆಲ್ಲರ ಆಟೋಗ್ರಾಫ್! ಅದು ಗುರುಗಳಿಗೆಂದೇ ಪ್ರತ್ಯೇಕವಾಗಿರಿಸಿದ್ದ ಪಾಕೆಟ್ ಬುಕ್ಕು ಎಂದೆನ್ನುವ ಅಂಗೈ ಅಗಲದ ಪುಸ್ತಕ. 'ಸಗಣಿಯವನೊಡನೆ ಸರಸಕ್ಕಿಂತ ಗಂಧದವನೊಡನೆ ಗುದ್ದಾಟ ಲೇಸು' ಎಂದು ಬರೆದವರು ಕನ್ನಡ ಪಂಡಿತರಲ್ಲವೇ? 'ಸತ್ಯಂ ಶಿವಂ ಸುಂದರಂ' ಎಂದು ನನ್ನ ನೆಚ್ಚಿನ ಇಂಗ್ಲಿಷ್ ಮಾಷ್ಟ್ರು ಬರೆದಿದ್ದರು. ಇನ್ನು ಕೆಲವರು ಹರಸಿದ್ದರು, ಹಾರೈಸಿದ್ದರು.

ನನ್ನ ಸರ್ಕಾರಿ ಪ್ರೌಢಶಾಲೆ ಇದ್ದ ಊರು ಕಮ್ಮರಡಿ. ಸುತ್ತಮುತ್ತ ಹೊಳೆ, ಕೆರೆ, ತೊರೆ, ಗುಡ್ಡ, ಬೆಟ್ಟಗಳಿಂದ ಆವೃತವಾದ, ಹಸಿರು ಚಿಮ್ಮುತ್ತಾ ಕಮ್ಮನೆಯ ಮಲರೇ ಹರಡಿದಂತಹ, ಚಿಕ್ಕದಾದರೂ ಚೊಕ್ಕವಾದ ಚೆಲುವಾದ ಊರು. ನಸುನೀಲವಾಗಿ ಕಾಣುತ್ತಿದ್ದ ದೂರದ ಗುಡ್ಡಗಳು. ಇವುಗಳಿಗೆಲ್ಲ ಹಿರಿಯಣ್ಣನಂತೆ ತಲೆ ಎತ್ತಿ ನಿಂತ ಕುಂದಾದ್ರಿ. ಕಣ್ಣು ಕಿರಿದು ಮಾಡಿ ನೋಡಿದರೆ ಅದರ ತುದಿಯಲ್ಲಿನ ಬಸದಿಯ ಗೋಪುರದ ತುದಿಯ ಲೈಟು ಸಣ್ಣಗೆ ಮಿನುಗುವುದನ್ನು ಸುತ್ತ ಹದಿನೈದಿಪ್ಪತ್ತು ಮೈಲುಗಳವರೆಗಿನ ಊರುಗಳವರೂ ನೋಡಬಹುದಿತ್ತು. ಊರಿನ ಅಧಿಪತಿ ಗಣಪತಿಯ ಹೆಸರಿನ ಸಿದ್ಧಿ ವಿನಾಯಕ ನಾಟಕ ಸಂಘ, ಹಿಂದಿ ಭಾಷಾಭ್ಯಾಸ, ಸಂಗೀತ ತರಗತಿ, ಆಗಾಗ ಊರಿನಲ್ಲಿ ಮೊಕ್ಕಾಂ ಹೂಡುವ ನಾಟಕ-ಸರ್ಕಸ್ ಕಂಪನಿಗಳು, ಯಕ್ಷಗಾನ ಮೇಳಗಳು, ಹರಿಕಥೆ, ಸಂಗೀತ ಕಛೇರಿ ಎಂದು ಊರಿನಲ್ಲಿ ಸಾಂಸ್ಕೃತಿಕ ವಾತಾವರಣ. ''ಓಹೋಹೋ. ಹೆತ್ತವರಿಗೆ ಹೆಗ್ಗಣ ಮುದ್ದು ಎಂಬಂತೆ'' ಎಂದು ಮನಸ್ಸಿನಲ್ಲೇ ವ್ಯಂಗ್ಯವಾಡ್ಬೇಡಿ, ಪ್ಲೀಸ್. 'ಭೂಮಂಡಲದೊಳಗಾರಿಸಿ ನೋಡಲು ನಮ್ಮೂರೇ ವಾಸಿ' ಎಂದು ದಾಸರೇ ಹಾಡಿರುವಾಗ ಇನ್ನು ನನ್ನದೇನಿದೆ ಮಹಾ? ಇಲ್ಲಿ ಪ್ರೌಢಶಾಲೆ ಪ್ರಾರಂಭವಾಗಿದ್ದು ಐವತ್ತರ ದಶಕದ ಕೊನೇಲಿ. ಊರಿನ ಕೊನೇಲಿದ್ದ ರಾಮ ಮಂದಿರದಲ್ಲಿ ಶಾಲೆ ಪ್ರಾರಂಭವಾಗಿತ್ತು. ಸಂಸ್ಕೃತ - ಕನ್ನಡ, ಆರ್ಟ್ಸ್- ಸೈನ್ಸ್ ಎಂದು ಪ್ರತ್ಯೇಕ ಕೊಠಡಿಗಳು ಬೇಕಾಗ್ತಿದ್ದು, ರಾಮಮಂದಿರದ ಪಕ್ಕದ ಒಂದು ಮನೇಲಿ ಹಾಗೂ ಬೆಣ್ಣೆಗುಡ್ಡದ ಎದುರಿನ ಗ್ರಾಮಪಂಚಾಯ್ತಿ ಹಾಲಲ್ಲಿ ತರಗತಿಗಳು ನಡೀತಿದ್ವು. ನೆತ್ತೀಲಿ ಮುದ್ದಾದ ಕಲ್ಲಿನ ಬಸವಣ್ಣನ್ನ ಹೊತ್ತ ಈ ಬೆಣ್ಣೆಗುಡ್ಡದ ಬುಡದ ಬಯಲಲ್ಲಿ ಸಂಜೆಯಾಗ್ತಿದ್ದಂತೆ ಫುಟ್ಬಾಲ್, ವಾಲೀಬಾಲ್, ಬ್ಯಾಡ್ಮಿಂಟನ್ ಆಡ್ತಿದ್ದ ಊರಿನ ಗಂಡಸರು, ವಾಯುವಿಹಾರಕ್ಕೆ ಬರುವ ಹೆಂಗಸರು - ಮಕ್ಕಳು, ಪರ ಊರಿಗೆಂದು ಬಂದವರು; ಹೀಗೆ ಪುಟಿಪುಟಿವ ಲವಲವಿಕೆ. ಬೇಸಗೇಲಿ ಸಿನಿಮಾ ಟೆಂಟ್, ದೊಡ್ಡ ದೀಪದಂದು ಸಾಲುದೀಪಗಳ ಸರಮಾಲೆ, ಗುಡ್ಡದ ಮೇಲಿದ್ದ ಊರವರಿಗೆ ಆಪ್ತನಾಗಿದ್ದ ಇಷ್ಟುದ್ದ ಗಡ್ಡ ಬಿಟ್ಟಿದ್ದ ಸನ್ಯಾಸಿ ಮತ್ತವನ ಬಿಡಾರ – ಹೀಗೆ ಬೆಣ್ಣೆಗುಡ್ಡ ಹೆಸರಿನಂತೆ ಊರವರ ಆಪ್ತತೆಯ ಕೇಂದ್ರ ಬಿಂದು.

ನಾನು ಪ್ರೌಢಶಾಲೆ ಸೇರಿದ್ದು ಅರವತ್ತರ ದಶಕದ ಮಧ್ಯಭಾಗದಲ್ಲಿ. ಸುತ್ತ ಹತ್ತಾರು ಊರುಗಳಿಂದಲೂ ವಿದ್ಯಾರ್ಥಿಗಳು ಬರಿಗಾಲಲ್ಲೇ ಏಳೆಂಟು ಮೈಲಿ ನಡೆದುಬರ್ತಿದ್ರು. ಮಧ್ಯಾಹ್ನದ ಊಟಕ್ಕೆ ನೆಂಟರಿಷ್ಟರು, ಪರಿಚಿತರು, ಕ್ಯಾರಿಯರ್‌ನಲ್ಲಿ ಬುತ್ತಿ ಅಥವಾ ಹೋಟೆಲ್... ಯಾವುದಾದರೊಂದು ಹೀಗೆ ವ್ಯವಸ್ಥೆ. ಆಗ ಚಿಕ್ಕಮಗಳೂರಿನವರಾದ ವೆಂಕಟರಮಣಯ್ಯ ಮುಖ್ಯೋಪಾಧ್ಯಾಯರಾಗಿದ್ರು. ಬೆಳ್ಳಿ ಟೊಪ್ಪಿಯಂಥ ಬಿಳಿಕೂದಲು. ಕನ್ನಡಕದ ಹಿಂದಿನ ಶಾಂತ ಕಣ್ಗಳ ಪ್ರಶಾಂತ ಮುಖಭಾವ. ಒಬ್ಬ ಶ್ರದ್ಧಾವಂತ ಮುಖ್ಯೋಪಾಧ್ಯಾಯರೆಂದು ಅವರನ್ನು ಊರಿನವರೆಲ್ಲರೂ ಗೌರವಿಸ್ತಿದ್ರು. ಅವರು ನಮ್ಮ ಊರಿನಲ್ಲಿ ಒಬ್ಬರೇ ವಾಸಿಸುತ್ತಿದ್ರು. ನಮ್ಮ ತಂದೆ ಬೆಳಿಗ್ಗೆ ಅಂಗಡಿ ಬಾಗಿಲು ತೆರೆದಾಗ ಹೋಟೆಲ್ನಲ್ಲಿ ಬೆಳಗಿನ ಕಾಫಿ ಮುಗಿಸಿದ ವೆಂಕಟರಮಣಯ್ಯ ನಮ್ಮ ಅಂಗಡಿಗೆ ಬಂದು ತಂದೆಯವರೊಡನೆ ಲೋಕಾಭಿರಾಮವಾಗಿ ಮಾತಾಡಿಕೊಂಡು ಹೋಗ್ತಿದ್ದುದ್ದು ಅವರ ರೂಢಿಯಾಗಿತ್ತು. ಆಗ ನಾನು ಹತ್ತು ವರ್ಷದವಳು ಏಳನೇ ತರಗತೀಲಿದ್ದೆ. ಲೆಕ್ಕ ಎಂದರೆ ನನಗೆ ಬಲು ದುಃಖ. ಅಂಗಡೀಲಿರ್ತಿದ್ದ ನನ್ನನ್ನು ಮಾತಾಡಿಸ್ತಾ ನನ್ನ ವೈರಿಯ ಬಗ್ಗೆ ತಿಳಿದ ವೆಂಕಟರಮಣಯ್ಯ ಪ್ರತಿ ದಿನ ಒಂದು ಹತ್ತು ನಿಮಿಷ ನನಗೆ ಲೆಕ್ಕ ಮಾಡಿಸುವ ಕೆಲಸ ತಾವಾಗಿಯೇ ಪ್ರೀತಿಯಿಂದ ಕೈಗೆತ್ತಿಕೊಂಡ್ರು. 'ಪರುಷಮಣಿಯ ಸ್ಪರ್ಶದಿಂದ ಕಬ್ಬಿಣ ಚಿನ್ನವಾಯ್ತು' ಎಂದು ಕಾವ್ಯದಲ್ಲಿ ಹೇಳ್ತಾರಲ್ಲ

**ಕೆ. ಆರ್. ಉಮಾದೇವಿ ಉರಾಳ್**



ಹಾಗೆ ಚಿನ್ನವಲ್ಲದಿದ್ದೂ ಹಿತ್ತಾಳೆಯಾದ್ರೂ ಎನ್ನಬಹುದಾದಂತೆ ನನಗೆ ಲೆಕ್ಕ ಸ್ವಲ್ಪ ಮಟ್ಟಿಗೆ ಪಕ್ಕಾ ಆಯ್ತು.

ಎಂಟನೇ ತರಗತಿ ರಾಮಮಂದಿರದ ಪಕ್ಕದ ಮನೇಲಿ ನಡೀತಿತ್ತು. ನಾವು ಹುಡುಗಿಯರಿಗೆಲ್ಲ ಚಾಪೆ ಮೇಲೆ. ಹುಡುಗರೆಲ್ಲ ಬೆಂಚುಗಳ ಮೇಲೆ. ಶಾಲೆಯಲ್ಲಿ ಮುಖ್ಯೋಪಾಧ್ಯಾಯರದು ಕಟ್ಟುನಿಟ್ಟಿನ ಶಿಸ್ತು. ಪ್ರತಿದಿನ ಪ್ರಾರ್ಥನೆಯೊಂದಿಗೆ ವಾರ್ತಾವಾಚನ ಮತ್ತು ಯಾವುದಾದರೊಂದು ವಿಷಯದ ಕುರಿತು ಭಾಷಣ ಕಡ್ಡಾಯ. ಆಗಾಗ ಗ್ರಂಥಾಲಯದ ಪುಸ್ತಕಗಳ ವಿತರಣೆ. ಕುವೆಂಪು, ಕಾರಂತ, ಅನಕೃ, ತರಾಸು, ಇವರೆಲ್ಲ ನಮಗೆ ಪರಿಚಯವಾದದ್ದೇ ಹಾಗೆ. ಪಿ.ಕಾಳಿಂಗರಾವ್ ಅವರು ಮೋಹನ್ ಕುಮಾರಿ, ಸೋಹನ್ ಕುಮಾರಿ ಅವರೊಂದಿಗೆ ಭಾವಗೀತೆಗಳನ್ನು ಹಾಡಿದಾಗ ಎಲ್ಲ ವಿದ್ಯಾರ್ಥಿಗಳು ಚಿತ್ರದಲ್ಲಿನ ಬೊಂಬೆಗಳಂತೆ ಮೈಮರೆತು ಕುಳಿತು ಕೇಳಿದ್ದೆವು. ಎವೆಯಿಕ್ಕದೆ ನೋಡಿದ್ದೆವು. ಹಾಗೆಯೇ ಕನ್ನಡ ಬೆರಳಚ್ಚು ಯಂತ್ರದ ಪ್ರಾತ್ಯಕ್ಷಿಕೆ ಮತ್ತು ಉಪನ್ಯಾಸ ಕೂಡ ನಮಗೆ ಅದ್ಭುತವೆನಿಸಿತ್ತು. ಆ ವರ್ಷ 'ಹೊಂಬೆಳಕು' ಎಂಬ ಶಾಲಾ ಸಂಚಿಕೆ ಪ್ರಕಟಿಸಲಾಗಿತ್ತು. ಹಿಂದಿ ಪರೀಕ್ಷೆಗಳು, ಯುಎನ್ಒ, ರೆಡ್ ಕ್ರಾಸ್, ಎಂದೆಲ್ಲ ಹಲವು ಪರೀಕ್ಷೆಗಳು. ಅವುಗಳಾವುವೂ ಕಡ್ಡಾಯವಲ್ಲದಿದ್ರೂ ಎಲ್ಲ ಪರೀಕ್ಷೆಗಳನ್ನೂ ತೆಗೆದುಕೊಳ್ಳುವುದಕ್ಕೆ ನಮಗೆಲ್ಲ ಎಲ್ಲಿಲ್ಲದ ಉಮೇದು.

ಒಂಬತ್ತನೇ ತರಗತಿಯಲ್ಲಿ ನಾವು ಆರ್ಟ್ಸ್ ಅಥವಾ ಸೈನ್ಸ್ ಎಂದು ಆಯ್ದುಕೊಳ್ಳ ಬೇಕಿತ್ತು. ನನಗೆ ವಿಜ್ಞಾನ ಪ್ರೀತಿಯ ವಿಷಯ. ಎಲ್ಲ ಹುಡುಗಿಯರೂ ಮಾತಾಡಿಕೊಂಡು ನಾವೆಲ್ಲ ಆರ್ಟ್ಸ್ ತೆಗೆದುಕೊಳ್ಳೋಣ ಎಂದು ತೀರ್ಮಾನ ಮಾಡಿದಾಗ ನನಗೆ ತುಂಬಾ ಪಿಚ್ಚೆನಿಸಿತ್ತು. ಇಂಥದ್ದೇ ಓದಿ, ಇಷ್ಟೇ ಮಾರ್ಕ್ಸ್ ತೆಗೆಯಿರಿ ಎಂದು ಯಾರ ಮೇಲೂ ಯಾರ ಒತ್ತಡವೂ ಅಂದು ಇರುತ್ತಿರಲಿಲ್ಲ. ನನಗೆ ಒಗ್ಗಟ್ಟು ಮುರಿಯದೆ ಬೇರೆ ಮಾರ್ಗವಿರಲಿಲ್ಲ. ನನಗೆ ಸೈನ್ಸ್ ಬೇಕು ಎಂದೆ. ಇದು ಮುಖ್ಯೋಪಾಧ್ಯಾಯರ ಗಮನಕ್ಕೆ ಬಂದಾಗ ಅವರಿಗೆ ಆಶ್ಚರ್ಯ. ಎಷ್ಟಾದರೂ ಗಣಿತದಲ್ಲಿನ ನನ್ನ ಸಾಮರ್ಥ್ಯ ಅಳತೆ ಮಾಡಿದ್ದರಲ್ಲವೇ ? ನನಗೆ ಬುದ್ಧಿ ಹೇಳಿದರು. ನೀನು ಸೈನ್ಸ್ ತರಗತೀಲಿ ಒಬ್ಬಳೇ ಹುಡುಗಿ ಆಗ್ತಿ ಎಂದರು. ಎರಡು ಮೂರು ದಿನಗಳು ತರಗತೀಲಿ ಎದ್ದು ನಿಲ್ಲಿಸಿ ಶಿಕ್ಷಿಸಿದರು. ಅಂತೂ ಕೊನೆಗೆ ನಮ್ಮ ತಂದೆಯವರ ಮೂಲಕವೂ ಹೇಳಿಸಿ ಆರ್ಟ್ಸ್‌ಗೆ ಸೇರಿಸಿದರು. ವಿದ್ಯಾರ್ಥಿಗಳ ಇತಿಮಿತಿ ಅರಿತು ಹೊಣೆ ಹೊತ್ತು ಮಾರ್ಗದರ್ಶನ ಮಾಡಿದ್ದ ಅಂತಹ ಅಧ್ಯಾಪಕರಿಂದಾಗಿಯೇ ನನಗೆ ಪದವಿ ಮುಗಿಯುತ್ತಿದ್ದಂತೆಯೇ ಅಧ್ಯಾಪಕಿಯಾಗುವುದು ಸಾಧ್ಯವಾಯಿತು.

ಮೊಟ್ಟ ಮೊದಲ ಬಾರಿಗೆ ಶಾಲೆಗೆ ದೈಹಿಕ ಶಿಕ್ಷಕರು ಬಂದಿದ್ದರು. ಇಡೀ ಶಾಲೆಯನ್ನು ಶಾಂತಿ, ಕೀರ್ತಿ, ಶಕ್ತಿ, ಸ್ಫೂರ್ತಿ ಎಂದು ನಾಲ್ಕು ತಂಡಗಳಾಗಿ ವಿಭಾಗಿಸಿ ಕ್ರೀಡಾ ಸ್ಪರ್ಧೆಗಳನ್ನು ಏರ್ಪಡಿಸ್ತಿದ್ರು. 'ದೊಡ್ಡಿಕೆರೆ ಮುದುಕ ಬೆಂಗ್ಳೂರ್ಗೆ ಹೊರಟನು' ಎಂಬ ಬಾಂಗ್ಡಾ ಶೈಲಿಯ ನೃತ್ಯ ಹುಡುಗರಿಗೆ, 'ಆವೋ ಬಚ್ಚೋ' ಎಂಬ ಫಾಲ್ಕೆ ಪ್ರಶಸ್ತಿ ವಿಜೇತ ಕವಿ ಪ್ರದೀಪ್ ವಿರಚಿತ ದೇಶಭಕ್ತಿ ಗೀತೆಯ ಲೇಜ್ಹೀಂ ಹುಡುಗಿಯರಿಗೆ, ಮತ್ತೆ ಡಂಬಲ್ಸ್, ಕೋಲಾಟ ಎಂದು ಖೋ ಖೋ, ಕಬಡ್ಡಿ, ಥ್ರೋಬಾಲ್, ಒಳಾಂಗಣ ಆಟಗಳು ಎಂದು ಸಂಭ್ರಮಿಸ್ತಿದ್ದೆವು. ಊರಿನ ಮತ್ತೊಂದು ತುದಿಯ ಬಾನೊಳ್ಳಿಯ ಈಶ್ವರ ದೇವಸ್ಥಾನದಾಚೆಯಲ್ಲಿ ಶಾಲಾ ಕಟ್ಟಡ ಸಿದ್ಧಗೊಳ್ಳುತ್ತಿತ್ತು. ನಾವು ಎಸ್ಸೆಸ್ಸೆಲ್ಸಿಗೆ ಬಂದಾಗ ಹೊಸ ಕಟ್ಟಡದಲ್ಲಿನ ಮೊದಲ ಎಸ್ಸೆಸ್ಸೆಲ್ಸಿಯ ವಿದ್ಯಾರ್ಥಿಗಳಾಗುವ ಸುಯೋಗ ನಮ್ಮದಾಗಿತ್ತು.

ಎಸ್ಸೆಸ್ಸೆಲ್ಸಿಗೆ ಬರುವಾಗ ಗುರುರಾಜ ರಾವ್ ಎಂಬ ಎತ್ತರದ ಆಳ್ತನದ ಸೂಟುಧಾರಿ ಮತ್ತು ಗಂಭೀರ ವ್ಯಕ್ತಿತ್ವದವರು ಮುಖ್ಯೋಪಾಧ್ಯಾಯರಾಗಿದ್ದರು. ತರಗತೀಲಿ ಮತ್ತೆ ಅದೇ ಗಣಿತದ ತರಲೆ. ಹಲವರು ಟ್ಯೂಷನ್‌ಗೆ ಸೇರಿದ್ರು. ಗಣಿತ ಮಾಷ್ಟ್ರು ನನಗೂ ನೀನು ಟ್ಯೂಷನ್‌ಗೆ ಸೇರ್ಬೇಕು ಎಂದರಾದರೂ ಅದು ಪರೋಕ್ಷವಾಗಿ ದಡ್ಡಿ ಎಂಬ ಹಣೆಪಟ್ಟಿ ಹಚ್ಚಿಕೊಂಡಂತೆ ಎಂದು ಭಾವಿಸಿ ನಾನು ಸುಮ್ಮನುಳಿದೆ. ಸೋಷಿಯಲ್ ಡೇ ದಿನ ಹೈದ್ರಾಲಿ ಎಂಬ ವಿದ್ಯಾರ್ಥಿ ಒಬ್ಬ ಕ್ರಾಂತಿಕಾರನಾಗಿ ರೂಪುಗೊಂಡಿದ್ದ. ಅಂದು ಪ್ಯಾಂಟ್ ಧರಿಸಿ ಶಾಲೆಗೆ ಬಂದು ಎಲ್ಲರೂ ಹುಬ್ಬೇರಿಸುವಂತೆ ಮಾಡಿದ್ದ! ಅಬ್ಬ, ಮಾಷ್ಟ್ರ ಹಾಗೆ ಪ್ಯಾಂಟ್ ಧರಿಸಿ ಬರಲು ಅವನಿಗೆ ಅದೆನ್ನೆಷ್ಟು ಧೈರ್ಯ ಇದ್ದಿದ್ದೀತು ಎಂದು ಎಲ್ಲರೂ ಅಚ್ಚರಿಯಿಂದ ಕಣ್ಣರಳಿಸುತ್ತಾ ಒಬ್ಬರಿಗೊಬ್ಬರು ಪಿಸುಗುಟ್ಟಿಕೊಂಡರು. ಪರೀಕ್ಷಾ ಕೇಂದ್ರ ಹತ್ತು ಮೈಲಿ ದೂರದ ಹರಿಹರಪುರದಲ್ಲಿ. ೧೯೬೭ರ ಏಪ್ರಿಲ್ ಪರೀಕ್ಷೆಯಲ್ಲಿ ಮೂವರು ವಿದ್ಯಾರ್ಥಿನಿಯರೂ ಸೇರಿ ಹದಿಮೂರು ಮಂದಿ ಪಾಸಾಗಿದ್ದೆವು. ಪರೀಕ್ಷೆಯ ಫಲಿತಾಂಶ ಬರುವುದಕ್ಕೆ ಮುನ್ನವೂ ನಂತರವೂ ನಪಾಸಾಯಿತೆಂದು, ಮಾರ್ಕ್ಸ್ ಸಾಲಲಿಲ್ಲ ಎಂದು ಸಾವಿಗೆ ಶರಣಾಗುವ ವರದಿ ಕೇಳಿಸಿಕೊಳ್ಳಬೇಕಿರುವ ಇಂದಿನ ದುರ್ದಿನಗಳ ನೆರಳೂ




# ಮೊಬೈಲು ಮಾಡ್ಯೆತಿ ಎಲ್ರಿಗೂ ಐಲು

ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ
ನಂ. ೧೬೪೬/೧೮, ಮಹಡಿ, ವಿದ್ಯಾನಗರ, ದಾವಣಗೆರೆ - ೫೭೭ ೦೦೫

- ೧ -

ಯಾರಾದ್ರೂ ಮನಿಗ ಬಂದಾಗ
ಒಂದು ಹಾಡು ಹೇಳ್ರಿ ಅಂತಾರ.
ಆತು, ಹೇಳ್ತೀನಿ ಕೇಳ್ರಿ ಅಂತೀನಿ.
ಕುಂತು ಕೇಳುವರ ಮೊಬೈಲು ರಿಂಗ್ ಆಗ್ಯೆತಿ
ಅವರು ಥಟ್ ಅಂತ ಎದ್ದು ಮೊಬೈಲ್ನ ಕಿವಿಗೆ ಹಚ್ಚಕೊಂಡು
ಕಿಟಕಿ ಹತ್ರ ಹೋಗಿ ಮಾತಾಡ್ತಾ ನಿಂದರತಾರ.
ನಾ ಯಾಕಾರ ಹಾಡು ಹೇಳ್ಬೇಕು ನೀವಽ ಹೇಳ್ರಿ !

- ೨ -

ನೀವು ಒಂದು ದಿನಾನೂ ನನ್ನ ಜತಿ ಕೂತು
ಒಂದು ಅರ್ಧ ತಾಸೂ ಮಾತಾಡಲ್ಲ ಅಂತ ದೂರ್ತಾಳ ನನ್ನ ಹೆಂಡತಿ.
ಆತು ಬಾ, ಮಾತಾಡಾನ ಅಂತ ನಾನು ಅವಳ ಪಕ್ಕದಲ್ಲೇ ಕೂರ್ತೀನಿ.
ನಾನು ಮಾತು ಶುರು ಮಾಡತ್ಲೇ ಇವಳ ಮೊಬೈಲ್ ರಾಗ ಕೇಳಿಸ್ಯೆತಿ.
ಕುಂತವಳು ಧಡಕ್ಕಂತ ಎದ್ದು, ಆಚೆ ನಿಂತು, ಮೊಬೈಲ್ನಾಗ
ಮಾತಾಡಕ ಶುರು ಮಾಡಿದ್ಲು ಅಂದ್ರ ನಾನು ಅರ್ಧ ತಾಸು
ಸುಮ್ನೆ ಅವಳ ಕಡಿ ನೋಡ್ಕಂತ ಕುಂತ್ಕೋಬೇಕ್ರಿ.
ಈಗ ನನ್ನ ತಪ್ಪೇನ್ಯೆತಿ ನೀವಽ ಹೇಳ್ರಿ !

- ೩ -

ಮಕ್ಕಳ ಜತಿ ಮಾತಾಡ್ತಾ ಕುಂತ್ಕಳಾನ ಅಂತ ಕುಂತ್ರ
ಒಬ್ಬನಿಗೆ ಅವನ ಆಫೀಸಿನಿಂದ ಮೊಬೈಲ್ ಬರ್ರೈತಿ,
ಇನ್ನೊಬ್ಬನಿಗೆ ಅವನ ಸ್ನೇಹಿತರಿಂದ ಬರ್ರೈತಿ.
ಸರಿ, ಒಬ್ಬ ಆ ದಿಕ್ಕಿಗೆ, ಇನ್ನೊಬ್ಬ ಈ ದಿಕ್ಕಿಗೆ.
ಇನ್ನ ನನಗ ಯಾವ ದಿಕ್ಕು ನೀವಽ ಹೇಳ್ರಿ !

ಅಂದು ಇರಲಿಲ್ಲ. ಬರಿಯ ತೇರ್ಗಡೆ ಅಥವಾ ಪ್ರಥಮ ದರ್ಜೆ ಎರಡೂ ಹೆಚ್ಚು ಕಡಿಮೆ ಒಂದೇ ಆಗಿದ್ದವು.

ಕೈಯಲ್ಲಿದ್ದ ಫೋಟೋನ ಅಟ್ಟದಿಂದ ಕೆಳಗಿಳಿಸಿ ನಾನೂ ಕೆಳಗಿಳಿದು ಒಂದು ಬಟ್ಟೆ ತಂದು ಉಜ್ಜಿ ಒರೆಸಿ ಪರಿಶೀಲಿಸಿದೆ. ಅಂದು ಪಾಸಾಗದ ಹಲವರು ಜೀವನದ ನಿರೀಕ್ಷೆಯ ಪರೀಕ್ಷೆಯಲ್ಲಿ ಪಾಸಾಗಿದ್ದರಿಂದಲೋ ಏನೋ ಇಂದು ಊರಿನಲ್ಲಿ ಪರ ಊರಿನಲ್ಲಿ ಸಾರ್ಥಕ ಬಾಳು ನಡೆಸುತ್ತಿದ್ದಾರೆ.

ಫೋಟೋ ಕೆಳಗಿಟ್ಟರೂ ಮನಸ್ಸಿನ ಕ್ಯಾನ್ವಾಸಿನ ಮೇಲೆ ತೆರೆದುಕೊಂಡ ನೆನಪುಗಳ ರೀಲು ಸರಣಿಸರಣಿಯಾಗಿ ಚಿತ್ರಗಳನ್ನು ಮೂಡಿಸುತ್ತಿತ್ತು. ಒಳಗಣ್ಣು ತೆರೆದು ನೋಡಲೇಬೇಕಿತ್ತು. ನನ್ನ ಪದವಿ ಪೂರೈಸುತ್ತಲೇ ಅಧ್ಯಾಪಕಿಯಾಗಲು ಕೆಪಿಎಸ್ಸಿಗೆ ಅರ್ಜಿ ಗುಜರಾಯಿಸಿದೆ. ಸಂದರ್ಶನ ಜಿಲ್ಲಾ ಕೇಂದ್ರ ಚಿಕ್ಕಮಗಳೂರಿನಲ್ಲಿ. ನನ್ನ ಸೋದರ ಸಂಬಂಧಿ ಮತ್ತು ತಮ್ಮನೊಂದಿಗೆ ಹೋಗಿ ಸಂದರ್ಶನ ಎದುರಿಸಿದೆ. ಮುಗಿಸಿದಾಗ ಸಂತಸದ ಸಂತೃಪ್ತಿ ಹೃದಯ ತುಂಬಿತ್ತು. ಅಂದು ಸಂಜೆ ನನ್ನ ಮುಖ್ಯೋಪಾಧ್ಯಾಯರಾಗಿದ್ದ ವೆಂಕಟರಮಣಯ್ಯನವರ ಮನೆ ಹುಡುಕಿಕೊಂಡು ಹೋಗಿದ್ದೆವು. ಈಗ ನಿವೃತ್ತರಾಗಿದ್ದ ಅವರು ನಮ್ಮನ್ನು ನೋಡಿ ತುಂಬ ಸಂತೋಷಪಟ್ಟರು. ಆ ಸಂತೋಷವೇ ಮುಂದಿನ ನನ್ನ ವೃತ್ತಿಜೀವನಕ್ಕೆ ಆಶೀರ್ವಾದ ಎಂದು ಅಲ್ಲೇ ಆಗಲೇ ನಾನು ತೀರ್ಮಾನಿಸಿದೆ.

ಎರಡು ವರ್ಷ ಬೇರೆಡೆ ಕರ್ತವ್ಯ ನಿರ್ವಹಿಸಿ ಎಪ್ಪತ್ತರ ದಶಕದ ಮಧ್ಯಭಾಗದಲ್ಲಿ ಇಲ್ಲಿಗೇ ಅಧ್ಯಾಪಕಿಯಾಗಿ ಬಂದೆ. ನನ್ನ ಎಸ್ಸೆಸ್ಸೆಲ್ಸಿಯ ಕೋಣೆಯಲ್ಲಿ ನಾನು ಕೂರುತ್ತಿದ್ದ ಅದೇ ಡೆಸ್ಕ್, ಅದೇ ಜಾಗದಲ್ಲಿ ತನ್ನ ನಿರ್ದಿಷ್ಟ ಗುರುತಿನೊಂದಿಗೆ ತನ್ನಿರವನ್ನು ಘೋಷಿಸಿದಾಗ ಹೃದಯವೇ ಬಾಯಿಗೆ ಬಂದಂತೆನಿಸಿತ್ತು. ಶಾಲೆಯಲ್ಲಿ ನುರಿತ ಶ್ರದ್ಧಾವಂತ ಅಧ್ಯಾಪಕ ವರ್ಗ ಇತ್ತು. ಅಲ್ಲಿನ ಹಿರಿಯ ಸಹೋದ್ಯೋಗಿ ನಾಗಮ್ಮ ನನಗೆ ಹಿರಿಯಕ್ಕನಂತಿದ್ರು. ಚಂದ್ರಶೇಖರಯ್ಯ ಎಂಬ ದಕ್ಷ ಉತ್ಸಾಹಿ ಮುಖ್ಯೋಪಾಧ್ಯಾಯರಿದ್ರು. ಸಿಬ್ಬಂದಿ ವರ್ಗದಲ್ಲಿ ಶಾಲಾರಂಭದಿಂದಲೂ ಇದ್ದ ಕೆಂಪಣ್ಣ ಎಂಬ ನಗುಮುಖದ ನಿಸ್ಪೃಹ ಭಂಟನಿದ್ದ. ವಿದ್ಯಾರ್ಥಿಗಳೆಲ್ಲ ನನ್ನ ಓದಿನ ದಿನಗಳಿಗಿಂತ ಪ್ರತಿಭಾವಂತರು, ಚುರುಕು ಚಟುವಟಿಕೆಯವರು ಎಂಬ ಸ್ಪಷ್ಟ ವ್ಯತ್ಯಾಸ ಎದ್ದು ಕಾಣುತ್ತಿತ್ತು. ನಾನು ಇನ್ನೂ ಓಟದ ಸ್ಪರ್ಧೆಗೆ ಬಯಲಿಗಿಳಿದಿದ್ದೆನಷ್ಟೆ. ಘೋಡಾ ಹೈ, ಮೈದಾನ್ ಹೈ ಎಂಬಂತೆ ಕಲಿಯುವುದು, ಪರಿಣತಿ ಪಡೆಯುವುದು ಎಲ್ಲ ನನಗೇ ಬಿಟ್ಟಿದ್ದಾಗಿತ್ತು. ಶಾಲೆಯ ವಾತಾವರಣ ತುಂಬ ಚೇತೋಹಾರಿಯಾಗಿತ್ತು. ನನ್ನ ಶಕ್ತಿ ಮೀರಿ ಉತ್ತಮ ಪಾಠಕ್ಕಾಗಿ ಸಿದ್ಧತೆ ಮಾಡಿಕೊಳ್ತಿದ್ದೆ. ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸುತ್ತಿದ್ದೆ. ವಿಶೇಷವಾಗಿ ಕ್ರೀಡಾ ಸ್ಪರ್ಧೆಗಳಲ್ಲಿ ಇಲ್ಲಿನ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರಮಟ್ಟಗಳಲ್ಲಿ ನಿರಂತರ ಭಾಗವಹಿಸ್ತಿದ್ರು. ಚರ್ಚಾಸ್ಪರ್ಧೆ, ಆಶುಭಾಷಣ, ಪ್ರಬಂಧ ಸ್ಪರ್ಧೆಗಳಲ್ಲಿ, ಹಾಡಿನಲ್ಲಿ, ಅಂತರ ಪ್ರೌಢಶಾಲಾ ಸ್ಪರ್ಧೆಗಳಲ್ಲಿ ಭಾಗವಹಿಸಿ ಜಯಭೇರಿ ಬಾರಿಸ್ತಿದ್ರು. ಈಗ ಅಂಕಗಳಿಕೆ ಬಗ್ಗೆ ಹೆಚ್ಚು ಗಮನ ಹರಿಸುವ ಪ್ರವೃತ್ತಿ ಬೆಳೆದಿತ್ತು. ಶಾಲಾ ಫಲಿತಾಂಶ ನಾಲ್ಕಾರು ವರ್ಷಗಳು ಜಿಲ್ಲೆಯಲ್ಲೇ ಅತ್ಯುತ್ತಮ ಮಟ್ಟದ್ದಾಗಿತ್ತು. ಊರಿನ ಗಣ್ಯರು, ಹಿರಿಯರು ಮತ್ತು ಶಾಲಾಭಿವೃದ್ಧಿ ಸಮಿತಿಯವರಿಂದ ಶಾಲೆಯತ್ತ ಪ್ರೀತಿಪೂರ್ವಕ ಸಹಾಯ ಹಸ್ತ. ಅಧ್ಯಾಪಕಿಯಾಗಿ ಇಲ್ಲಿ ನಾನು ಕಳೆದ ನಾಲ್ಕು ವರ್ಷಗಳು ಮರೆಯಲಾಗದ ದಿನಗಳು.

ಕೆಳಗಿಟ್ಟಿದ್ದ ಫೋಟೋವನ್ನು ಎತ್ತಿ ಜೋಪಾನವಾಗಿ ತೆಗೆದಿಟ್ಟೆ. ಹಿಂದಿನ ನೆನಪುಗಳು ಜಡಿಮಳೆಯಂತೆ ಬಿಡದೆ ಸುರಿದಿದ್ದವು. ಮಳೆ ನಿಂತರೂ ಮರದಿಂದ ಹನಿ ತೊಟ್ಟಿಕ್ಕುತ್ತಲೇ ಇತ್ತು. 'ಏರಿದವನೊಮ್ಮೆ ಇಳಿಯಲೇ ಬೇಕಲ್ವೆ ?' ಎಂಬಂತೆ ಏಳ್ಗತಿ, ಇಳಿಗತಿಗೊಳಪಡದ ಸಂಘ ಸಂಸ್ಥೆಗಳೇ ಇಲ್ಲವೇನೋ ? ಈ ಶಾಲೆಯೂ ಅದಕ್ಕೆ ಅಪವಾದವಲ್ಲ. ಫಲಿತಾಂಶ ಸಾಲದಾಯಿತು, ಬೋಧಕ ವೃಂದದ ಅಭಾವವಿದೆ, ಇದ್ದವರಿಗೇ ಆಸಕ್ತಿ ಸಾಲದಾಯಿತು, ಶಿಸ್ತು ನಾಸ್ತಿಯಾಗಿದೆ ಎಂಬೆಲ್ಲಾ ದೂರುಗಳಿಗೆ ಗುರಿಯಾಯಿತು. ಮತ್ತೆ ಹುರುಪು, ಹುಮ್ಮಸ್ಸಿನಿಂದ ಹುರಿಗಟ್ಟಿ ನಿಂತಿತು. ಸುತ್ತಮುತ್ತಲೆಲ್ಲ ಹೊಸ ಪ್ರೌಢಶಾಲೆಗಳಾದುವು. ಇಲ್ಲಿನ ದಾಖಲಾತಿ ಇಳಿಮುಖವಾಯಿತು. ಆದರೂ ಪ್ರೌಢಶಾಲೆ ಎಂದಿದ್ದುದು ಜ್ಯೂನಿಯರ್ ಕಾಲೇಜು ಎಂದು ಬಡ್ತಿ ಹೊಂದಿತು.

ಇತ್ತೀಚೆಗೆ ನಾನು ಓದಿದ ಒಂದು ಕತೆಯಲ್ಲಿ ಇಪ್ಪತ್ತೈದು ಮೂವತ್ತು ವರ್ಷಗಳ ಹಿಂದೆ ಸಹಪಾಠಿಗಳಾಗಿದ್ದವರೆಲ್ಲ ತಾವು ಓದಿದ್ದ ಊರಿನಲ್ಲಿ ಒಂದೆಡೆ ಸೇರುತ್ತಾರೆ. ಅಂದಿನ ತರಲೆ ತಂಟಲಮಾರಿಗಳೆಲ್ಲ ಇಂದು ಗಣ್ಯರು, ಶ್ರೀಮಂತರು ಆಗಿದ್ದರು. ಒಬ್ಬ ಸಹಪಾಠಿ ಮಾತ್ರ ಸ್ವಂತಕ್ಕೊಂದು ಮನೆಯೂ ಇಲ್ಲದೆ ಬಡತನದಿಂದಿದ್ದ. ಉಳಿದವರೆಲ್ಲ ಸೇರಿ ಅವನಿಗೆ ಒಂದು ಮನೆಯನ್ನೇ ಕೊಡುಗೆ ನೀಡುತ್ತಾರೆ. ಇದು ಕಾಲ್ಪನಿಕ ಕಥೆ. ಹಲವಾರು ವರ್ಷಗಳ ಹಿಂದಿನ ವಿದ್ಯಾರ್ಥಿಗಳೆಲ್ಲ ಪರಸ್ಪರ ಸಂಪರ್ಕಿಸಿ ಅಂದಿನ ಅಧ್ಯಾಪಕರು ಸಿಬ್ಬಂದಿ ವರ್ಗದವರನ್ನೂ ಹುಡುಕಿ ಅಂದಿದ್ದ ವಾತಾವರಣವನ್ನೇ ನಿರ್ಮಿಸಿ, ಅದೇ ಅಧ್ಯಾಪಕರಿಂದ ಪಾಠ ಮಾಡಿಸಿಕೊಂಡು, ಅವರಿಂದ ಶಿಕ್ಷೆ ಪಡೆದು ಹಿಂದಿನ ಬಾಲ್ಯವನ್ನು ಇಂದಿಗೆ ಎಳೆತಂದಿದ್ದ ನಿಜ ಘಟನೆ ಎರಡ್ಮೂರು ವರ್ಷಗಳ ಹಿಂದೆ ಪತ್ರಿಕೆಗಳಲ್ಲಿ ವರದಿಯಾಗಿತ್ತು. ಆ ವಿದ್ಯಾರ್ಥಿಗಳೆಲ್ಲ ತಮ್ಮ ಹಳೆಯ ಶಾಲೆಯ ಅಭಿವೃದ್ಧಿಗೂ ಮುಂದಾಗಿದ್ದರು. ಇಂದಿಗೂ ವೈದ್ಯಕೀಯ ವಿದ್ಯಾಲಯಗಳಲ್ಲಿ ಹತ್ತು ಅಥವಾ ಇಪ್ಪತ್ತೈದು ವರ್ಷಗಳಿಗೊಮ್ಮೆ ಎಲ್ಲ ಸಹಪಾಠಿಗಳು ಒಟ್ಟು ಸೇರುವ ಒಂದು ಕ್ರಮ ಕೆಲವು ಪ್ರತಿಷ್ಠಿತ ಮೆಡಿಕಲ್ ಕಾಲೇಜುಗಳಲ್ಲಿದೆಯಂತೆ.

ಈ ಶಾಲೆಯೂ ಕೂಡ ಐವತ್ತು ವರ್ಷ ಸಮೀಪಿಸ್ತಿದೆ. ಇಲ್ಲಿಯೂ ಸುವರ್ಣ ಮಹೋತ್ಸವಾಚರಣೆ ನಡೆದೀತು. ಆಗ ಹಿಂದಿನ ವರ್ಷಗಳ ಹುಡುಗ ಹುಡುಗಿಯರು ನಾವೆಲ್ಲ ಒಟ್ಟು ಸೇರಬಹುದೇನೋ ! ಅಂದಿನ ಈ ಶಾಲೆಯ ಹಲವು ಹೈದ ಹೈದೆಯರು ಸಮಾಜದಲ್ಲಿ ಪ್ರತಿಭಾವಂತರಾಗಿ, ಸಾಧಕರಾಗಿ, ಗಣ್ಯರಾಗಿ ತಮ್ಮದೇ ಹೆಜ್ಜೆ ಗುರುತು



ಮೂಡಿಸಿದ್ದಾರೆ. ಮಿನುಗು ನಕ್ಷತ್ರದಂತೆ ಮಿಂಚುತ್ತಾ ತಾರಾಮೌಲ್ಯ ಹೊಂದಿದವರೂ ಇದ್ದಾರೆ. ಆದರೆ ಭೌತಿಕವಾಗಿ ಒಟ್ಟುಗೂಡುವುದರ ಮಹತ್ವ ಏನು ? ಕೇವಲ ಭಾವನಾತ್ಮಕತೆಗಾಗಿಯೇ ? ನಮ್ಮ ರಾಷ್ಟ್ರಕವಿ ಜಿಎಸ್ಸೆಸ್ ಎನ್ನುವಂತೆ :

ಎಲ್ಲಿಗೆ ಇನ್ನೆಲ್ಲಿಗೆ, ಇಷ್ಟು ದಿವಸ ನಡೆದು ನಾವು
ಬಂದು ನಿಂದುದೆಲ್ಲಿಗೆ
ಗತವೈಭವದಿತಿಹಾಸದ ನೆನಪ ತಳ್ಳಿ ಮೂಲೆಗೆ
ವಾಸ್ತವದಲಿ ಬೇರೂರುತ ನಾವು ಬೆಳೆವುದೆಂದಿಗೆ ?

– ಎಂಬಂತೆ ಶಾಲೆಯ ಇದುವರೆಗಿನ ಅಭಿವೃದ್ಧಿ ಪಥದತ್ತ ಸಿಂಹಾವಲೋಕನ ಬೀರಿ, ವಾಸ್ತವಿಕ ಸ್ಥಿತಿಗತಿ ಗಮನಿಸಿ ಭವಿಷ್ಯದಲ್ಲಿನ ಪ್ರಗತಿಗೆ ನಿರ್ಧಾರ ಕೈಗೊಂಡರೆ ಆಗ ಅಂತಹ ಒಟ್ಟುಸೇರುವಿಕೆಗೊಂದು ಮೆರಗು ಮೂಡೀತು. 'ಒಗರೊಗರಾದ, ಹೀಚುಗಾಯಾದ ಕಾಡುಸೇಬಿನಂತಿದ್ದವರನ್ನು ಸುಮಧುರವಾದ ಸಿಹಿ ಸೇಬಿನಂತೆ ಪರಿವರ್ತಿಸಿದ' ಹಿರಿಮೆ ಈ ಶಾಲೆಯದಲ್ಲವೇ ? ಅದು ತನ್ನ ಭವ್ಯ ಭವಿತವ್ಯ ನಿರ್ಮಿತಿಯ ಧ್ಯೇಯವನ್ನೂ ಸಾಧಿಸಿ ಕೊಂಡಿತಲ್ಲವೇ ? ತನ್ಮೂಲಕ ಅದೇ ತನ್ನ ಹಳೆಯ ವಿದ್ಯಾರ್ಥಿನಿಯರನ್ನು ಸಮಾಜ ಮುಖಿಗಳನ್ನಾಗಿಸಿತಲ್ಲವೇ ?

ಕೆ. ಆರ್. ಉಮಾದೇವಿ ಉರಾಳ್
'ವನಸುಮ', ಆಜಾದ್ ರಸ್ತೆ, ತೀರ್ಥಹಳ್ಳಿ - ೫೭೭ ೪೩೨, ಶಿವಮೊಗ್ಗ ಜಿಲ್ಲೆ



# ಸೆಟ್‌ಬ್ಯಾಕ್‌ನ ಅನುಕೂಲಗಳು

ಹರಿ, ಸಿರಿ, ಮಾಧು ಮೂರೂ ಜನ ಒಟ್ಟಿಗೆ ಒಂದು ಬಡಾವಣೆಯಲ್ಲಿ ೩೦/೪೦ ಅಡಿಯ ಸೈಟುಗಳನ್ನು ತೆಗೆದುಕೊಂಡಿದ್ದರು. ಸಿರಿಯು ಮೊದಲು ಮನೆ ಕಟ್ಟಲು ಪ್ರಾರಂಭಿಸಿದ. ಅವನು ತನಗೆ ಗೊತ್ತಿದ್ದ ವಾಸ್ತುಶಿಲ್ಪಿಯ ಸಹಾಯ ಪಡೆದ. ಅವನ ಮನೆಯ ಬಲ ಪಕ್ಕದಲ್ಲಿ ಮಾಧುವಿನ ಮನೆ, ಎಡ ಪಕ್ಕದಲ್ಲಿ ಹರಿಯ ಮನೆ ಇತ್ತು. ಅದೇ ಸಮಯಕ್ಕೆ ಹರಿ, ಮಾಧು ಇಬ್ಬರೂ ಮನೆ ಕಟ್ಟಬೇಕೆಂದು ಅಂದುಕೊಂಡುದುದರಿಂದ, ಸಿರಿಯ ಮನೆಯ ವಾಸ್ತುಶಿಲ್ಪಿಯೇ ಇವರ ಮನೆಗಳನ್ನೂ ವಿನ್ಯಾಸ ಮಾಡಿದ. ಇದಕ್ಕೆ ಸಿರಿಯ ಸಲಹೆಯೇ ಕಾರಣ. ಈಗ ನಮ್ಮ ಗಮನವೆಲ್ಲಾ ಸಿರಿಯ ಮನೆಯ ವಿನ್ಯಾಸದ ಬಗ್ಗೆ. ವಾಸ್ತುಶಿಲ್ಪಿಯೊಬ್ಬ ಮನೆಯ ಸುತ್ತ ನಿಗದಿಯಾದಂತೆ ಜಾಗಗಳನ್ನು ಬಿಟ್ಟು ಮನೆಯನ್ನು ವಿನ್ಯಾಸ ಮಾಡಿದರೆ ಹೇಗಿರುತ್ತದೆ ಎಂಬುದೇ ಇಲ್ಲಿನ ಸಾರಾಂಶ.

ಸಿರಿಯ ಮನೆಯ ಸುತ್ತಲೂ ನಿಗದಿಪಡಿಸಿದಂತೆ ಸೆಟ್‌ಬ್ಯಾಕ್‌ಗಳನ್ನು ಬಿಡಲಾಗಿತ್ತು. ಇದೇ ರೀತಿ ಬಲ ಪಕ್ಕದಲ್ಲಿ ಮಾಧುವಿನ ಮನೆಯಲ್ಲಿಯೂ, ಹಾಗೆಯೇ ಎಡ ಪಕ್ಕದಲ್ಲಿ ಹರಿಯ ಮನೆಯಲ್ಲಿಯೂ ಜಾಗ ಬಿಡಲಾಗಿತ್ತು. ಇದರಿಂದ ಅವರ ಮನೆಗಳ ನಡುವೆ ಸುಮಾರು ೮ ಅಡಿಗಳಷ್ಟು ಜಾಗ ಉಂಟಾಗಿ ಮನೆಗೆ ಗಾಳಿ, ಬೆಳಕು ಚೆನ್ನಾಗಿ ಬರುತ್ತಿತ್ತು. ಚಿಕ್ಕ ಸೈಟಾದುದರಿಂದ, ಎಲ್ಲಾ ರೂಮುಗಳು ಒಂದೊಂದು ಮೂಲೆಯಲ್ಲಿ ಬರುತ್ತಿದ್ದುದರಿಂದ ಒಳ್ಳೆಯ ಕ್ರಾಸ್ ವೆಂಟಿಲೇಶನ್ ಇತ್ತು. ಮೂವರೂ ಮಾತಾಡಿಕೊಂಡು ಮನೆಗಳ ಮಧ್ಯೆ ಕಾಂಪೌಂಡಿಗೆ ಬದಲು ಚೈನ್ ಲಿಂಕಿನ ಬೇಲಿಯನ್ನು ಹಾಕಿ, ಅದಕ್ಕೆ ಘಮಘಮಿಸುವ ಮಲ್ಲಿಗೆ ಬಳ್ಳಿಯನ್ನು ಹಬ್ಬಿಸಿದ್ದರು. ಇದರ ಪರಿಮಳವೂ ಗಾಳಿಯೊಂದಿಗೆ ಸೇರಿ ತೇಲಿಬಂದು ಮನಸ್ಸಿಗೆ ಮುದನೀಡುತ್ತಿತ್ತು.

ಮನೆಯ ಬಲ ಪಕ್ಕದಲ್ಲಿ ೪ ಅಡಿಗಳಷ್ಟು ಜಾಗ ಇದ್ದುದರಿಂದ ಅಲ್ಲಿ ದ್ವಿಚಕ್ರ ವಾಹನವನ್ನು ನಿಲ್ಲಿಸಲು ಅನುಕೂಲವಿತ್ತು. ಹಾಗೆಯೇ ಉಳಿದ ಕಡೆ ಸಣ್ಣ ಗಿಡಗಳನ್ನು ಹಾಕಿ ಕಿಟಕಿ ತೆರೆದಾಗ ಕಣ್ಣಿಗೂ ಹಿತ ನೀಡುತ್ತಿದ್ದವು. ವಾಸ್ತುಶಿಲ್ಪಿಯು ಕಿಟಕಿಗಳನ್ನು ಹೇಗೆ ವಿನ್ಯಾಸಗೊಳಿಸಿದ್ದನೆಂದರೆ ಎರಡೂ ಮನೆಗೂ ಏಕಾಂತತೆ (ಪ್ರೈವೆಸಿ)ಯೂ ಇತ್ತು, ಹಾಗೆಯೇ ಬೆಳಕೂ ಚೆನ್ನಾಗಿ ಬರುತ್ತಿತ್ತು.

ಮನೆಯ ಎಡ ಪಕ್ಕದಲ್ಲೂ ಎರಡೂ ಮನೆಗಳದ್ದು ಸೇರಿ ಸುಮಾರು ೮ ಅಡಿಗಳಷ್ಟು ಜಾಗವಿತ್ತು. ಇಲ್ಲಿಯೂ ನಡುವೆ ಚೈನ್‌ಲಿಂಕಿನ ಬೇಲಿ ಇತ್ತು. ಇಲ್ಲಿ ಪ್ಯಾಶನ್ ಹಣ್ಣಿನ ಬಳ್ಳಿ, ಅಮೃತಬಳ್ಳಿ ಹಬ್ಬಿದ್ದವು. ಅವರಿಗೆ ಕುಡಿಯಲು ಹಣ್ಣಿನ ರಸ, ಔಷಧಿಗೆ ಅಮೃತಬಳ್ಳಿ ಸಮೃದ್ಧವಾಗಿ ಸಿಗುತ್ತಿತ್ತು. ಉಳಿದ ಕಡೆ ತರಕಾರಿ ಗಿಡಗಳು, ಅಲಂಕಾರಕ್ಕೆ, ಪೂಜೆಗೆ ಹೂವಿನ ಗಿಡಗಳು ಸಮೃದ್ಧವಾಗಿ ಬೆಳೆದಿದ್ದವು. ಮೂರೂ ಮನೆಗಳಲ್ಲಿ ಬೆಳೆದ ಹೂವು, ಹಣ್ಣು, ತರಕಾರಿಗಳನ್ನು ಎಲ್ಲಾ ಮನೆಯವರೂ ಹಂಚಿಕೊಳ್ಳುತ್ತಿದ್ದರು.

ಮನೆಯ ಮುಂದೆ ಇದ್ದ ಜಾಗದಲ್ಲಿ ಸದ್ಯಕ್ಕೆ ಗಿಡಗಳು, ಲಾನನ್ನು ಹಾಕಿದ್ದರೂ ಮುಂದೇನಾದರೂ ಕಾರನ್ನು ತೆಗೆದುಕೊಂಡರೆ ಅಗತ್ಯಬೀಳಬಹುದೆಂದು ಈಗಲೇ ಲೆಕ್ಕಾಚಾರ ಹಾಕಿ ಮನೆಯನ್ನು ವಿನ್ಯಾಸ ಮಾಡಿದ್ದರು. ಇದರಿಂದ ಸದ್ಯಕ್ಕೆ ಅವರ ಮನೆಗಳ ಮುಂದೆ ಸುಂದರವಾದ ಲಾನ್, ಹೂವಿನ ಗಿಡಗಳು ರಾರಾಜಿಸುತ್ತಿದ್ದವು. ಮನೆಯ ಕಿಟಕಿಯಿಂದ ಈ ಸುಂದರ ದೃಶ್ಯ ನಯನ ಮನೋಹರವಾಗಿತ್ತು. ಛಳಿಗಾಲದಲ್ಲಿ ಬಿಸಿಲು ಕಾಯಿಸಲು ಅಲ್ಲಿ ಬೆಂಚೊಂದನ್ನು ಹಾಕಿದ್ದರು.

ಮನೆಯ ಹಿಂದಿದ್ದ ಜಾಗವು ಸುಮಾರಾಗಿ ಬಟ್ಟೆ ಹರವಲು, ಅಂತೆಯೇ ಇತರ ಮನೆಯ ಕೆಲಸಗಳಿಗೆ ಮೀಸಲಾಗಿತ್ತು. ಅಲ್ಲಿ ಮೆಶ್ ಹಾಕಿದ್ದುದರಿಂದ ಹಿಂದುಗಡೆ ಇರುವ ರೂಮುಗಳ ಕಿಟಕಿಗಳಿಗೆ ಗಾಳಿ ಬೆಳಕಿನ ಕೊರತೆ ಇರಲಿಲ್ಲ. ಬಟ್ಟೆಗಳನ್ನು ನಿರ್ಭಯವಾಗಿ ಒಣಗಿಸಲು ಸಾಕಷ್ಟು ಜಾಗ ಇತ್ತು. ಇರುವ ಸಣ್ಣ ಜಾಗದಲ್ಲೇ ದಿನನಿತ್ಯಕ್ಕೆ ಬೇಕಾಗುವ ಕರಿಬೇವು, ವೀಳ್ಯದೆಲೆ, ಪುದಿನಾ, ಹೊನಗೊನೆ ಸೊಪ್ಪು, ದೊಡ್ಡಪತ್ರೆ ಮೊದಲಾದ ಗಿಡಗಳನ್ನು ಹಾಕಿದ್ದರು. ಸಿಮೆಂಟಿನ ನೆಲದ ನಡುವೆ ಈ ಗಿಡಗಳು ಸೊಂಪಾಗಿ ಬೆಳೆದಿದ್ದವು. ನೆಲದ ಮೇಲೆ ಬಿದ್ದ ಎಲ್ಲಾ ನೀರು ಆ ಗಿಡಗಳಿಗೇ ಹೋಗುತ್ತಿತ್ತು.

ಹೀಗೆ ಸಿರಿಯ ಮನೆಯ ಸುತ್ತಲೂ ವಾಸ್ತುಶಿಲ್ಪಿ ವಿನ್ಯಾಸ ಮಾಡಿದ ಮನೆಗಳಿದ್ದವು. ಆ ಮನೆಗಳಲ್ಲೂ ನಿಗದಿಯಾದ ಸೆಟ್‌ಬ್ಯಾಕ್‌ಗಳನ್ನು ಮನೆಯ ಸುತ್ತಲೂ ಬಿಟ್ಟಿದ್ದುದರಿಂದ ಸಿರಿಯ ಮನೆಗೆ ಎಲ್ಲ ರೀತಿಯಿಂದಲೂ ಅನುಕೂಲವಾಗಿತ್ತು. ಗಾಳಿ ಬೆಳಕಂತೂ ಸಮೃದ್ಧವಾಗಿದ್ದವು. ಮನೆಯ ಹೊರಗೂ ಗಿಡಮರಗಳಿದ್ದುದು ಒಂದು ವರವಾಗಿತ್ತು.

ಚಿಕ್ಕ ನಿವೇಶನವಾದರೂ ಇಷ್ಟೆಲ್ಲಾ ಅನುಕೂಲಗಳಿದ್ದುದು ಅದೃಷ್ಟವಲ್ಲದೆ ಇನ್ನೇನು? ಇದರ ತಾತ್ಪರ್ಯವೆಂದರೆ ಎಲ್ಲರೂ ನಿಗದಿಪಡಿಸಿದಷ್ಟು ಸೆಟ್‌ಬ್ಯಾಕನ್ನು ಮನೆಯ ಸುತ್ತಲೂ ಬಿಟ್ಟರೆ ಮನೆಯವರಿಗೂ, ಸುತ್ತಲಿನ ಮನೆಗಳವರಿಗೂ ಅನುಕೂಲ ಅಲ್ಲವೇ? ಆಗ ನೆರೆಯವರು ಖಂಡಿತಾ ಹೊರೆಯಾಗದೆ ಸದಾ ಕಾಲಕ್ಕೂ ಮಿತ್ರರಾಗಿರುತ್ತಾರೆ. ಕೊಟ್ಟುಕೊಳ್ಳುವ ಪಾಲಿಸಿ ಇದೇ ಅಲ್ಲವೇ? ಎಲ್ಲರೂ ಇದೇ ಪಾಲಿಸಿಯನ್ನು ಪಾಲಿಸಿದರೆ ಸುಖ ನಿಶ್ಚಿತ. ಆದರೆ...?!!

**ಪ್ರೊ॥ ಜಗದೀಶ್ ಚಂದ್ರ ಬಿ. ಎಸ್.**
ಲ್ಯಾಂಡ್‌ಸ್ಕೇಪ್ ಆರ್ಕಿಟೆಕ್ಟ್,
ನಂ. ೪೪೩, ೧ನೇ ಮಹಡಿ
೩೨ನೇ ಕ್ರಾಸ್
೫ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೪೧



# ವಾಸ್ತುದೇವತೆ ನಿದ್ದೆಗಣ್ಣಲ್ಲಿರುತ್ತಾ ?

ವಸುಮತಿ ಉಡುಪ



"ಮನೇಲಿ ಯಾವಾಗ್ಲೂ ಕೆಟ್ಟಮಾತು ಆಡ್ಬಾರ್ದು. ವಾಸ್ತುದೇವತೆ ಅಸ್ತು, ಅಸ್ತು ಅಂತಿರುತ್ತೆ. ಆಡಿದ್ದು ನಿಜವಾಗಿಬಿಡುತ್ತೆ" ಅಂತ ನೀನು ಯಾವಾಗ್ಲೋ ಒಂದ್ಸಲ ಹೇಳಿದ ಮಾತು ನಂಗಿನ್ನೂ ನೆನಪುಂಟು ಅಮ್ಮಾ. ಆ ಮಾತು ಇವತ್ತ್ಯಾಕೋ ಪದೇಪದೇ ನೆನಪಿಗೆ ಬರ್‍ತಿದೆ. ವಿಚಿತ್ರ ನೋಡು, ನೆನಪಿಟ್ಟುಕೋಬೇಕಾದ ಎಷ್ಟೋ ವಿಷಯ ಮರೆತುಹೋಗಿರುತ್ತೆ. ಬೇಡದ ಏನೇನೋ ಜುಜುಬಿ ಸಂಗತಿ ನೆನಪಲ್ಲಿ ಉಳಿದುಕೊಂಡಿರುತ್ತೆ. ಫಕ್ಕನೆ ಆ ಮಾತಿನ ನೆನವರಿಕೆ ಆಗಿದ್ದಕ್ಕೆ ದೊಡ್ಡ ಕಾರಣ ಏನಿಲ್ಲ. ಮಾಮೂಲಿನ ಹಾಗೆ ನಮ್ಮ ಯಜಮಾನರು ಒಂಭತ್ತು ಘಂಟೆಗೆ ಹಾಸಿಗೆ ಬಿಟ್ಟು ಎದ್ದರು. ಬಚ್ಚಲುಮನೆಯಲ್ಲಿ ಯಥಾ ಸಾವಕಾಶ ಒಂದರ್ಧ ಘಂಟೆ ಮುಖಮಾರ್ಜನದಲ್ಲಿ ಕಳೆದುಹೋಗುತ್ತೆ. ಆಮೇಲೆ ಕಾಫಿಗೀಫಿ, ತಿಂಡಿಗಿಂಡಿ, ಪೇಪರುಗೀಪರು, ಸ್ನಾನಗೀನ. ಓ ! ಮಧ್ಯಾಹ್ನದ ಊಟದ ಹೊತ್ತು ಬಂದೇಬಿಡುತ್ತೆ. ಊಟದ ನಂತರ ಚುಟುಕು ನಿದ್ದೆ. ಸಂಜೆಹೊತ್ತಿಗೆ ಬೆನ್ನ ಹಿಂದೆ ಕೈ ಕಟ್ಟಿಕೊಂಡು ವಾಕಿಂಗಿಗೆ ಹೋಗುವ ಒಂದು ಕಾರ್ಯಕ್ರಮ ಉಂಟು. ಮನೆಗೆ ತಿರುಗಿ ಬರುವಾಗ ದೇವರ ಮುಂದೆ ದೀಪ ಹಚ್ಚಿಯಾಗಿರುತ್ತದೆ. ಟಿ.ವಿ. ಮುಂದೆ ಕೂತರೆ ಹೊತ್ತು ಸರಿಯುವುದು ಅದಕ್ಕಷ್ಟೇ ಗೊತ್ತು. ಕಾಲ ಕಳೆಯುವುದು ಅಂದರೆ ಎಷ್ಟು ಸಲೀಸು, ಸುಲಭ ಅಲ್ವಾ ? ಹೊತ್ತೇ ಹೋಗಲ್ಲ ಅಂತ ಯಾರಾದರೂ ಹೇಳಿದರೆ ನನಗೆ ಇವರನ್ನು ತೋರಿಸಬೇಕು ಅನ್ನಿಸಿಬಿಡುತ್ತೆ. ಗ್ರಾಸ್ತನ ಬಾಯಿಂದ ಯಾವತ್ತೂ 'ಬೇಜಾರು' ಅನ್ನುವ ಪದ ನಾನು ಕೇಳಿದ್ದಿಲ್ಲ. ಸುಳ್ಳಲ್ಲ ಅಮ್ಮಾ, ದೇವರಾಣೆ. ಅವರು ವಾಕಿಂಗ್ ಮಾಡುವ ಚಂದ ನೋಡ್ಬೇಕು ನೀನು. ಹೇಳಿದ್ನಲ್ಲಾ, ಬೆನ್ನ ಹಿಂದೆ ಕೈಕಟ್ಟಿ, ಕೈ ಬೀಸಿಕೊಂಡು ಹೋಗೋಕೂ ಸೋಮಾರಿತನ. ಕೈಗಳಿರೋದೇ ಕಟ್ಟಿಕೊಂಡಿರೋಕೆ ಅನ್ನುವಂಥವರಿಂದ ಬೇರೇನು ವರ್ತನೆ ನಿರೀಕ್ಷಿಸಲು ಸಾಧ್ಯ ? ನಡೆಯುವ ರೀತಿ ಕೂಡ ಅಷ್ಟೇ, ಹಗೂರಕ್ಕೆ ಹೆಜ್ಜೆ ಮೇಲೆ ಹೆಜ್ಜೆ ಹಾಕುತ್ತಾ, ಅವರ ಕಾಲಬುಡಕ್ಕೆ ಒಂದು ಇರುವೆ ಸಿಕ್ಕಿಹಾಕಿಕೊಂಡ್ರೂ ಅದು ಸಾಯಲಿಕ್ಕಿಲ್ಲ, ಅಂತಾ ನಡಿಗೆ. 'ಜೋಬದ್ರತನ' ಅಂತ ನೀನಂತಿದ್ದ ಒಂದು ಪದ ನೆನಪುಂಟಾ ? ಇವರಿಗೆ ಫಸ್ಟ್‌ಕ್ಲಾಸಾಗಿ ಅದು ಹೊಂದುತ್ತೆ ಕಣೇ. ಜೀವ ಭಾರವಾದವರ ಥರ ತೂಕಡಿಸಿಕೊಂಡು ಕಾಲ ಹಾಕ್ತಾರಲ್ಲ, ಮಾಡಬೇಕಾದ ಕೆಲಸವನ್ನು ಎಷ್ಟು ಸಾಧ್ಯವೋ ಅಷ್ಟು ಅನಾಸಕ್ತಿಯಿಂದ ಮಾಡ್ತಾರಲ್ಲ, ಅಂತಾ ಸೋಂಬೇರಿಗಳಿಗೆ ಸೃಷ್ಟಿಯಾದದ್ದು ಆ ಪದ, ಅಲ್ವಾ ಅಮ್ಮ ? ಬೇರೆ ಇನ್ನೇನೂ ಬೇಡಪ್ಪಾ, ಬೆಳಿಗ್ಗೆ ಎದ್ದ ಕೂಡಲೆ ಮಲಗಿದ ಹಾಸಿಗೆ ಕೊಡಕಿ ಹಾಸಿಡಬಾರದಾ ? ಈ ಪುಣ್ಯಾತ್ಮ ಎಷ್ಟು ಹೊತ್ತಿಗೆ ಏಳುತ್ತಾರೆ ಎಂದು ಕಾದು ಕೂತು ನಾನು ಆ ಕೆಲಸ ಮಾಡಬೇಕಾ ? ಗೊಬ್ಬರದ ಗುಂಡಿಯ ಹಾಗೆ ಚೆಲ್ಲಾಪಿಲ್ಲಿಯಾಗಿರುತ್ತೆ ಹಾಸಿಗೆ. ಮೈ ಉರಿದುಹೋಗುತ್ತೆ ಗೊತ್ತಾ ? ಇಷ್ಟೂ ಮೀರಿ ದಬಾವಣೆ ಹಾಕಿದರೆ ಹಾಸಿಟ್ಟಂತೆಯೇ ಕೈಯಿಂದ ಬೆಡ್‌ಶೀಟಿನ ತುದಿ ಎಳೆದೆಳೆದು ಸುಕ್ಕು ಸರಿಮಾಡಿದ ಹಾಗೆ ಮಾಡಿ ಕಣ್ಕಟ್ಟು ಮಾಡಿಟ್ಟರೆ ಸೈ. ನಂಗೆ ಇಂಥದ್ದೆಲ್ಲಾ ಸರಿಬರಲ್ಲ ಅಂತ ನಿಂಗೆ ಗೊತ್ತಿದೆಯಲ್ವಾ ಅಮ್ಮ ? 'ತಾಯಿಯಂತೆ ಮಗಳು' ಅಂತ ಗಾದೆ ಹೇಳುವ ನೆಪದಲ್ಲಿ ನಿನ್ನ ಬೆನ್ನು ನೀನೇ ತಟ್ಟಿಕೋತಿದ್ದಿ, ಅಲ್ವಾ ? ನೀನು ಸ್ಕೂಲಿನಿಂದ ಬರುವ ಹೊತ್ತಿಗೆ ಅಡಿಗೆಮನೆ ಥಳಥಳ, ಫಳಫಳ. ಬೆಳಗಿನ ಅವಸರದಲ್ಲಿ ನೀನು ಇದ್ದಿದ್ದು ಇದ್ದ ಹಾಗೆ ಬಿಟ್ಟು ಓಡಿರುತ್ತಿದ್ದಿ. ನೀನು ಬರುವ ಮೊದಲು ಮನೆಗೆ ಬಂದಿರುತ್ತಿದ್ದ ನಾನು ಎಲ್ಲವನ್ನೂ ಚೊಕ್ಕ ಮಾಡಿಟ್ಟು ನಿನ್ನ ಕೆಲಸ ಹಗುರ ಮಾಡುತ್ತಿದ್ದೆ. ಬಳಲಿ ಬಂದ ನಿನ್ನ ಕಣ್ಣುಗಳಲ್ಲಿ ಮಿಂಚುತ್ತಿದ್ದ ಒಂದು ಸಂತೃಪ್ತಿಗಾಗಿ, 'ಜಾಣೆ' ಎನ್ನುವ ಒಂದು ಮೆಚ್ಚುಗೆಯ ನುಡಿಗಾಗಿ, ನಿನಗೆ ಸಹಾಯ ಮಾಡುವುದು ಬಾಲ್ಯದಾರಭ್ಯ ನನ್ನ ದಿನಚರಿಯಲ್ಲಿ ಸೇರಿಹೋಗಿತ್ತು. ನನ್ನಮ್ಮ ಎಲ್ಲರ ಅಮ್ಮನ ಹಾಗಲ್ಲ, ನನ್ನಪ್ಪ ಎಲ್ಲರ ಅಪ್ಪನ ಹಾಗಲ್ಲ, ಎನ್ನುವ ಸತ್ಯ ಎಳೆವಯಸ್ಸಲ್ಲೇ ನನಗೆ ಮನವರಿಕೆಯಾಗಿಬಿಟ್ಟಿತ್ತು. ಈ ಮನವರಿಕೆ ನನ್ನನ್ನು ಅಕಾಲಪಕ್ವತೆಗೆ ದೂಡಿ, ಎಲ್ಲಾ ಮಕ್ಕಳಂತೆ ನಾನು ಮೈಮರೆತು ಕುಣಿಯದೆ, ಜಿಗಿದಾಡದೆ, ಆಡದೆ, ಹಾಡದೆ, ನಿನ್ನ ಹಿಂದೆಮುಂದೆ ಸುತ್ತಿಕೊಂಡು ಸಹಾಯ ಮಾಡುವುದೊಂದೇ ನನಗೆ ಸಂತೋಷ ಕೊಡುವಂತಾದ್ದು ಎನ್ನುವಂತಾಗಿ, ಬೇಡಬೇಡ, ಈ ಥರದ ಸ್ವಾನುಕಂಪದ ಮಾತುಗಳನ್ನಾಡಿದರೆ ನಿನಗೆ ಹಿಡಿಸುತ್ತಿರಲಿಲ್ಲ, ಅಲ್ಲವಾ ಅಮ್ಮ ? ನಮ್ಮ ಪಾಲಿಗೆ ಏನು ಬಂದಿದೆಯೋ ಅದನ್ನು ಎದೆಗೆಡದೆ ಎದುರಿಸಬೇಕು ಎನ್ನುವುದು ನೀನೇ ಕಲಿಸಿದ ಪಾಠ. ಮತ್ತು ಈ ಪಾಠ ಕಲಿಸುವಾಗ ಕೂಡ ನೀನು ಉದಾಹರಣೆಯಾಗಲು ತಯಾರಾಗುತ್ತಿದ್ದೆಯೇ ಹೊರತು ನಾನು ಉದಾಹರಣೆಯಾಗಬಹುದಾದ ಕಲ್ಪನೆ ಕೂಡ ನಿನ್ನನ್ನು ಆತಂಕಕ್ಕೆ ತಳ್ಳಿಬಿಡುತ್ತಿತ್ತು ಅನ್ನುವುದು ನನಗೆ ಗೊತ್ತುಂಟು. ಅಮ್ಮ ಅಂದರೆ ಹೀಗಿರದೆ ಮತ್ತೆ ಹೇಗಿರಲು ಸಾಧ್ಯ ? ಮತ್ತೊಂದೇನೋ ನೆನಪಾಗುತ್ತಿದೆ. ಅವತ್ತೊಂದು ದಿನ ಮುಸ್ಸಂಜೆಯ ಹೊತ್ತಿಗೆ ನಾನು, ನೀನು ತರಕಾರಿ ತರಲು ಹೋಗಿದ್ದೆವು. ಮನೆಯ ಹತ್ತಿರದ ತಿರುವಿನಲ್ಲಿ ವೇಗವಾಗಿ ತಿರುಗಿದ ಬೈಕ್ ಸವಾರನೊಬ್ಬ ನನಗೆ ಇನ್ನೇನು ಢಿಕ್ಕಿ ಹೊಡೆಯುವುದು ಕೂದಲೆಳೆಯ ಅಂತರದಿಂದ ತಪ್ಪಿಹೋಗಿ ಅವನನ್ನು ಅಡ್ಡಗಟ್ಟಿ ನೀನವನ ಮುಖದ ನೀರಿಳಿಸಿದ್ದಿ, ನೆನಪುಂಟಾ ? ನನ್ನಮ್ಮನ ಹತ್ತಿರ ಇಷ್ಟೆಲ್ಲಾ ಬೈಗುಳದ ಸ್ಟಾಕು ಉಂಟು ಅನ್ನುವುದು ನನಗೆ ಗೊತ್ತೇ ಇರಲಿಲ್ಲ ಅಮ್ಮಾ. 'ಸಾರೀ... ಸಾರೀ...' ಎಂದು ಅವನು ಉಗುಳು ನುಂಗುತ್ತಿದ್ದ. ನೀನು ಕಾಲಲ್ಲಿದ್ದುದನ್ನು ಕೈಗೆ ತೆಗೆದುಕೊಳ್ಳುವ ಮಟ್ಟ ತಲುಪಿದ್ದಿ. ಸುತ್ತಮುತ್ತ ಜನ ಒಗ್ಗೂಡುತ್ತಿದ್ದುದನ್ನು ನೋಡಿ ನನಗೆ ನಾಚಿಕೆ ಸಾವು. "ಬಾರೇ, ಸಾಕು ಬಾ..." ನಿನ್ನ ಕೈ ಹಿಡಿದು ಎಳೆಯುತ್ತಾ, ಎಷ್ಟು ವರ್ಷ ನನಗಾಗ ? ಎಂಟೋ, ಒಂಭತ್ತೋ ? ಮರೆತುಹೋಗಿದೆ ಬಿಡು. 'ಈದ ಹುಲಿ'ಯ ಉದಾಹರಣೆ ನಿನ್ನ ಆವೇಶಕ್ಕೆ ಸರಿಯಾದ್ದಲ್ಲ. ಪ್ರಾಣಿ, ಪಕ್ಷಿಗಳ ಕಾವಲು, ಪಾಲನೆ, ಸಂತತಿ ಸ್ವತಂತ್ರವಾಗಿ ಹೊಟ್ಟೆಹೊರೆದು ಕೊಳ್ಳುವವರೆಗೆ. ಆದರೆ ಮನುಷ್ಯಜಾತಿಯ ಅಮ್ಮನ ಕಾಳಜಿ ಅವಳ ಉಸಿರಿರುವವರೆಗೆ. ಕಣ್ಣುಗಳು ತುಂಬಿಕೊಳ್ಳುತ್ತಿವೆ ಅಮ್ಮಾ, ನಾನು ಕುಸಿದು ಹೋಗುತ್ತಿದ್ದೇನೆ ಅನಿಸುತ್ತಿದೆ. ನಾನು ಯಾವ ಪರಿಸ್ಥಿತಿಯಲ್ಲಿದ್ದೇನೆ ಎನ್ನುವ ಸ್ಪಷ್ಟ ಚಿತ್ರ ನಿನಗೆ ಗೊತ್ತಿಲ್ಲ. ಹೇಳುವ ಮನಸ್ಸು ನನಗಿಲ್ಲ.

ಯಾರ ಹತ್ತಿರವೂ ಹೇಳಿಕೊಳ್ಳಲಾಗದೆ ಒಡಲೊಳಗಿಟ್ಟುಕೊಂಡ ಸಂಕಟ ಯಾವ್ಯಾವ ಅನಾಹುತಕ್ಕೆ ಕಾರಣವಾಗುತ್ತದೆಯೋ ಎಂದು ಹೆದರಿಕೆಯಾಗುತ್ತೆ. ಈಗಾಗಲೇ ನನಗೆ ಬಿ.ಪಿ. ಶುರುವಾಗಿರಬಹುದಾ ? ಶುಗರ್ ? ಈ ಪೇಪರುಗಳಲ್ಲಿ ಆರೋಗ್ಯಕ್ಕೆ ಸಂಬಂಧಪಟ್ಟ ಅದೆಷ್ಟೆಷ್ಟು ಲೇಖನಗಳು ಬರುತ್ತಿರುತ್ತವೆ ಅಂದರೆ ಅವರು ಹೇಳುವ, ಅಲ್ಲಲ್ಲ ಬರೆಯುವ, ಎಷ್ಟೋ ಕಾಯಿಲೆಗಳ ಲಕ್ಷಣಗಳು ನಮ್ಮಲ್ಲೂ ಇವೆ ಅಂತ ಗುಮಾನಿ ಶುರುವಾಗಿಬಿಡುತ್ತೆ. 'ಅರೆಜ್ಞಾನ ಅಪಾಯಕಾರಿ' ಅಂತ ಮಾತೇ ಇದೆಯಲ್ಲ! ಈ ಥರದ ಲೇಖನಗಳನ್ನು ಓದಲೇಬಾರದು ಅಂದುಕೊಳ್ಳುತ್ತಾ ಓದುವುದು ನನ್ನ ಚಪಲ ಅಥವಾ ದೌರ್ಬಲ್ಯ.

ಗಾಡಿ ಹಳಿ ತಪ್ಪಿತು ಅಲ್ಲವಾ ಅಮ್ಮ ? ವಾಸ್ತುದೇವತೆಯ ನೆನಪು ಯಾಕಾಗಿದ್ದು ಅಂದರೆ ಅದೇ, ಬೆಳಿಗ್ಗೆ ಒಂಭತ್ತಕ್ಕೆ ನನ್ನ ಗಂಡ ಅನ್ನಿಸಿಕೊಂಡವರು ಹಾಸಿಗೆ ಬಿಟ್ಟೆದ್ದರು ಎಂದೆನಲ್ಲ, ಇವರ ಹತ್ತಿರ ಯಾಕೆ ವೃಥಾ ಕಂಠಶೋಷಣೆ ಎಂದು ಮೇಲ್ಹಾಸನ್ನು ನಾನೇ ಒದರಿ ಹಾಸಿ, ರಗ್ಗನ್ನು ಕಾಲಿನ ಬಳಿ ಅಚ್ಚುಕಟ್ಟಾಗಿ ಮಡಿಚಿಟ್ಟು, ಆಗಲಿ, ಮಡಿಚಿದ್ದೇ ಆಗಲಿ, ಚೂರೂ ಓರೆಕೋರೆ ಆಗದಂತೆ ಟಾಕೋಟೀಕ್ ಆಗಿರಬೇಕೆಂಬ ನನ್ನ ಕಾಯಿಲೆ ನಿನಗೆ ಗೊತ್ತಿದೆಯಲ್ಲ? ಇದು ಮಾತ್ರಾ ಅಂತಲ್ಲ, ಎಲ್ಲಾ ಕೆಲಸಗಳಲ್ಲೂ ಅಚ್ಚುಕಟ್ಟುತನ ಬಯಸುವ ಕಾಯಿಲೆಯವರು ಯಾವತ್ತೂ ಸುಖವಾಗಿರಲಿಲ್ಲ ಅಮ್ಮಾ. ಅವರ ಮನಸ್ಸು ಸದಾ ಪ್ರಕ್ಷುಬ್ಧವಾಗಿರುವುದನ್ನು ರೂಢಿ ಮಾಡಿಕೊಂಡುಬಿಟ್ಟಿರುತ್ತದೆ ಎನ್ನುವುದು ನನ್ನ ಅನುಭವ. ನಮ್ಮಂಥವರಿಗೆ ಹುಳುಕು ಹುಡುಕುವುದು ಅಭ್ಯಾಸವಾಗಿಬಿಟ್ಟಿರುತ್ತದೆ ಅಂತೀಯಾ ? ದೈನಂದಿನ ಸಣ್ಣಪುಟ್ಟ ವಿಷಯಗಳಲ್ಲಿ ಖಡಕ್ಕಾಗಿರುವವರ ಬದುಕಿನ ಬಂಡಿಯೇ ಹಳಿ ತಪ್ಪಿದರೆ ಅವಸ್ಥೆ ಏನಾಗಬೇಡ ? ತಡಿ, ಎಲ್ಲಾ ಹೇಳುತ್ತೇನೆ, ಅವತ್ತು ಹಾಸಿಗೆ ಸರಿಮಾಡುವಾಗ ನೀನು ಹೇಳಿದ್ದ ವಾಸ್ತುದೇವತೆಯ ವಿಷಯ ಅದ್ಯಾಕೋ ಏನೋ ಇದ್ದಕ್ಕಿದ್ದಂತೆ ನೆನಪಿಗೆ ಬಂತು. ಆ ವಾಸ್ತುದೇವತೆ ನಿಜಕ್ಕೂ ಇರುವುದಾದರೆ ಅದಕ್ಕೆ ಸದಾ ನಿದ್ದೆಗಣ್ಣು, ಮಂಪರು. ಏನೋ ಹೇಳಿದ್ದು ಇನ್ನೇನೋ ಆಗಿ ಕೇಳಿಸಿ, ಕೇಳಿಸಿಕೊಂಡಿದ್ದಕ್ಕೆ 'ಅಸ್ತು' ಅಂದುಬಿಡುತ್ತದೆಯೇನೋ. ಒಂದರ್ಥದಲ್ಲಿ ಚಂಡಿಯ ಸ್ವಭಾವ. ''ನಿನ್ನ ಬದುಕು ನನ್ನ ಹಾಗಾಗ್ಬಾರ್ದು ಕಣೇ. ನೀನು ಸುಖವಾಗಿರ್ಬೇಕು ಕಣೇ...'' ಅಂತಾ ಸದಾ ಹಲವರಿಯುತ್ತಿದ್ದೆಯಲ್ಲ ಅಮ್ಮ ? ಪ್ರತಿಯೊಂದೂ ಉಲ್ಟಾಪಲ್ಟಾ ಆಗಿದೆ ಅಂದರೆ ನನಗೇ ಆಶ್ಚರ್ಯವಾಗುತ್ತೆ. ಕೆಲವು ಸಲ 'ಪೂರ್ವಜನ್ಮ ಅಂತ ಒಂದಿರುವುದು ನಿಜವಿರಬೇಕು. ಆಗ ಮಾಡಿದ ಕರ್ಮ ಈ ಜನ್ಮದಲ್ಲಿ ಕಾಡುತ್ತೆ' ಎಂದು ಅನಿಸಿಬಿಡುತ್ತೆ. ಏನೇ ಆಗಲಿ, ನಿನ್ನಂತೆ ಹೊರಗೆ ದುಡಿಯುವುದಕ್ಕೆ ಹೋಗುವ ಗತಿ ನನಗೆ ಬರಬಾರದು ಎಂದು ನೀನು ಹೇಳಿ ಹೇಳಿ ಅದು ನನ್ನ ಮನಸ್ಸಲ್ಲಿ ನೆಟ್ಟುಹೋಗಿತ್ತು. ಸ್ವಸಂತೋಷದಿಂದ ಹೋಗುವುದಾದರೆ ಆ ವಿಷಯ ಪ್ರತ್ಯೇಕ. ಆದರೆ ಸಂಪಾದಿಸಿ ಸಂಸಾರ ತೂಗಿಸಬೇಕಾದ ಗಂಡು ಮನೆಯಲ್ಲಿ ಕುಳಿತು, ಗೃಹಿಣಿಯಾದವಳು ದುಡಿಯದೆ ಅನ್ಯಮಾರ್ಗವಿಲ್ಲ ಎನ್ನುವ ಪರಿಸ್ಥಿತಿ ಯಾರಿಗೂ ಬೇಡ ಅಂತಿದ್ದೆಯಲ್ಲ ಅಮ್ಮ, ಅದು ಈಗ ಹಾಗೇ ಆಗಿದೆ. ಮದುವೆ ನಿಶ್ಚಯವಾಗುವ ಹೊತ್ತಿಗೆ ನೀನು ಖಡಾಖಂಡಿತವಾಗಿ ಹೇಳಿದ್ದೆ, ''ನನ್ನ ಮಗಳು ಕೆಲಸಕ್ಕೆ ಹೋಗುವವಳಲ್ಲ. ಆ ಥರದ್ದೇನಾದರೂ ಯೋಚನೆ ಇದ್ದರೆ ವಿಚಾರಮಾಡಿ...'' ಅಂತ. ನೆನಪಿದೆಯಲ್ವಾ ?

''ಛೆ ಛೆ, ನಿಮ್ಮ ಹುಡುಗಿ ದುಡಿದು ತಂದು ನಾವು ಬದುಕಬೇಕಾ ? ದೇವರು ಕೈತುಂಬಾ ಕೊಟ್ಟಿದಾನೆ'' ಎಂದು ಮಾವಯ್ಯ ಉತ್ತರ ಕೊಟ್ಟಿದ್ದರು. ಸಮಾಧಾನ ಆಗಿದ್ದು ನಿನಗೆ ಮಾತ್ರವಲ್ಲ, ನನಗೂ. ಸದ್ಗೃಹಿಣಿಯಾಗಿ ತಣ್ಣಗೆ ಮನೆಯಲ್ಲಿದ್ದುಕೊಂಡು ನಿಶ್ಚಿಂತೆಯಾಗಿರುತ್ತೇನೆ. ನಿನ್ನ ಹಾಗೆ ದಿನಬೆಳಗಾದರೆ ಗಡಿಬಿಡಿ, ಉದ್ವೇಗ, ಆತಂಕ ಯಾವುದೂ ಇಲ್ಲ. ಒಂದೋ, ಎರಡೋ ಮಕ್ಕಳನ್ನು ಹೆತ್ತು...

ವಿಧಿ ನಗುತ್ತಿತ್ತೇನೋ. ಮದುವೆಯಾಗಿ ಮೂರು ತಿಂಗಳು ಕಳೆದಿರಲಿಲ್ಲ, ಕೈ ತುಂಬಾ ತಲ್ಲೀನತೆಯಿಂದ ಬರೆಸಿಕೊಂಡ ಮದರಂಗಿ ಅಳಿಸಿರಲಿಲ್ಲ, ಇವರು ಕೆಲಸ ಬಿಟ್ಟು ಖಾಲಿ ಕೂತರು. ಡಿಪ್ಲೋಮ ಇಂಜಿನಿಯರ್ ಆಗಿ ಖಾಸಗಿ ಕಾರ್ಖಾನೆಯಲ್ಲಿ ದುಡಿಯುತ್ತಿದ್ದವರು. ಸಂಬಳ ಇಪ್ಪತ್ತು ಅಂದಿದ್ದರಾ ? ಇಪ್ಪತ್ತೈದು ? ಮಾವ ದೊಡ್ಡ ಉದ್ಯೋಗದಲ್ಲಿದ್ದು ನಿವೃತ್ತರಾದವರು. ಬೆಂಗಳೂರಲ್ಲಿ ಸ್ವಂತ ಮನೆ. ಸೈಟೂ ಇದೆಯಂತೆ. ಎಂ.ಎಸ್ಸಿ. ಓದುತ್ತಿರುವ ಒಬ್ಬ ತಮ್ಮ. ನಾಳೆ ಅವನ ಬದುಕು ಅವನು ಕಟ್ಟಿಕೊಳ್ಳುತ್ತಾನೆ. ಒಂದೊಮ್ಮೆ ನಿನಗಾದ ಹಾಗೆ ತಾಳಿ ಕಟ್ಟಿದವನು ಮನೆಯಲ್ಲಿ ಕೂತರೂ ಹೊರಗೆ ದುಡಿಯಬೇಕಾದ ಆವಶ್ಯಕತೆ ನನಗೆ ಬರುವುದಿಲ್ಲ. ಬೆಂಗಳೂರಲ್ಲಿ ಮನೆ, ಸೈಟು, ಅಂದರೆ ಸಣ್ಣ ಮಾತಾ ? ಕೋಟ್ಯಂತರದ ಆಸ್ತಿ. ನಾಳೆ ಆಸ್ತಿ ಎರಡು ಪಾಲಾದರೂ ಕೋಟಿಗೆ ಮೋಸ ಇಲ್ಲ. ಎಲ್ಲಾ ಸರಿ ಅಮ್ಮಾ, ಮನೆಯೂ ಉಂಟು, ಆಸ್ತಿಯೂ ಉಂಟು. ಎಲ್ಲಾ ಮಾವನ ಸಂಪಾದನೆ. ನಾಳೆ ಯಾರಿಗೆ ಬೇಕಾದರೂ ಬರೆಯುವ ಹಕ್ಕು ಅವರಿಗುಂಟು. ಹೆದರಬೇಡ. ಹಾಗೆಲ್ಲಾ ಆಗುವುದಿಲ್ಲ. ಆಗಲಿಕ್ಕಿಲ್ಲ. ಆದರೆ ಗಂಡ ಆಗಿರುವವನು ಹೆಂಡತಿಯ ಹೆಮ್ಮೆಗೆ ಕೋಡು ಮೂಡಿಸುವಂತೆ ಒಂದೊಳ್ಳೆಯ ಕೆಲಸದಲ್ಲಿದ್ದು ಸಂಪಾದನೆ ಮಾಡಬೇಕು ಎಂದು ಯಾರಿಗೆ ಆಸೆ ಇರುವುದಿಲ್ಲ? ಗಂಡನ ಕೆಲಸದಲ್ಲಿ ತಮ್ಮ ಪ್ರತಿಷ್ಠೆ ಗುರ್ತಿಸಿಕೊಳ್ಳುವವರು ಎಷ್ಟು ಮಂದಿ ಇಲ್ಲ? ಗಂಡನಿಗಿಂತ ಹೆಚ್ಚಿನ ಠೇಂಕಾರ ತೋರಿಸುವ ಉದಾಹರಣೆ ಇಲ್ಲ?

''ಹಳೇ ಚಾಳಿ ಮತ್ತೆ ಶುರುಮಾಡಿದ್ಯಾ ?'' ಅತ್ತೆ ಕೇಳಿದರು.

''ನಿಂಗೊತ್ತಿಲ್ಲ, ಕತ್ತೆಚಾಕರಿ ಮಾಡಿಸ್ತಾರೆ'' ಅಂದರು ನನ್ನ ಕೈ ಹಿಡಿದವರು.

''ದುಡೀಬೇಕಪ್ಪಾ, ಪುಗಸಟ್ಟೆ ಯಾರಾದ್ರೂ ಸಂಬಳ ಕೊಡ್ತಾರಾ ?'' ಮಾವನ ಪ್ರಶ್ನೆ.

''ದುಡಿಯೋಕೆ ಒಂದು ಮಿತಿ ಇರುತ್ತೆ. ಅವರು ಕೊಡೋ ದುಡ್ಡಿಗೆ...'' ಅರ್ಧೋಕ್ತಿಯಲ್ಲಿ ಮಾತು ನಿಲ್ಲಿಸಿದಾಗ ಏನೇನೋ ಅನಿಸಿಬಿಟ್ಟಿತು ಬಿಡಮ್ಮಾ. ನಿಧನಿಧಾನಕ್ಕೆ ನನ್ನವರು ಎಂಥಾ ಮನುಷ್ಯ ಎನ್ನುವ ಗುಟ್ಟು ಒಡೆಯಿತು. ಯಾವ ಕೆಲಸಕ್ಕೂ ಕಚ್ಚಿಕೊಂಡಿರುವ ಜಾಯಮಾನ ಇಲ್ಲ. ಎಲ್ಲದರಲ್ಲೂ ಏನೋ ಊನ. ಏನೋ ರಗಳೆ. ನಾಲ್ಕಾರು ತಿಂಗಳು ಒಂದು ಕಡೆ ಕೆಲಸ ಮಾಡಿದರು ಅಂದರೆ ಕಡಿದು ಕಟ್ಟೆಹಾಕಿದ ಹಾಗೆ. 'ಉಸ್ಸಪ್ಪಾ...' ಎನಿಸುವಷ್ಟು ಬಳಲಿಕೆ. ಯಾವುದೋ ನೆಪ ಹೇಳಿ ಕೆಲಸ ಕೈಬಿಟ್ಟು, ಸುದೀರ್ಘ ವಿಶ್ರಾಂತಿ ಪಡೆದು, ಮನೆಯವರು ಪರಿಪರಿ ಬುದ್ಧಿ ಹೇಳಿದ ಮೇಲೆ ಮತ್ತೊಂದರ ತಲಾಷು. ಅಂಟಿಯೂ ಅಂಟದಿರುವ ನಿರ್ಲಿಪ್ತಿ. ಹೊತ್ತಿಗೆ ಸರಿಯಾಗಿ ಹೊಟ್ಟೆಗೆ ಕೂಳು ಬೀಳುತ್ತಿದ್ದರೆ ಹೀಗೇನೇನಮ್ಮಾ ? ಮೈ ಬಗ್ಗಿಸಿ ಕೆಲಸ ಮಾಡಲು ಸೋಂಬೇರಿತನ ಬಂದುಬಿಡುತ್ತದೆಯಾ ? ''ಹೋಗು, ಬೇರೆ ಮನೆ ನೋಡ್ಕೊಂಡು ನಿನ್ನ ಪಾಡು ನೋಡ್ಕೋ...'' ಎಂದು ಅತ್ತೆ, ಮಾವ ನಿಷ್ಠುರವಾಗಿ ಹೇಳಬೇಕೆಂದು ಎಷ್ಟೋ ಸಲ ಅನಿಸಿದೆ.

''ಚೆನ್ನಾಗಿರಲ್ಲ ಕಣ್ರೀ. ಮುದುಕರ ಹಾಗೆ ಮನೇಲಿ ಕೂತ್ಕೊಳ್ಳೋ ವಯಸ್ಸಾ ಇದು ?'' ಎಂದು ಹೇಳಿ ನೋಡಿದ್ದೇನೆ.

''ನೀನೇನು ದುಡಿದು ಹಾಕ್ಬೇಕಾ ?'' ಎನ್ನುವ ಉತ್ತರ ಕೇಳಿದ್ದೇನೆ.

''ಹೇಳಿ ಅತ್ತೆ, ದಬಾಯಿಸಿ ನಾಲ್ಕು ಮಾತು ಹೇಳಿ. ನಾವು ಕೆಲಸಕ್ಕೆ ಹೊಂದ್ಕೋಬೇಕೇ ವಿನಾ ಕೆಲಸ ನಮಗೆ ಹೊಂದಿಕೆಯಾಗ್ಬೇಕೂಂದ್ರೆ ಮುಕ್ಕಾಲುವಾಸಿ ಜನ ಕೆಲಸ ಬಿಟ್ಟು ಮನೇಲಿ ಕೂತ್ಕೋತಿದ್ರು'' ಅಂತ ಅತ್ತೆಯ ಹತ್ತಿರ ಹೇಳಿದ್ದಕ್ಕೆ ಏನೆಂದರು ಗೊತ್ತಾ ?

''ಅಯ್ಯೋ, ಅವನು ಹಾಗೇ ಕಣೇ. ಬುದ್ಧಿ ಹೇಳಿ ಗಂಟಲು ಒಣಗಿಸಿಕೊಂಡು ನಮಗೂ ಸಾಕಾಗಿದೆ. ಅವನ ಹಣೇಬರ...''

ಈ ಇವರ ಜಾತಕದಲ್ಲಿ ಕರ್ಮಸ್ಥಾನದಲ್ಲಿರುವ ಯಾವುದೋ ಮಂದ ಗ್ರಹದ ಪರಿಣಾಮ ಇದೆ ಎಂದು ಅತ್ತೆ ಎಷ್ಟು ನೈಸಾಗಿ ಹೇಳಿಬಿಟ್ಟರು ಅಂದರೆ ಅವರು ನಂಬಿದ್ದನ್ನು ನಾನೂ ನಂಬಬೇಕೆಂದು ಅತ್ತೆ ಅಂದುಕೊಂಡ ಹಾಗಿದೆ. ನಾಲ್ಕು ತಪರಾಕಿ ಬಿಗಿದು, ಉಪವಾಸ ಕೆಡವಿ, ಬುದ್ಧಿ ಕಲಿಸಿದ್ದರೆ ಗ್ರಹ ಚುರುಕಾಗುತ್ತಿತ್ತೇನೋ. ಹಾಗೆ ಬುದ್ಧಿ ಕಲಿಸುವ ವಯಸ್ಸು ಅಲ್ಲ ಅನ್ನು. ಸಾವಿರಾರು ರೂಪಾಯಿ ಖರ್ಚು ಮಾಡಿ ಆ ಗ್ರಹಕ್ಕೆ ಶಾಂತಿ ಮಾಡಿಸಿದ್ದಾರಂತೆ. ನಗಲೋ, ಅಳಲೋ, ಹೇಳಮ್ಮಾ. ಕೈಖರ್ಚಿಗೆ ದುಡ್ಡು ಬೇಕಾದಾಗ ಈ ಮನುಷ್ಯ ಅಮ್ಮನ ಹತ್ತಿರ ಎಳೆ ಹುಡುಗನ ಹಾಗೆ ಎಷ್ಟು ಸಲೀಸಾಗಿ ವಸೂಲಿ ಮಾಡುತ್ತಾರೆ ಅಂದರೆ ಅದು ಲಜ್ಜೆಗೇಡಿನ ಸಂಗತಿ ಎಂದು ಇವರ ದಪ್ಪ ಚರ್ಮಕ್ಕೆ ಅನಿಸುವುದೇ ಇಲ್ಲ. ''ಅಪ್ಪ ದುಡಿದಿಟ್ಟಿದ್ದು ನಮಗಲ್ಲದೆ ಮತ್ತ್ಯಾರಿಗೆ ?'' ಅಂತಾರೆ. ಮನೆಯಲ್ಲಿ ಅತ್ತೆಮ್ಮನ ಕಾರುಬಾರು. ಮಾವ ಪದ್ಮಪತ್ರ ಮಿವಾಂಭಸಿ. ಇಂಥವರಿಗೆ ಮದುವೆ ಯಾಕೆ ಮಾಡಬೇಕಿತ್ತೋ, ಪರಮಾತ್ಮನೇ ಬಲ್ಲ. ನಾನಂತೂ ಖರ್ಚಿಗೆ ಅತ್ತೆಯ ಎದುರು ಕೈಚಾಚುವುದಿಲ್ಲ ಎಂದು ಶಪಥ ಮಾಡಿದ್ದೇನೆ. ಎಲ್ಲಾದರೂ ಒಂದು ಕೆಲಸ ಹುಡುಕಿಕೊಂಡು, ಮರ್ಯಾದೆಯಿಂದ ನನ್ನ ಅಗತ್ಯ ಪೂರೈಸಿಕೊಳ್ಳುವಷ್ಟು ಸಂಪಾದನೆ ಮಾಡಬೇಕೆಂದು ತೀರ್ಮಾನಿಸಿದ್ದೇನೆ. ಯಾವುದನ್ನು ತೀವ್ರವಾಗಿ ಅಲ್ಲಗಳೆದಿದ್ದೆನೋ ಅದನ್ನೇ ಮಾಡಬೇಕಾಗಿರುವ ಸಂದರ್ಭ ಬಂದಿರುವುದು ಚೋದ್ಯ ಅನಿಸುತ್ತದೆ. ಹೀಗಾಗಬೇಕು, ಹೀಗಿರಬೇಕು, ಹೀಗೆ ಮಾಡಬೇಕು. ಯಾವುದೂ ನಮ್ಮ ಕೈಲಿಲ್ಲ. ಇದು ನನಗಿಂತಾ ಹೆಚ್ಚು ನಿನಗೇ ಗೊತ್ತಿರುವಂಥಾದ್ದು. ಅಲ್ಲವಾ ಅಮ್ಮ ? ಪುಣ್ಯಕ್ಕೆ ಒಂದು ಡಿಗ್ರಿ ಮಾಡಿಸಿದ್ದಿ. ಕೆಲಸಕ್ಕೆ ಸೇರುವ ಇರಾದೆ ಇಲ್ಲದಿದ್ದರೂ ಚೆನ್ನಾಗಿ ಓದಿ ಫಸ್ಟ್ ಕ್ಲಾಸಿನಲ್ಲಿ ನಾನು ಪಾಸು ಮಾಡಿದ್ದೀನಿ. ಓದಿಸಿದ್ದಕ್ಕೆ ಥ್ಯಾಂಕ್ಸ್ ಅಮ್ಮಾ. ವಿದ್ಯೆ ಅನ್ನುವುದು ಆಪದ್ಧನ ಎಂದು ದೊಡ್ಡವರು ಹೇಳುತ್ತಿದ್ದುದರ ಮರ್ಮ ಈಗ ಗೊತ್ತಾಗಿದೆ. ಕೆಲಸಕ್ಕೆ ಹೋಗಲಾ, ಎಂದು ಕೇಳಿದ್ದಕ್ಕೆ ಅತ್ತೆ ಕುಣಿದಾಡುವುದೊಂದು ಬಾಕಿ.

''ನಿನ್ನ ಬುದ್ಧಿ ಅವನಿಗಿದ್ದಿದ್ದರೆ...'' ಅಂತಲೂ ಅಂದುಬಿಟ್ಟರು.

ನಾನೇನು ಕೆಲಸಕ್ಕೆ ಹೋಗಲ್ಲ ಅಂದಿದೀನಾ ? ಸರಿಯಾದ್ದು ಸಿಕ್ಕಿದರೆ ಸೇರ್ಕೋತೀನಿ... ಅಂತ ನಿನ್ನ ಅಳಿಯಂದಿರೂ ಮುತ್ತು ಉದುರಿಸಿದರು ಅಂದ್ರೆ ನಂಬ್ತೀಯಾ ?

ಈ ನಡುವೆ ಒಂದು ಪರಾಮೋಷಿಯಾಗಿದೆ. ಯಾರ ಹತ್ತಿರವೂ ಹೇಳದೆ ನುಂಗಿಕೊಂಡಿದ್ದೇನೆ. ಎರಡು ತಿಂಗಳಾಗಿಬಿಟ್ಟಿದೆ ಅಮ್ಮಾ. ಅತ್ತೆಗೆ ಗೊತ್ತಾದರೆ ನನ್ನ ಪ್ಲಾನಿಗೆ ಅಡ್ಡಿ ಬರಬಹುದು. ''ಭ್ರೂಣಹತ್ಯೆ ಮಹಾಪಾಪ'' ಎಂದು ನೀನೂ ಉಪದೇಶ ಕೊಡಬಹುದು. ನನ್ನ ಮಗು ಹೆತ್ತವರ ಸಂಪಾದನೆಯಲ್ಲಿ ಬೆಳೆಯಬೇಕು ಅನ್ನುವುದು ನನ್ನ ಆಸೆ. ಅದು ಸಾಧ್ಯವಾಗಬೇಕಾದರೆ ನಾನೊಂದು ಕೆಲಸ ಹುಡುಕಿಕೊಳ್ಳಬೇಕು. ಇವರನ್ನು ನಾನು ನೆಚ್ಚುವುದಿಲ್ಲ. ನಾನು ಕೆಲಸ ಹುಡುಕಿಕೊಳ್ಳಬೇಕಾದರೆ ಬಿಡುಬೀಸಾಗಿರಬೇಕು. ಬಸುರಿನ ಭಾರ ಸದ್ಯಕ್ಕೆ ಬೇಡ ಎಂದು ತೀರ್ಮಾನಿಸಿದ್ದೇನೆ. ಇನ್ನೂ ನಾಲ್ಕಾರು ವರ್ಷ ಕಳೆಯಲಿ. ನನ್ನ ಮೇಲೆ ನನಗೆ ವಿಶ್ವಾಸ ಹುಟ್ಟಲಿ. ಆನಂತರ ಮುಂದಿನ ಪೀಳಿಗೆ ಅವತರಿಸಲಿ ಅಥವಾ ತನ್ನಪ್ಪನಂತಹುದೇ ಆಗುವುದಾದರೆ ಬೇಡವೇ ಬೇಡ. ಗಾಬರಿಯಾಗ್ತಿದೆಯಾ ಅಮ್ಮ ? ನನ್ನ ಮನಸ್ಸು ಅಷ್ಟು ರೋಸಿಹೋಗಿದೆ ಕಣೇ. ಕೆಲಸ ಹುಡುಕಿಕೊಂಡು ಆಚೆಗೆ ಓಡಾಡುವುದನ್ನು ಅಭ್ಯಾಸ ಮಾಡಿಕೊಳ್ಳುತ್ತಿದ್ದೇನೆ. ಹೀಗಾಗಿ ಅತ್ತೆಗೆ ಸುಳಿವು ಸಿಗುವುದಿಲ್ಲ. ಖರ್ಚಿಗೆ, ಅಂತಿದ್ದೀಯಾ ? ಮದುವೆಯಲ್ಲಿ ಬಂದ ಉಡುಗೊರೆ ಹಣದ ಜೊತೆ ನೀನೂ ಒಂದು ದೊಡ್ಡ ಮೊತ್ತ ಸೇರಿಸಿ ಕೊಟ್ಟಿದ್ದು ಮರೆತು ಹೋಯ್ತೇನೇ ಅಮ್ಮಾ ? ಯಾವುದಕ್ಕೆ ಉಪಯೋಗವಾಗ್ತಿದೆ ನೋಡು, ಕರ್ಮ. ಮನಸ್ಸಿನ ತಳಮಳವನ್ನು ಬರೆದು ಕಡಿಮೆ ಮಾಡಿಕೊಳ್ಳುವ ಹೇಳಿಕೆಯನ್ನು ಪತ್ರಿಕೆಯಲ್ಲಿ ಓದಿದ್ದರ ಫಲ ಈ ಪತ್ರಲೇಖನ. ಸಾಕು ಅನ್ನಿಸುತ್ತೆ. ಇನ್ನು ಹರಿದುಹಾಕಲಾ ಅಮ್ಮ ? ನಿನ್ನವರೆಗೆ ಇದನ್ನೆಲ್ಲಾ ತಲುಪಿಸಿ ನೀನು ಇದೀಗ ಕಂಡುಕೊಳ್ಳುತ್ತಿರುವ ಮನಶ್ಶಾಂತಿಯನ್ನು ಕಲಕಬಾರದೆಂಬ ತೀರ್ಮಾನಕ್ಕೆ ಕ್ಷಮಿಸುತ್ತೀ ತಾನೇ ?

ಇಂತೀ ನಿನ್ನ ಮುದ್ದಿನ ಮಗಳು,

**ವಸುಮತಿ ಉಡುಪ**

ನಂ. ೧೨೦, ಮೊದಲ ಮಹಡಿ, 'ಅಮೂಲ್ಯ', ಮೂರನೇ ಕ್ರಾಸ್, ಜಯನಗರ ರೈಲ್ವೆ ಲೇಔಟ್, ಮೈಸೂರು - ೫೭೦ ೦೧೪

## ಸಾದರ ಸ್ವೀಕಾರ

**ಕಾವಳದ ಸಂಜೆಯಲ್ಲಿ** (ಕವನ ಸಂಕಲನ)

*ಚಂದ್ರಶೇಖರ ತಾಳ್ಯ*

**ಪುಟ : ೧೩೨** **ಬೆಲೆ : ರೂ. ೮೦**

**ಆನಂದಕಂದ ಗ್ರಂಥಮಾಲೆ,** ಮಲ್ಲಾಡಿಹಳ್ಳಿ, ಕರ್ನಾಟಕ ರಾಜ್ಯ

**ಸತ್ತರೂ ಬದುಕಿರಲಿ ಆತ್ಮವಿಶ್ವಾಸ** (ಪ್ರಬಂಧ ಸಂಕಲನ)

*ಎಸ್. ಬಿ. ಜೋಗುರ*

**ಪುಟ : ೬೪** **ಬೆಲೆ : ರೂ. ೪೦**

**ಸಹಿಷ್ಣು ಪ್ರಕಾಶನ,** ಕೇರಾಫ್ ಎಸ್. ಬಿ. ಜೋಗುರ, ೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಶ್ರೀನಗರ, ಧಾರವಾಡ - ೫೮೦ ೦೦೩

**ಯಾರೂ ನೆಡದ ಮರ** (ಕವನ ಸಂಕಲನ) *ಗಣೇಶ ಹೊಸ್ಮನೆ*

**ಪುಟ : ೯೬** **ಬೆಲೆ : ರೂ. ೪೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್ ಗದಗ - ೫೮೨ ೧೦೧

**ಉರಿಲಿಂಗ** (ನಾಟಕ) *ಡಾ|| ವಿಜಯಶ್ರೀ ಸಬರದ*

**ಪುಟ : ೭೦** **ಬೆಲೆ : ರೂ. ೫೦**

**ಪಲ್ಲವಿ ಪ್ರಕಾಶನ,** ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

**ಕತ್ತಲಂಚಿನ ಕಿಡಿಗಳು** (ಕಥಾ ಸಂಕಲನ)

*ಡಾ|| ಮೀನಾಕ್ಷಿ ಬಾಳಿ*

**ಪುಟ : ೭೬** **ಬೆಲೆ : ರೂ. ೪೦**

**ಚಿಂತನ ಪುಸ್ತಕ,** ನಂ. ೧೮೬೩, ೩೮ನೇ ಕ್ರಾಸ್, ೧೧ನೇ ಮೈನ್, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

**ನಿರ್ವಚನ** *ಡಾ|| ಎಂ. ಎಂ. ಕಲಬುರ್ಗಿ*

**ಪುಟ : ೫೬** **ಬೆಲೆ : ರೂ. ೨೫**

**ಶೂನ್ಯ ಸಂಪಾದನೆಯ ಶರಣೆಯರು**

*ಜಯಾ ರಾಜಶೇಖರ್*

**ಪುಟ : ೫೬** **ಬೆಲೆ : ರೂ. ೨೫**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು

**ಬಸವ ಧರ್ಮ ಪ್ರಸಾರ ಸಂಸ್ಥೆ,** ಹಿರೇಮಠ ಸಂಸ್ಥಾನ, ಭಾಲ್ಕಿ - ೫೮೫ ೩೨೮, ಬೀದರ ಜಿಲ್ಲೆ

**ಸಿರಗಾಪುರ ನಾಗೇಂದ್ರಪ್ಪ ಕವಿಯ ಭಜನೆ ಹಾಡುಗಳು**

*ಸಂ. : ಸಂಗಮೇಶ ಸವದತ್ತಿಮಠ*

**ಪುಟ : ೧೮೪** **ಬೆಲೆ : ರೂ. ೧೦೦**

**ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ - ೫೮೫ ೪೩೭, ಬಸವಕಲ್ಯಾಣ ತಾಲೂಕು, ಬೀದರ್ ಜಿಲ್ಲೆ

## ಹೊಸ ಓದು



### ತಾರಾ ಸ್ಮರಣೆ
(ಪಂ. ತಾರಾನಾಥರ ಜೀವನ ಮತ್ತು ದರ್ಶನ)

*ಸಂ. : ಎಂ. ಧ್ರುವನಾರಾಯಣ*

**ಪುಟ :** xvi + xvi + ೧೯೬

**ಬೆಲೆ : ರೂ. ೧೨೫**

**ಅಭಿನವ,** ೧೭/೧೮-೨
ಮೊದಲನೆಯ ಮುಖ್ಯರಸ್ತೆ
ಮಾರೇನಹಳ್ಳಿ,
ವಿಜಯನಗರ ಬೆಂಗಳೂರು - ೫೬೦ ೦೪೦

ಸುಮಾರು ೫೦-೬೦ ವರ್ಷಗಳ ಹಿಂದೆ ಆಯುರ್ವೇದ ಔಷಧಿಗಳ ಅಂಗಡಿಗಳಿಗೆ ತಾರಾನಾಥರ ಹೆಸರನ್ನಿಟ್ಟು ಗೌರವ ತೋರಿಸುವುದು ಸಾಮಾನ್ಯವಾಗಿತ್ತು. ಆಯುರ್ವೇದ - ಯುನಾನಿ ವೈದ್ಯಪದ್ಧತಿಯ ಮೂಲಕ ಬಡವರಿಗೆ ಧರ್ಮಾರ್ಥ ಔಷಧಿ-ಚಿಕಿತ್ಸೆ ನೀಡಿ ಗುಣಪಡಿಸುತ್ತಿದ್ದ ಪ್ರಸಿದ್ಧ ವೈದ್ಯರಾಗಿದ್ದ ಪಂಡಿತ ತಾರಾನಾಥರದು ಋಷಿಸದೃಶ ಜೀವನ. ಅವರು ವೈದ್ಯರು ಮಾತ್ರವಲ್ಲದೆ ಸಂಗೀತಗಾರ, ಯೋಗಸಾಧಕ, ಸಾಹಿತಿ, ಶಿಕ್ಷಕರೂ ಆಗಿದ್ದು, ಸಾಕಷ್ಟು ಧರ್ಮಗ್ರಂಥಗಳನ್ನು ಓದಿಕೊಂಡು ಯಾರೊಂದಿಗೆ ಬೇಕಾದರೂ ಎಂಥ ಚರ್ಚೆಗೂ ಸಿದ್ಧವಾಗಿರುತ್ತಿದ್ದರು. 'ದೀನಬಂಧು ಕಬೀರ್' ಎಂಬ ಹಿಂದೀ ನಾಟಕ ಬರೆದು ಕಬೀರನ ಪಾತ್ರವನ್ನು ತಾನೇ ವಹಿಸಿ ಮಹಾತ್ಮಾ ಗಾಂಧೀಜಿ ಅವರ ಸಮ್ಮುಖದಲ್ಲಿ ಅಭಿನಯಿಸಿ ಅವರಿಂದ ಪ್ರಶಂಸೆಗೊಳಗಾದವರು ಅವರು. ರಾಯಚೂರಿನಲ್ಲಿ 'ಹಮ್‌ದರ್ದ್' ಎಂಬ ಶಾಲೆಯನ್ನೂ, ಮಂತ್ರಾಲಯಕ್ಕೆ ಸಮೀಪದಲ್ಲಿ 'ಪ್ರೇಮಾಯತನ' ಎಂಬ ಆಶ್ರಮವನ್ನೂ ಸ್ಥಾಪಿಸಿ, ಸಮಾಜಸೇವೆಯಲ್ಲಿ ತೊಡಗಿದ್ದ ಅವರಿಗೆ ಅಭಿಮಾನಿ ಬಳಗ ಮತ್ತು ಶಿಷ್ಯವೃಂದ ತಾನಾಗಿಯೇ ಬೆಳೆದುಬಂತು. ಅವರನ್ನು ಬಲ್ಲ ವಿದ್ವಾಂಸರನೇಕರ ಲೇಖನಗಳನ್ನು ಒಳಗೊಂಡ ಈ ಪುಸ್ತಕವು ತಾರಾನಾಥರ ವ್ಯಕ್ತಿತ್ವವನ್ನು ನಮಗೆ ಪರಿಚಯಿಸುತ್ತದೆ. ಅವರು ವೈಚಾರಿಕ ಮನೋಭಾವವನ್ನು ಬರಿ ಬೋಧಿಸದೆ ತಮ್ಮ ದಿನನಿತ್ಯದ ಬದುಕಿನಲ್ಲಿ ಆಚರಣೆಗೆ ತಂದವರು.

### ವನಿತೆಯರ ವ್ಯಾಧಿಗಳು

*ಡಾ|| ಎಚ್. ಆರ್. ಮಣಿಕರ್ಣಿಕಾ*

**ಪುಟ :** ೧೦೦ **ಬೆಲೆ : ರೂ. ೫೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೯, ಬೆಂಗಳೂರು - ೫೬೦ ೦೦೧



ಮಹಿಳೆ ಆರೋಗ್ಯವಾಗಿದ್ದರೆ ಕುಟುಂಬದ ಎಲ್ಲರೂ ಹರ್ಷಚಿತ್ತರಾಗಿರುತ್ತಾರೆ ಎಂಬುದು ಒಂದು ಸಾಮಾನ್ಯ ನಂಬಿಕೆ. ಆದರೆ ಆಕೆ ಅನುಭವಿಸುವ ಕೌಟುಂಬಿಕ ರಗಳೆಗಳು, ಕಿರಿಕಿರಿಗಳು ಹೆಚ್ಚಾಗಿ ಯಾರಿಗೂ ತಿಳಿಯುವುದಿಲ್ಲ ಅಥವಾ ಅದನ್ನವಳು ದೊಡ್ಡದಾಗಿ ಬಹಿರಂಗಪಡಿಸುವುದಿಲ್ಲ. ಸ್ತ್ರೀಯರ ಕಾಯಿಲೆಗಳೂ ಹಾಗೆಯೇ – ಅವು ಕೈಮೀರಿ ಹೋಗುವವರೆಗೂ ಅದನ್ನವಳು ಯಾವುದೋ ಕಾರಣಗಳಿಗಾಗಿ ಮುಚ್ಚಿಡುತ್ತಾಳೆ. ಸಂಕೋಚವೂ ಇರಬಹುದು ಅಥವಾ ಕುಟುಂಬದ ಇತರರಿಗಿಂತ ತನ್ನದು ಕಡೆಯ ಆದ್ಯತೆಯೆಂಬ ತ್ಯಾಗವಿರಬಹುದು. ಅದೇನೇ ಇರಲಿ, ಈ ಪುಸ್ತಕ ಮಹಿಳೆಯರ ವ್ಯಾಧಿಗಳು ಹೇಗೆ ಬರುತ್ತವೆಂಬುದನ್ನೂ ಕಾಲಕಾಲಕ್ಕೆ ಪರೀಕ್ಷಿಸಿ ಚಿಕಿತ್ಸೆ ಕೊಡಿಸಿ ಗುಣಮಾಡುವ ವಿಧಾನಗಳನ್ನೂ ತಿಳಿಸುತ್ತವೆ. ಖ್ಯಾತ ಸ್ತ್ರೀರೋಗ ತಜ್ಞೆ ಡಾ|| ಎಚ್. ಆರ್. ಮಣಿಕರ್ಣಿಕಾ ಅವರು ಮಹಿಳೆಯ ಕುಟುಂಬದವರೂ ಸಹ ಅವಳ ಅಗತ್ಯಗಳಿಗೆ ಹೇಗೆ ಸ್ಪಂದಿಸಬಹುದೆಂಬುದನ್ನು ವಿವರವಾಗಿ ಬರೆದಿದ್ದಾರಲ್ಲದೆ ವ್ಯಾಧಿಗಳ ಬಗ್ಗೆ ಅರಿವು ಮೂಡಿಸಿದ್ದಾರೆ.

### ಅಂಟಿದ ನಂಟು (ಪಂ. ತಾರಾನಾಥರ ಅಸಮಗ್ರ ಲೇಖನಗಳು)

*ಸಂಪಾದಕರು : ಎಂ. ಧ್ರುವನಾರಾಯಣ, ಕಿ. ರಂ. ನಾಗರಾಜ*

**ಪುಟ :** xvi + ೫೭೬ **ಬೆಲೆ : ರೂ. ೩೦೦**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ
ಬೆಂಗಳೂರು - ೫೬೦ ೦೪೦

ಇಲ್ಲಿ ಸಂಗ್ರಹಿಸಲಾದ ಪಂಡಿತ ತಾರಾನಾಥರ ಪಾಂಡಿತ್ಯಪೂರ್ಣ ಬರಹಗಳನ್ನು ಇಂದಿನ ತಲೆಮಾರಿನ ಜನರು ಅವಶ್ಯ ಓದಬೇಕು. ಇವು ಒಬ್ಬ ಗುರು ತನ್ನ ನೆಚ್ಚಿನ ಶಿಷ್ಯನಿಗೆ ತನ್ನೆಲ್ಲ ವಿದ್ಯೆಯನ್ನು ಅರೆದರೆದು ಕುಡಿಸುವಂತಹ ವಿಚಾರಪ್ರಚೋದಕ ಬರಹಗಳು. ಭಾಷಣಗಳಲ್ಲಿ, ಬರಹಗಳಲ್ಲಿ ಅವರದ್ದು ಅರೆಬರೆ ತಿಳುವಳಿಕೆಯಾಗಿರದೆ, ಆಳವಾದ ವಿಷಯ ಜ್ಞಾನದಿಂದ ಕೂಡಿದ ವಿದ್ವತ್‌ಪೂರ್ಣ ಸಂಗತಿಗಳು ಇವೆ. ಅವರು ಸ್ಥಾಪಿಸಿದ 'ಪ್ರೇಮಾಯತನ' ಆಶ್ರಮದಿಂದ ಹೊರಡುತ್ತಿದ್ದ 'ಪ್ರೇಮ' ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಲಭ್ಯ ಬರಹಗಳನ್ನು ಮತ್ತು ಇನ್ನಿತರ ಮೂಲಗಳಿಂದಲೂ ಅವರ ಕೆಲವು ಲೇಖನಗಳನ್ನು ಆಯ್ದುಕೊಳ್ಳಲಾಗಿದೆ. ಸಾಮಾಜಿಕ ರೀತಿನೀತಿ, ಸ್ತ್ರೀಸ್ವಾತಂತ್ರ್ಯ, ವೇಶ್ಯಾಬದುಕಿನ ಸಮಸ್ಯೆ, ಧರ್ಮದ ಮುಸುಕಿನೊಳಗೆ ನಡೆವ ದುರಾಚಾರ, ಪುರಾಣಕಾಲದ ಬದುಕಿನ ವಿಚಾರ ಇವೆಲ್ಲ ಅವರ ಬರಹಗಳಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಔದ್ಯೋಗೀಕರಣಕ್ಕೆ ಭಾರತ ತೆರೆದುಕೊಂಡ ಸ್ವಾತಂತ್ರ್ಯಪೂರ್ವದ ಬ್ರಿಟಿಷರ ಆಡಳಿತ ಕಾಲದ ಬರಹಗಳಿವು. ಕ್ರಾಂತಿಕಾರಿ ನಿಲುವಿನಿಂದ ಧಾರ್ಮಿಕ ಕಂದಾಚಾರದ ವಿರುದ್ಧ ಬರೆದ ಅವರ ಮಹತ್ವದ ಕೃತಿ 'ಧರ್ಮಸಂಭವ'. ಇಲ್ಲಿ ಬರಿಯ ಹಿಂದೂಗಳ ಪ್ರಸ್ತಾಪವಷ್ಟೇ ಅಲ್ಲದೆ ಜಾಗತಿಕ ಮತಧಾರ್ಮಿಕ ಗ್ರಂಥಗಳನ್ನೆಲ್ಲಾ ಸ್ವತಃ ಓದಿಕೊಂಡು ಸಮಗ್ರ ವಿವೇಚನೆ - ಚಿಕಿತ್ಸಕ ದೃಷ್ಟಿಯಿಂದ ತಮ್ಮ ತರ್ಕಬದ್ಧ ವಾದವನ್ನು ಮುಂದಿಟ್ಟಿದ್ದಾರೆ. ಆಯುರ್ವೇದ ವೈದ್ಯರಾಗಿದ್ದು ಉಚಿತ ಸೇವೆ ನೀಡುತ್ತಿದ್ದ ಇವರು ಸಂಗೀತದಲ್ಲೂ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ಇವರ ಪುತ್ರ ರಾಜೀವ್ ತಾರಾನಾಥ್ ಪ್ರಸಿದ್ಧ ಸರೋದ್ ವಾದಕರು.

### ಮಹಿಳಾ ಅಧ್ಯಯನ (ಸಮಾಜಶಾಸ್ತ್ರೀಯ ದೃಷ್ಟಿಕೋನ)

*ಸುಧಾ ಸೀತಾರಾಮನ್*

**ಪುಟ :** xxii + ೧೫೬ **ಬೆಲೆ : ರೂ. ೨೦೦**

**ಸ್ತ್ರೀಲೇಖ ಪ್ರಕಟಣೆ,** ೩೩/೧-೯, ತ್ಯಾಗರಾಜ ಲೇಔಟ್, ಜೈ ಭಾರತನಗರ, ಮಾರುತಿ ಸೇವಾನಗರ, ಬೆಂಗಳೂರು - ೫೬೦ ೦೩೩



ಸ್ವತಃ ಸ್ತ್ರೀವಾದಿ ಚಿಂತನೆ, ಬೋಧನೆ ಮತ್ತು ಕ್ಷೇತ್ರಕಾರ್ಯದಲ್ಲಿ ಅನುಭವವೂ ಉಳ್ಳ ಶ್ರೀಮತಿ ಸುಧಾ ಸೀತಾರಾಮನ್ ಮಹಿಳಾ ಚಳುವಳಿಯ ಕಾರ್ಯಕರ್ತೆಯೂ ಆಗಿದ್ದಾರೆ. ಮಹಿಳಾ ಅಧ್ಯಯನದ ವಸ್ತುವನ್ನೊಳಗೊಂಡಿರುವ ಈ ಕೃತಿಯಲ್ಲಿ ಮಹಿಳೆಗೆ ಸಂಬಂಧಪಟ್ಟಂತೆ ಆಕೆಯನ್ನು ಅನೇಕ ಮಗ್ಗುಲುಗಳಿಂದ ಕಂಡು, ಆಕೆಯ ಸ್ಥಾನಮಾನ ಮತ್ತು ಘನತೆಯನ್ನು ಎತ್ತರಿಸುವತ್ತ ಶ್ರೀಮತಿ ಸುಧಾ ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ನಮ್ಮ ಸಮಾಜದಲ್ಲಿ ಮಹಿಳೆಯನ್ನು ಕಾಣುವ ರೀತಿ, ಅವಳ ಮೇಲಿನ ದೌರ್ಜನ್ಯ, ಆಕೆಗೆ ಕೊಡಲ್ಪಟ್ಟ ಅಬಲೆ ಎಂಬ ಪಟ್ಟ ಮತ್ತು ಪುರುಷಪ್ರಧಾನ ಸಂಸ್ಕೃತಿಯಲ್ಲಿ ಆತನ ಅಧೀನದಲ್ಲಿರಬೇಕಾದ ಸ್ಥಿತಿ ಇವೆಲ್ಲವೂ ಶತಮಾನಗಳಿಂದಲೂ ಬೇರೂರಿ ಬಂದಿವೆ. ಇವು ದಿನಬೆಳಗಾದರೆ ಪಲ್ಲಟಗೊಳ್ಳುವಂಥವೂ ಅಲ್ಲ, ಹೋರಾಟ ಚಳುವಳಿಗಳಿಂದ ಮಾತ್ರ ಸಾಧ್ಯವಾಗುವಂತಹವೂ ಅಲ್ಲ. ಪುರುಷರಿಗೆ ಸರಿಸಮಾನವಾಗಿ ಮಾತ್ರವೇ ಏಕೆ, ಅವರಿಗಿಂತಲೂ ಒಂದು ಹೆಜ್ಜೆ ಮುಂದೆಯೇ ಬರಬೇಕೆನ್ನುವ ಛಲ ಮಹಿಳೆಯರಲ್ಲಿದ್ದರೆ ತಪ್ಪೇನು ? ಮಹಿಳೆ ಕೌಟುಂಬಿಕ ಹಿಂಸಾಚಾರ, ಸಾಮೂಹಿಕ ಅತ್ಯಾಚಾರಗಳಂಥ ದೌರ್ಜನ್ಯಗಳನ್ನು ಖಂಡಿಸಿ ಹೋರಾಡುತ್ತಾಳೆ. ಮುಂದೆ ತನಗೆ ನ್ಯಾಯ ಸಿಗದಿದ್ದಲ್ಲಿ ತೀವ್ರ ಸ್ವರೂಪದ ಅಂತರರಾಷ್ಟ್ರೀಯ ಮಟ್ಟದ ಸಂಘಟನೆಗಳನ್ನು ಕಟ್ಟಿ ಚಳವಳಿಗಳಿಗೂ ಮುಂದಾಗುತ್ತಾಳೆ. ಪ್ರಾಚೀನಕಾಲದಿಂದ ಇಂದಿನವರೆಗೂ ನಡೆದುಬಂದಿರುವ ಸ್ತ್ರೀವಾದಿ ಚಳುವಳಿಗಳ ಸ್ವರೂಪವನ್ನು ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಇಲ್ಲಿ ಪ್ರಸ್ತುತಪಡಿಸಿದೆ.

## ಸಾಹಿತ್ಯದ ಸಪ್ತಧಾತುಗಳು

*ಯಶವಂತ ಚಿತ್ತಾಲ*

**ಪುಟ :** ೧೨೦ ಬೆಲೆ : ರೂ. ೭೫

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ
ವಿಜಯನಗರ, ಬೆಂಗಳೂರು - ೫೬೦ ೦೪೦

ಒಂದು ಸಾಹಿತ್ಯಕೃತಿಯನ್ನು ರಚಿಸುವ ಲೇಖಕನೊಬ್ಬನಿಗೆ ಸಾಮಾಜಿಕ ಹೊಣೆಗಾರಿಕೆಯೊಂದು ಹೆಗಲಿಗೆ ಅಂಟಿಕೊಂಡಿರುತ್ತದೆಂಬ ಪ್ರಾಥಮಿಕ ಅರಿವು ಇರುವವರಲ್ಲಿ ಯಶವಂತ ಚಿತ್ತಾಲರು ಒಬ್ಬರು. ಸಾಹಿತ್ಯ ನಿರ್ಮಾಣವೆಂದರೆ ಓದುಗನ ಬೌದ್ಧಿಕ ಹಸಿವನ್ನು ಹಿಂಗಿಸಲು ಏನನ್ನೋ ಬರೆದುಕೊಡುವುದಲ್ಲ; ಓದು ಎಂಬುದು ಆತನನ್ನು ಪರಿಪೂರ್ಣ ಸಭ್ಯ ವ್ಯಕ್ತಿಯನ್ನಾಗಿಸಿ ತನ್ಮೂಲಕ ಸಮಾಜದ ನೈತಿಕ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳುವಂತಹ ಕಸುವು ಅಲ್ಲಿರಬೇಕೆಂಬುದು ಅವರ ನಿಲುವು. ಅದರಂತೆ ಅವರು ಉತ್ತಮ ಸಾಹಿತ್ಯವನ್ನು ಓದುತ್ತಾರೆ, ಉತ್ತಮ ಸಾಹಿತ್ಯವನ್ನು ನಿರ್ಮಿಸುತ್ತಾರೆ.



ಇದೇ ಚಿತ್ತಾಲರ ಹೆಚ್ಚುಗಾರಿಕೆ. ಕೆಲವೇ ಉತ್ತಮ ಕಥೆಗಳನ್ನೂ, ಕಾದಂಬರಿಗಳನ್ನೂ ಅವರು ಬರೆದಿದ್ದಾರೆ. ಸಂಖ್ಯಾದೃಷ್ಟಿಯಿಂದ ನೋಡುವವರಿಗೆ ಕಡಿಮೆ ಎನಿಸಿದರೂ ಮೌಲ್ಯದ ದೃಷ್ಟಿಯಿಂದ ಓದುಗರಿಗೆ ಅವು ಸಮಾಧಾನ ನೀಡುತ್ತವೆ. ಮನುಷ್ಯನಿಗೆ ಬದುಕಿನ ಅನುಭವ – ಆತನ ಪರಿಸರ – ಚಿಂತನಾ ಸಾಮರ್ಥ್ಯ ಸಾಹಿತ್ಯ ಸೃಷ್ಟಿಗೆ ಪೂರಕವಾಗುತ್ತವೆ. ಹೀಗೆ ಸಾಹಿತ್ಯ ಮತ್ತು ಅದು ಸೃಷ್ಟಿಯಾಗುವ ಬೆರಗಿನ ಬಗ್ಗೆ ಇಲ್ಲಿ ಸವಿಸ್ತಾರವಾಗಿ ಬರೆದಿದ್ದಾರೆ. ಬರಹಗಳು ಹತ್ತು ವರ್ಷ ಹಳೆಯವು. ಆದರೂ ಇಂದಿಗೂ ಪ್ರಸ್ತುತವಾಗಿವೆ.

## ಎಚ್ಚೆಸ್ವಿ ಅನಾತ್ಮ ಕಥನ

*ಎಚ್. ಎಸ್. ವೆಂಕಟೇಶಮೂರ್ತಿ*



**ಪುಟ :** ೨೦೦ ಬೆಲೆ : ರೂ. ೧೩೦

**ಮೈತ್ರೇಯಿ,** ಇನಿಷಿಯೇಟಿವ್ ಆಫ್ ಮೈತ್ರೇಯಿ ಪ್ರೈವೆಟ್ ಲಿಮಿಟೆಡ್, ೪ನೇ ಮಹಡಿ, ಲಕ್ಷ್ಮೀ ಕಾಂಪ್ಲೆಕ್ಸ್
೧೦ನೇ ಮುಖ್ಯರಸ್ತೆ, ೨೭ನೇ ಅಡ್ಡರಸ್ತೆ, ೪ನೇ ಬ್ಲಾಕ್
ಜಯನಗರ, ಬೆಂಗಳೂರು - ೫೬೦ ೦೧೧

ಎಚ್ಚೆಸ್ವಿ – ಇಲ್ಲಿ ತಮ್ಮ ಜೀವನದ ಸ್ಮರಣೀಯ ಘಟನೆಗಳನ್ನು ಜ್ಞಾಪಿಸಿಕೊಳ್ಳುತ್ತ ತಮ್ಮ ಪರಿಚಯವನ್ನು ಕಥನದ ರೂಪದಲ್ಲಿ ಮಾಡಿಕೊಟ್ಟಿದ್ದಾರೆ. ಬಾಲ್ಯದಲ್ಲಿ ತಾನು ಬೆಳೆದ ಮನೆ, ತಾನಾಡಿದ ಬಯಲು, ತನ್ನೂರಿನ ಸೊಗಸು, ಓದಿದ ಶಾಲೆ, ಸ್ನೇಹಿತರು, ಗುಡ್ಡ-ಬೆಟ್ಟ, ಮರ ಗಿಡಗಳೆಲ್ಲ ಇವರ ಆತ್ಮ ಕಥನದ ಪಾಲುಗಾರರೇ. ಆಹಾ... ಬಾಲ್ಯವೊಂದು ಸ್ವರ್ಣಕಾಲ! ಮುಗ್ಧಭಾವನೆಗಳ ಮಡುವು. ಇಳಿವಯಸ್ಸಿನಲ್ಲಿ ಅದನ್ನು ನೆನಪಿಸಿಕೊಳ್ಳುವುದು ಒಂದು ರೋಮಾಂಚಕಾರಿ ಅನುಭವ. ಅಂತೆಯೇ ನಗರ ಜೀವನವೂ ಅವರಿಗೆ ಬಲುಪ್ರಿಯ. ಕವಿಗಳಾದ ಅವರಿಗೆ ಹೋದಲ್ಲೆಲ್ಲ ಸ್ನೇಹಿತರೇ. ಆತ್ಮೀಯರು, ಸಹೋದ್ಯೋಗಿಗಳೆಲ್ಲರೊಂದಿಗಿನ ಹಿತವಾದ ಒಡನಾಟ, ಕುಟುಂಬ ಜೀವನ ಇವೆಲ್ಲ ಅವರನ್ನು ಹಳ್ಳಿಗೂ - ನಗರಕ್ಕೂ ಜೋಕಾಲಿಯಾಡಿಸುತ್ತ ತೂಗಿಸುತ್ತದೆ. ಎತ್ತ ಜೀಕಿದರೂ ಅವರಿಗೆ ಸುಂದರ ಸಂಬಂಧಗಳೇ. ತಮ್ಮ ಬದುಕಿನಲ್ಲಿ ಅವರು ತರಹೇವಾರಿ ಪ್ರಸಂಗಗಳನ್ನೂ ಜನರನ್ನೂ ಕಂಡಿದ್ದಾರೆ. ಮೋಜಿನ ಪ್ರಸಂಗಗಳಂತೂ ಲೆಕ್ಕವಿಲ್ಲದಷ್ಟು. ಅವರಿಗೆದುರಾದ ಘಟನೆಗಳೆಲ್ಲಾ ಅವರಿಗೆ ಕಾವ್ಯಕ್ಕೆ ವಸ್ತುವಾಗಿವೆ. ಈ ಪುಸ್ತಕವೂ ಒಂದು ನೀಳ್ಗತೆಯೋ ನೀಳ್ಗವನವೋ ಆಗಿರುವಂತೆ ಭಾಸವಾಗುತ್ತದೆ. ಇದನ್ನವರು ತಮ್ಮದೇ ಆತ್ಮಕಥನವೆಂದೇನೂ ಭಾವಿಸಿದಂತಿಲ್ಲ, ಅವರ ಜತೆ ನಿಕಟವಾಗಿರುವ ಎಲ್ಲವೂ, ಎಲ್ಲರೂ ಇಲ್ಲಿ ಆಹ್ವಾನಿಸಲ್ಪಟ್ಟು ಎಲ್ಲರೊಂದಿಗೆ ತಮ್ಮನ್ನೂ ಗುರುತಿಸಿಕೊಳ್ಳುತ್ತ ಸಾಗಿದ್ದಾರೆ ಎಚ್ಚೆಸ್ವಿ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*






ನವೆಂಬರ್ ೨೧, ೨೦೧೧ರ ಭಾನುವಾರ, ಬೆಂಗಳೂರಿನಲ್ಲಿ ನವಕರ್ನಾಟಕದ ಹೊಸ ಪ್ರಕಟಣೆಗಳಾದ 'ವನಿತಾ ಚಿಂತನ ಮಾಲೆ'ಯ ೬ ಕೃತಿಗಳ ಲೋಕಾರ್ಪಣೆ ಸಮಾರಂಭ ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ನಡೆಯಿತು. ಡಾ|| ಆರ್. ಪೂರ್ಣಿಮಾ ಅಧ್ಯಕ್ಷತೆ ವಹಿಸಿದ್ದರು. ಕೃತಿಗಳ ಲೇಖಕರು, ಅನುವಾದಕರು ಹಾಗೂ ಸಾಹಿತ್ಯಾಸಕ್ತರು ಭಾಗವಹಿಸಿದ್ದರು. 'ಸೂಫಿ ಮಹಿಳೆಯರು', 'ಬಿ. ರಂಗನಾಯಕಮ್ಮ', 'ದೀಪಧಾರಿಣಿ', 'ಅಮ್ಮನಿಗೆ ಹಜ್ ಬಯಕೆ', 'ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು' ಮತ್ತು ಕಾಲುಹಾದಿಯ ಕೋಲ್ಮಿಂಚುಗಳು – 'ಮಹಿಳಾ ವಿಜ್ಞಾನಿಗಳು' ಇವು ಅನಾವರಣಗೊಂಡ ಕೃತಿಗಳು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) : ಶ್ರೀಮತಿ ನೇಮಿಚಂದ್ರ, ಶ್ರೀ ಸಿ. ಆರ್. ಕೃಷ್ಣರಾವ್, ಶ್ರೀ ಫಕೀರ್ ಮುಹಮ್ಮದ್ ಕಟ್ಪಾಡಿ, ಡಾ|| ಆರ್. ಪೂರ್ಣಿಮಾ, ಶ್ರೀಮತಿ ಬಿ. ಜಿ. ಕುಸುಮಾ ಮತ್ತು ಶ್ರೀಮತಿ ಎಚ್. ಎನ್. ಗೀತಾ.

# ಲಾವಣಿ ಸಾಹಿತ್ಯದಲ್ಲಿ ನೀರಾವರಿ ವ್ಯವಸ್ಥೆ

**ಡಾ|| ವೀರೇಶ ಬಡಿಗೇರ**

> ಒಡ್ಡರ ಬೋಯಿ, ಮದಗದ ಕೆಂಚವ್ವ, ಮಲಪುರಿ, ಕೆರೆಗೆ ಹಾರ, ಕೆರೆಹೊನ್ನಮ್ಮ ಇತ್ಯಾದಿ ಲಾವಣಿಗಳಲ್ಲಿ ಹೆಣ್ಣು ಬಲಿಯಾಗುವುದು ಒಂದು ಸತ್‌ಸಂಪ್ರದಾಯ ಎನ್ನುವಂತೆ ವಿವರಿಸಲಾಗಿದೆ. ಉದ್ದೇಶಿತ ಸ್ಥಳದಲ್ಲಿ ನೀರು ಬಾರದಿದ್ದಾಗ ಹಾಗೂ ನೀರು ನಿಲ್ಲದಿದ್ದಾಗ ಶಾಸ್ತ್ರ ಕೇಳುವ ಸಂಪ್ರದಾಯ ಹಾಗೂ ಪರಿಹಾರ ಹುಡುಕುವ ಮಾರ್ಗಗಳು ತುಂಬಾ ಪಕ್ಷಪಾತದಿಂದ ಕೂಡಿದಂಥವು. ಶಾಸ್ತ್ರ ಹೇಳುವುದೊಂದಾದರೆ ಪರಿಹಾರ ನೀಡುವುದು ಮತ್ತೊಂದು. ಸಾರ್ವಜನಿಕರ ಉಪಯೋಗಕ್ಕಾಗಿ ನೆಲೆನಿಲ್ಲಿಸುವ ನೀರಿನ ಮೂಲಗಳಿಗೆ ಬಲಿ ನೀಡುವ ಪ್ರಸಂಗಗಳು ಬಹಳ ಬರ್ಬರವಾದಂಥವು.

ಜಾನಪದ ಬದುಕಲ್ಲಿ 'ಜಲ' ಎನ್ನುವುದು ಉತ್ತೇಜಕ ಹಾಗೂ ಸಮೃದ್ಧಿಯ ಸಂಕೇತವಾಗಿದ್ದಂತೆ ಜೀವಹತಿಯ ಪ್ರತಿನಿಧಿಯಾಗಿಯೂ ಕೆಲಸ ಮಾಡಿದೆ. ಜನಪದರಿಗೆ ಗಂಗೆ ತಾಯಿ, ಮಾತೆ, ಅಮ್ಮನಾಗಿ ಪೂಜೆಗೊಳ್ಳುತ್ತಾಳೆ. ಅವಳು ಪ್ರಕೃತಿ ಸ್ವರೂಪಳು. ಕೃಷಿ ಹಾಗೂ ಕೃಷಿಯ ಉಪವೃತ್ತಿಯನ್ನು ಆಧರಿಸಿದ ಸಮುದಾಯಗಳಲ್ಲಿ, ಹೆಣ್ಣು ಸೃಷ್ಟಿಯ ಸಂಕೇತ. ಗಂಗೆ ಇವರ ಆರಾಧ್ಯ ದೇವತೆ. ಇಂದಿಗೂ ಎಲ್ಲ ಗ್ರಾಮದೇವತೆಗಳು ಜಲರೂಪಿಯಾಗಿದ್ದು ಜಲಮೂಲದೊಂದಿಗೆ ನೇರ ಸಂಬಂಧ ಹೊಂದಿವೆ. ಎಲ್ಲ ಜನಪದ ಹಾಗೂ ಬುಡಕಟ್ಟು ಸೃಷ್ಟಿ ಪುರಾಣಗಳು ಸೃಷ್ಟಿಯ ಮೂಲಧಾತುವೇ ನೀರು ಎಂದು ಹೇಳುತ್ತವೆ. ಜಗತ್ತಿನ ಎಲ್ಲ ಪ್ರಾಚೀನ ಸಂಸ್ಕೃತಿಗಳು ಕೃಷಿ ಮೂಲವಾದಂಥವು. ನದಿ, ಮಳೆ, ಅಂತರ್ಜಲದಂಥ ಪ್ರಕೃತಿಯ ಅಂಶಗಳು ಇವುಗಳ ವಿಕಾಸದ ಹಾದಿಯಲ್ಲಿ ಅವಶ್ಯವಾಗಿದ್ದವು. ನೀರು ಕೇವಲ ಪ್ರಾಕೃತಿಕ ಪದಾರ್ಥವಾಗಿರದೆ ಜೀವಜಾಲದ ಪೋಷಣೆ ಹಾಗೂ ಸಂವರ್ಧನೆಗೆ ಕಾರಣವಾಗಿತ್ತು. ನೀರಿನ ಬಹೂಪಯೋಗಿ ಶಕ್ತಿ ಸಾಧ್ಯತೆಗೂ ಮಾನವ ಸಮಾಜದ ವಿಕಾಸಕ್ಕೂ ನೇರ ಸಂಬಂಧವಿದೆ. ನೀರು ತನ್ನ ಪ್ರಾಕೃತಿಕ ರೂಪಗಳಾದ ನದಿ, ಕೆರೆ, ಬಾವಿ, ಝರಿ, ಸಮುದ್ರ, ಮಳೆಗಳ ಮೂಲಕ ಫಲವಂತಿಕೆಯ ಸ್ವರೂಪವನ್ನು, ಪೋಷಣೆಯ ಸ್ವರೂಪವನ್ನು, ಪಡೆದುಕೊಂಡಿದೆ. ಜಗತ್ತಿನ ಬಹಳಷ್ಟು ಸಂಸ್ಕೃತಿಗಳು ಇಂಥ ನೀರಿನ ಮೂಲಗಳನ್ನು ಮಾತೃದೇವತೆಯೆಂದು ಭಾವಿಸಿದ್ದವು. ಅಲ್ಲದೆ, ಭೂಮಿ ಹಾಗೂ ಪ್ರಕೃತಿಯನ್ನು ಸ್ತ್ರೀಯ ರೂಪದಲ್ಲಿ ನಿರ್ವಹಿಸಿಕೊಂಡಿದ್ದವು. ನೀರು ಕೇವಲ ಪ್ರಾಕೃತಿಕ ಪದಾರ್ಥ ಮಾತ್ರವಾಗಿರದೆ ಜನಸಮುದಾಯಗಳ ಧಾರ್ಮಿಕ ಹಾಗೂ ಸಾಮಾಜಿಕ ನೆಲೆಗಳಲ್ಲಿ ಪವಿತ್ರ-ಅಪವಿತ್ರ, ಶುಭ-ಅಶುಭ, ಸೂತಕ-ಶುದ್ಧೀಕರಣ ಇತ್ಯಾದಿಯಾಗಿ ಬಿಂಬತವಾಗಿದೆ. ಸ್ವತಃ ದೇವತೆಯಾಗಿ, ಫಲವಂತಿಕೆಯನ್ನು ರೇಚನಗೊಳಿಸುವ ಪ್ರಚೋದಕವಾಗಿ, ರೋಗ ನಿರೋಧಕ ಔಷಧಿಯಾಗಿ, ಪಾಪ ತೊಳೆವ ಶಕ್ತಿಯಾಗಿ, ಮಾಂತ್ರಿಕ ಆಚರಣೆಗಳಲ್ಲಿ ಬಹುಮುಖ್ಯ ಶಕ್ತಿಯಾಗಿ ಕಾಣಿಸಿಕೊಂಡಿದೆ. ಅಂದರೆ ಜಾನಪದ ಬದುಕಲ್ಲಿ 'ನೀರು' ಬರೀ ಒಂದು ವ್ಯವಸ್ಥೆಯಾಗಿ ಬರದೆ ಅದು ಜೀವಜಾಲದ ಪೋಷಣೆ ಹಾಗೂ ಸಂವರ್ಧನೆಗೆ ಬೇಕಾದ ಮೂಲಧಾತುವಾಗಿ ಸ್ಥಾನ ಪಡೆದಿದೆ. ಅದನ್ನು ಬರೀ ನೀರಾವರಿ ವ್ಯವಸ್ಥೆಯ ಪೋಷಕ ಅಂಶ ಎಂದಾಗಲೀ ನೀರಿನ ಮೂಲವೆಂದಾಗಲೀ ಭೌತಿಕವಾಗಿ ಗುರುತಿಸುವುದು ಸರಿಯಲ್ಲ. ಅದೊಂದು ಸಂಸ್ಕೃತಿಯಾಗಿ ಸಂರಚನೆಗೊಳ್ಳುತ್ತಾ ಬಂದಿದೆ. ಹೀಗಾಗಿ ಹೆಚ್ಚಿನ ಜಾನಪದ ಲಾವಣಿಗಳು ನೀರನ್ನು ಒಂದು ಸಮಷ್ಟಿ ಪ್ರಜ್ಞೆಯ ಲೋಕಕಲ್ಯಾಣದ ತ್ಯಾಗ-ಬಲಿದಾನಗಳ ನೆಲೆಯಲ್ಲಿಯೇ ಪರಿಭಾವಿಸುವುದನ್ನು ಕಾಣಬಹುದು. ಕೆರೆ, ಬಾವಿ, ಕೂಪ, ತೂಬು, ಮದಗ, ಮುಂತಾದವುಗಳ ನಿರ್ಮಾಣ ಜನಪದ ಸಾಹಿತ್ಯದಲ್ಲಿ ಹೇರಳವಾಗಿ ಸಿಗುತ್ತದೆ. ಇವು ಇಂದಿನ ವ್ಯಕ್ತಿ ಪ್ರಧಾನ ವಾಣಿಜ್ಯೀಕೃತ ಕೃಷಿ ನೀರಾವರಿ ಪದ್ಧತಿಯ ಮಾದರಿಯಲ್ಲಿರದೇ ಜನೋಪಯೋಗಿ ನೆಲೆಯಲ್ಲಿ ಇದ್ದವು ಎನ್ನುವುದು ಗಮನಾರ್ಹ.

ತ್ಯಾಗ ಬಲಿದಾನಗಳ ಕಥೆಗಳಾಗಿ ಈಗಾಗಲೇ ಪ್ರಚಲಿತವಾಗಿರುವ ಕೆರೆ ಹೊನ್ನಮ್ಮ, ಬಾನಾವತಿ ದೊರೆ, ಕೆರೆಗೆ ಹಾರ, ಮಲಪುರಿ, ಅಣಜಿ ಹೊನ್ನಮ್ಮ, ಒಡ್ಡರ ಬೋಯಿ

ಮುಂತಾದ ಲಾವಣಿಗಳು ನೀರಿನ ಮೂಲ ಹಾಗೂ ಅದರ ಸಮೃದ್ಧಿಯ ಜೊತೆಗೆ ನರಬಲಿ ಸಂಬಂಧಿಸಿದ ವಿಚಾರಗಳನ್ನು ಬಿಚ್ಚಿತೋರಿಸುತ್ತವೆ. ಇಂಥ ಜಾನಪದ ದ್ರವ್ಯಗಳ ಅಧ್ಯಯನವು ಸಮಾಜದ ನೆಲೆಯಲ್ಲಿ ಹಾಗೂ ವ್ಯಕ್ತಿಯ ನೆಲೆಯಲ್ಲಿ ನಡೆದಿರುವ ಸಾಮಾಜಿಕ, ಸಾಂಸ್ಕೃತಿಕ ಪಲ್ಲಟಗಳನ್ನು ಗುರುತಿಸುವಂತೆ ಮನುಷ್ಯ ಹಾಗೂ ಪ್ರಕೃತಿಯ ನಡುವೆ ನಡೆದ ಗುದ್ದಾಟಗಳನ್ನು ಬೆಳಕಿಗೆ ತರುತ್ತವೆ. ಸ್ತ್ರೀಬಲಿಯ ಹಿಂದಿರುವ ಉದ್ದೇಶ ಪುರುಷ ಸ್ವಾರ್ಥದ ವಿವರಗಳೊಂದಿಗೆ ಪುರುಷ ಹಾಗೂ ಪ್ರಕೃತಿ ನಡುವಣ ನಿರಂತರ ಹೋರಾಟವನ್ನು ಕಟ್ಟಿಕೊಡುತ್ತವೆ. ಹೀಗೆ ಮನೆತನದ ಗೌರವಕ್ಕೆ, ಊರ ಒಳಿತಿಗೆ ಜಲಮೂಲಕ್ಕೆ ಬಲಿಯಾಗುವ ಹೆಣ್ಣನ್ನು ದೇವತೆಯಾಗಿಸುವ ಕ್ರಮದಲ್ಲಿಯೇ ಪ್ರಕೃತಿಯ ಮೇಲಿನ ಮನುಷ್ಯನ ಅಸಹಜ ಅತಿಕ್ರಮಣವನ್ನು ಪ್ರತಿಭಟಿಸುವ ನೆಲೆಗಳನ್ನು ಕಾಣಬಹುದು.

ಕೆರೆ, ಬಾವಿ, ತೋಡುವ ಮೂಲಕ ಪ್ರಕೃತಿಯ ಮೇಲೆ ನಿಯಂತ್ರಣ ಸಾಧಿಸಹೊರಡುವ ಮನುಷ್ಯ ಅಹಂಕಾರವನ್ನು ಪ್ರಕೃತಿಯು ನೀರು ಬರದಿರುವ ಮೂಲಕ, ಬತ್ತುವ ಮೂಲಕ, ಅಥವಾ ಕಟ್ಟಿದ ಕಟ್ಟೆ ಒಡೆದು ಹಾಗೂ ಹರಿದು ಹೋಗುವ ಮೂಲಕ ಪ್ರತಿಭಟಿಸುತ್ತದೆ. ನೀರು ಮತ್ತು ಮನುಷ್ಯನ ನಡುವಣ ಈ ಹೋರಾಟವೇ ವಿಸ್ಮಯವಾದದ್ದು. ನೀರು ನೀರಾಗಿದ್ದಾಗ ಅಥವಾ ಸ್ತ್ರೀಪ್ರಧಾನವಾಗಿದ್ದಾಗ ಸಂಘರ್ಷ ಹಾಗೂ ಬಲಿದಾನದ ಕುರುಹುಗಳು ಕಾಣುವುದಿಲ್ಲ. ನೀರು ಹೆಣ್ಣಾಗಿ ಉಪಭೋಗದ ವಸ್ತುವಾಗಿ ಪುರುಷಾಧಿಕಾರದ ನಿಯಂತ್ರಣದ ವ್ಯಾಪ್ತಿಗೆ ಬಂದಾಗ ಅಲ್ಲಿ ಸಂಘರ್ಷ ಕಾಣುತ್ತದೆ. ಇದಕ್ಕೆ ಎಲ್ಲಮ್ಮ ಹಾಗೂ ಜಮದಗ್ನಿಯ ನಿದರ್ಶನ ಉತ್ತಮವಾಗಿದೆ. ನೀರನ್ನು ಎಲ್ಲ ಸಂಸ್ಕೃತಿಗಳು ಮಹಾಮಾತೃದೇವತೆಯಾಗಿ ಸ್ವೀಕರಿಸಿವೆ. ಜೋಗತಿ ಹಾಡಿನಲ್ಲಿ ಕಾಣುವ 'ನೀರಾಗಿರುವ ಜಗಜೋಳಿತೆಮ್ಮ', 'ನದಿಗೊಮ್ಮೆ ಹಡ್ಡಲಗಿ ತುಂಬಿದಿ' ಎನ್ನುವ ಸಾಲುಗಳು ನೀರಿಗೂ ಎಲ್ಲಮ್ಮನಿಗೂ ಇರುವ ಸಂಬಂಧಗಳನ್ನು ಸೂಚಿಸುತ್ತವೆ. ಎಲ್ಲಮ್ಮನ ಕಥೆಯೇ ನೀರಿನಂಥ ಚಲನಶೀಲ ಪ್ರಕೃತಿಯ ನಿಯಂತ್ರಣ ಹಾಗೂ ಅದನ್ನು ಭ್ರಷ್ಟಗೊಳಿಸುವ ಮನುಷ್ಯ (ಜಮದಗ್ನಿ) ಪ್ರಯತ್ನದ (ನೀರು-ಹಾಗೂ ಬೆಂಕಿಯ ಸಂಘರ್ಷ, ಪುರುಷ-ಪ್ರಕೃತಿ ಸಂಘರ್ಷ) ಸಂಕಥನವಾಗಿದೆ. ನೀರು ಅಧೋಮುಖ ಚಲನೆಯುಳ್ಳದ್ದಾದರೆ ಅಗ್ನಿ ಊರ್ಧ್ವಮುಖ ಚಲನೆಯುಳ್ಳದ್ದು. ಆದರೂ ಕೃಷಿ ಸಂಸ್ಕೃತಿಯಲ್ಲಿ ಎರಡಕ್ಕೂ ಸ್ಥಾನವಿದೆ. ಪುರುಷನ ಅಹಂಕಾರ ಹಾಗೂ ನಿಯಂತ್ರಣದ ಹಪಾಹಪಿಯನ್ನು ಪ್ರತಿಭಟಿಸುವುದು, ಪುರುಷ ಮತ್ತೆ ಮತ್ತೆ ಅದರ ನಿಯಂತ್ರಣಕ್ಕೆ ಹಾತೊರೆಯುವುದು ತನ್ನ ಯಶಸ್ಸಿಗೆ ಹೆಣ್ಣನ್ನೆ ಬಲಿಯಾಗಿ ನೀಡುವುದು, ಅದನ್ನು ಲೋಕಕಲ್ಯಾಣ ಹಾಗೂ ತ್ಯಾಗದ ಹೆಸರಿನಲ್ಲಿ ಸಮರ್ಥಿಸಿಕೊಳ್ಳುವ ಸಂಗತಿಗಳು ಎಲ್ಲವೂ ಒಂದು ಮಾನವ ಚರಿತ್ರೆಯ ಕಥನವನ್ನು ಕಟ್ಟಿಕೊಡುವಂಥವು.

**ಜಲ ಮೂಲಗಳ ನಿರ್ಮಾಣ ಹಾಗೂ ಪುಣ್ಯ ಪ್ರಾಪ್ತಿ**

ಜನಪದ ಸಂಸ್ಕೃತಿಯಲ್ಲಿ ಕೆರೆ ಕಟ್ಟೆ ಕಟ್ಟಿಸುವುದು ಸ್ವಜನ ಅನ್ನಾಧಾರ ಹಾಗೂ ಸ್ವಾವಲಂಬಿತನದ ಮೂಲವಾಗಿಯೇ ಕಂಡುಬರುತ್ತದೆ. ಸಮುದಾಯದ ಉಪಯೋಗಕ್ಕಾಗಿ, ಪುಣ್ಯಕಾರ್ಯದ ಭಾಗವಾಗಿ ಇವುಗಳ ನಿರ್ಮಾಣ ನಡೆದಿದೆ. ಇಂದಿನ ಮಾರುಕಟ್ಟೆ ಆಧಾರಿತ ನೀರಾವರಿಯ ಕಲ್ಪನೆ ಅವರಿಗಿರಲಿಲ್ಲ. ಆದರೂ




ಸಾರ್ವಜನಿಕ ಬಳಕೆ ಹಾಗೂ ಸಂಪನ್ಮೂಲದ ಅಭಿವೃದ್ಧಿಗಾಗಿ ಇಂಥ ಕಾರ್ಯಗಳು ನಡೆದಿದ್ದು ಕಾಣಬರುತ್ತದೆ. ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಉತ್ಪಾದಿಸಲು ವಿಜಯನಗರ ಅರಸರು ಭೂಮಿಯನ್ನು ಕೃಷಿಗೆ ಒಳಪಡಿಸಿದರು. ಇವುಗಳಿಗೆ ನೀರನ್ನು ಪೂರೈಸಲು ಕೃತಕ ಜಲಸಂಗ್ರಹಗಳಾದ ಕೆರೆ ಹಾಗೂ ಬಾವಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಿಸಿದ್ದು ಕಾಣಬರುತ್ತದೆ.

ಕೆರೆ ಹೊನ್ನಮ್ಮ ಲಾವಣಿಯಲ್ಲಿ ಬರುವಂತೆ:

*ಒಂದು ಕೆರೆಯನಾದರೂ ಗೊರಿಸಿ*
*ಪುಣ್ಯವಾ ಪಡೆಯುವೆನು*
*ಒಂದು ಕೆರೆಯ ಗೋರುವುದಕೆ*
*ಬೆಲೆಯೇನು ಒಡ್ಡಾ*
*ಅಡ್ಡ ಆರು ಮಾರು ಅದು*
*ಉದ್ದ ಒಂಭತ್ತು ಮಾರು*
*ಹನ್ನೆಲ್ಡು ಆಳುದ್ದ*
*ನೀನು ಕೆರೆಯ ಗೊರೆಯಬೇಕು*

------------------

*ಹನ್ನೆಲ್ಡಾಳುದ್ದ ಕೆರಿಯಾನೆ, ಗೊರಿಯಾರು*
*ಜಲವಾನೆ ಬರನಿಲ್ಲ*
*ಬುದ್ಧಿವಂತ ಒಡ್ಡಗೌಡ ಚಿಂತಿಯ ಮಾಡ್ಯಾನು*
*ಇಂಥ ಕೆರೆಯೇಟ ಗೊರಿದೇನೊ*
*ಬಾವೇಟ ತೆಗಿದೀನೊ*
*ನಾನು ಕೆರಿಯಾನೆ ಗೊರಿಸಿದಕೆ*
*ಜಲವೇ ಬರಲಿಲ್ಲ*

-----------

*ಕೆರೆಯಾನೆ ಗೊರಸಿ*
*ನನ್ನ ಆಹುತಿ ಹಿಡಿದವನೆ*

ಬಾಣಾವತಿ ದೊರೆ ಎನ್ನುವ ಲಾವಣಿಯಲ್ಲಿ ಬರುವಂತೆ :

*ಲೋಕಾದ ಜನರೆಲ್ಲ ಏನೆಂದು ಹೇಳಾರು*
*ಬಾಣಾವತಿ ದೇಶ ಬಾಳ ದೊಡ್ಡದು*
*ಒಂದು ಬಾವಿ ತೆಗಿಸಿಲ್ಲ ಒಂದು ರುಕ್ಷ ಹಾಕಿಸಿಲ್ಲ*
*ಬಂದ ಜನ ನೀರಾ ಕುಡಿಯಾನಿಲ್ಲ ನೆರಳಾ ಸೇರಾನಿಲ್ಲ*
*ಇವರು ಪುಣ್ಯ ಪಡೆಯನಿಲ್ಲ*

-----------------

*ಜನಕಾಗಿ ಬಾವಿ ತೆಗಿಸುತಾನೆ*
*ಹಣ್ಣಹಾಲು ಕೊಡಿಸಿ ಮೂರು ಮಾತನಾಡುತಾರೆ*
*ಕೇಳ್ರೋ ಒಡ್ಡಗೌಡ*
*ಅಡ್ಡ ಮೂರು ಮಾರು ಉದ್ದ ಆರು ಮಾರು*
*ಹನ್ನೆರಡು ಆಳುದ್ದ ಬಾವಿ ತೆಗಿಬೇಕು*
*ಹೇ ರುಕ್ಷ ಹಾಕಬೇಕು*

– ಮೇಲ್ಕಾಣಿಸಿದ ಎರಡೂ ಲಾವಣಿಗಳ ಮುಖ್ಯ ಉದ್ದೇಶ ಜನಕಲ್ಯಾಣ. ಬಾಯಾರಿದ ಜನಕ್ಕೆ ನೀರು, ಹಸಿದ ಜನಕ್ಕೆ ಅನ್ನ, ಬಿಸಿಲಿಂದ ಬಸವಳಿದ ಜನಕ್ಕೆ ನೆರಳು ಇವು ಆ ಕಾಲದ ಸಾಮಾಜಿಕ ಮೌಲ್ಯಗಳಾಗಿದ್ದವು. ಊರಗೌಡ ಅಥವಾ ಪ್ರಜಾಪಾಲಕನಾದ ಪ್ರಭು ಪೂರೈಸಬೇಕಿದ್ದ ಪ್ರಮುಖ ಕರ್ತವ್ಯಗಳಿವು. ಜನರ ಮೂಲ ಸೌಕರ್ಯಗಳಿಗಾಗಿ ಮನೆತನದ ಸದಸ್ಯರನ್ನು ಬಲಿಕೊಡಲೂ ಹಿಂಜರಿಯುತ್ತಿರಲಿಲ್ಲ ಎನ್ನುವ ಸಂಗತಿಗಳು ಬರೀ ಆದರ್ಶಗಳು ಮಾತ್ರವಲ್ಲ, ಅವರ ಆದ್ಯತೆಯನ್ನು ಹೇಳುವಂಥವು. ನರಬಲಿ ಹಾಗೂ ಪ್ರಾಣಿಬಲಿ ನೀಡುವ ಇಂಥ ಅನೇಕ ಸಂಗತಿಗಳು ಲಾವಣಿಗಳಲ್ಲಿ ಕಾಣಬರುತ್ತವೆ :

*ಮೂರು ಸಾವಿರ ಒಡ್ಡರ ಕರ್ಸಿ*
*ನಾಲ್ಕು ಸಾವಿರ ಕುಡುಗೋಲು ತರ್ಸಿ*
*ಕಲ್ಲು ಕಲ್ಲಿಗೂ ಕುರಿಯ ಕಡಿಸಯ್ಯೋ*
*ನಾ ನಿಲ್ಲುವಳಲ್ಲ ನಾ ನಿಲ್ಲುವಳಲ್ಲ*

ಬಲಿಯ ಬಗೆಗಿನ ಪರ-ವಿರೋಧದ ಚರ್ಚೆಯ ಸಂಗತಿ ಏನೇ ಇರಲಿ. ನನಗಿಲ್ಲಿ ಮುಖ್ಯವಾಗುವುದು ಜನರ ಹಿತಕ್ಕಾಗಿ ಪ್ರಭು ಅಥವಾ ಮುಖಂಡನಾದವ ತೋರಿಸುವ ಬದ್ಧತೆ, ಸಮರ್ಪಣಾಧೋರಣೆ, ಸ್ವಾರ್ಥ ರಾಜಕಾರಣದ ಇಂದಿನ ದಿನಗಳಲ್ಲಿ ಇದೊಂದು ಹೊಸ ಪಾಠವಾಗಿ ಕಾಣುತ್ತದೆ. ಅಂದರೆ ಜನರ ಬದುಕಲ್ಲಿ ನೀರು ಎನ್ನುವುದು ಬರೀ ಒಂದು ಭೌತಿಕ ಅಗತ್ಯವಾಗಿರದೆ ಅದು ಜೀವಪೋಷಣೆಗೆ ಹಾಗೂ ಸಂವರ್ಧನೆಗೆ ಬೇಕಾದ ಮೂಲಧಾತುವಾಗಿತ್ತು ಎನ್ನುವುದು ಗಮನಾರ್ಹ ಸಂಗತಿ.

'ಬೆಲ್ಲ ಉಪ್ಪಿನ ಜಗಳ' ಎನ್ನುವ ಲಾವಣಿಯೊಂದರಲ್ಲಿ ನೀರಾವರಿ ಬಗ್ಗೆ ಒಂದು ಪ್ರಾಸಂಗಿಕ ಉಲ್ಲೇಖ ಬರುತ್ತದೆ :

*ಬಾವಿ ಕಡಸತಾರ ಸುರಂಗ ಹೊಡಿದ ನನ್ನ*
*ಮದ್ದ ಹಾರಿಸಿ*
*ನನ್ನ ನೀರೊಳು ಬೆಳೆದು ಬಂದೆಲ್ಲೊ ನೀ ಕೇಳಾ*
*ಪರದೇಸಿ*

– ಎಂದು ಉಪ್ಪು ಬೆಲ್ಲಕ್ಕೆ (ಕಬ್ಬು) ಹೇಳುತ್ತದೆ.

ಹಾಗೆ 'ಅಣ್ಣ ತಂಗಿ' ಎನ್ನುವ ಲಾವಣಿಯಲ್ಲಿ ತವರಿಗೆ ಕರೆಯಲು ಬಂದ ಅಣ್ಣನಿಗೆ ತಂಗಿ ಹೇಳುವ ಮಾತುಗಳು ಹೀಗಿವೆ :

*ಕಬ್ಬು ಕಡಿಯಾಲೈದೆ ಕಡಲೆ ಕೀಳಾಲೈದೆ*
*ರಾಜುಣುದು ಗದ್ದೆ ಕೊಯಿಲಾದ। ಅಣ್ಣಯ್ಯ*
*ನಾನೆಂಗೆ ಬರಲೋ ಮದವೀಗೆ*
*ಕಬ್ಬು ನಾ ಕಡಿಸುವೆ ಕಡಲೆ ನಾ ಕೀಳಿಸುವೆ*
*ರಾಜುಣುದು ಗದ್ದೆ ಕೊಯಿಸುವೆ। ತಂಗೆಮ್ಮಾ*
*ನೀ ಬೇಗನೊಲ್ಡಮ್ಮ ಮದವೀಗೆ।*

– ಇಂಥ ಅಪರೂಪವಾದ ಲಾವಣಿಗಳಲ್ಲಿ ಬಾವಿ ನೀರಾವರಿ ಹಾಗೂ ಕಬ್ಬು ಬೆಳೆಯ ಕುರಿತು ಪ್ರಾಸಂಗಿಕ ಉಲ್ಲೇಖಗಳು ಸಿಗುತ್ತವೆಯೇ ವಿನಾ ನೀರಾವರಿ ಪ್ರಧಾನವಾದ ಲಾವಣಿಗಳು ದೊರೆಯದಿರುವುದು ಸೋಜಿಗ ಎನಿಸುತ್ತದೆ. ಅಶೋಕನ ಕಾಲದಿಂದ ಇವತ್ತಿನವರೆಗೂ

ಶಾಸನ ಹಾಗೂ ಸಾಹಿತ್ಯ ಕೃತಿಗಳಲ್ಲಿ ಕೆರೆ, ಬಾವಿ, ತಟಾಕ, ಇತ್ಯಾದಿ ಜನಕಲ್ಯಾಣದ ಕೆಲಸಗಳ ಉಲ್ಲೇಖ ದೊರೆಯುತ್ತವೆ. ಆದರೆ ಇಂಥ ಅನ್ನ ಹಾಗೂ ಆರ್ಥಿಕ ಮೂಲವಾದ ಸಂಗತಿಗಳ ಕುರಿತು ಪೂರ್ಣಪ್ರಮಾಣದ ಲಾವಣಿಗಳು ದೊರೆಯುವುದಿಲ್ಲ.

**ಹೆಣ್ಣು-ನೀರು**

ಮೇಲ್ಕಾಣಿಸಿದ ಕೆರೆಹೊನ್ನಮ್ಮ, ಮದಗದ ಕೆಂಚಮ್ಮ, ಕೆರೆಗೆ ಹಾರ, ಮಲಪುರಿ ಇತ್ಯಾದಿ ಲಾವಣಿಗಳಲ್ಲಿ ಪ್ರಕೃತಿ - ಪುರುಷರ ಸಂಘರ್ಷದ ನೆಲೆಗಳನ್ನೇ ಕಾಣುತ್ತೇವೆ. ಬಾಯಾರಿ ಬಂದ ಮೂಡಲ ದೇಶದ ಒಡ್ಡರಿಗೆ ಕೆರೆ ಹೊನ್ನಮ್ಮ ಮಜ್ಜಿಗೆ ನೀಡುತ್ತಾಳೆ. ಪ್ರತಿಯಾಗಿ ಒಡ್ಡರು ಕೆರೆ ಕಡಿದು ತಮ್ಮ ಋಣ ಮುಟ್ಟಿಸುವ ಮಾತನ್ನು ಮಳಲೆ ಮಲ್ಲೇಗೌಡನ ಮುಂದೆ ಪ್ರಸ್ತಾಪಿಸುತ್ತಾರೆ. ಒಪ್ಪಂದದಂತೆ ಅಡ್ಡ ಆರು ಮಾರು, ಉದ್ದ ಒಂಭತ್ತು ಮಾರು, ಹನ್ನೆರಡು ಆಳುದ್ದ ಕೆರೆಯನ್ನು ತೋಡುತ್ತಾರೆ. ಜಲ ಬರುವುದಿಲ್ಲ. ಒಡ್ಡಗೌಡನ ಹೆಂಡತಿಯನ್ನು ಕೆರೆ ಆಹುತಿ ಕೇಳುತ್ತದೆ. ಹೆದರಿದ ಒಡ್ಡ ಪರಾರಿಯಾಗುತ್ತಾನೆ. ಆಗ ಗೌಡರು ಜೋತಿಷ್ಯ ಕೇಳಲು, ಗೌಡರ ಕಿರುಬೆರಳ ಆಹುತಿಕೊಟ್ಟರೆ ಕೆರೆ ತುಂಬಾ ನೀರು ಬರುತ್ತದೆನ್ನುವ ಉತ್ತರ ಬರುತ್ತದೆ. ಗೌಡರು ಇದಕ್ಕೆ ಒಪ್ಪುವುದಿಲ್ಲ. ಕೊನೆಗೆ ಕಿರುಬೆರಳಿನ ಬದಲಾಗಿ ಹಿರಿಸೊಸೆ ದೊಡ್ಡಹೊನ್ನಮ್ಮನನ್ನು ಕೆರೆಗೆ ಹಾರವಾಗಿಸುತ್ತಾರೆ. ಕೆರೆಯಲ್ಲಿ ನೀರು ಬರುತ್ತದೆ.

ಬೆರಳು ನೀಡುವ ಹಾಗೂ ನಿರಾಕರಿಸುವ ಸಂಕಥನ ಕನ್ನಡ ಸಂಸ್ಕೃತಿಯಲ್ಲಿ ಅಂಥ ಚರ್ಚೆಗೆ ಒಳಗಾಗಿಲ್ಲ. ಪುರುಷನ ಬೆರಳಿಗಿರುವ ಮಹತ್ವ, ಅಂದರೆ ಕೊನೆಯ ಬೆರಳಾದ ಕಿರುಬೆರಳು ಅಥವಾ ಹೆಬ್ಬೆರಳು ಇವುಗಳಿಗಿರೊ ಬೆಲೆ ಒಂದು ಹೆಣ್ಣಿಗಿಲ್ಲವೆ? ಅಷ್ಟು ನಿಕೃಷ್ಟವೆ ಹೆಣ್ಣು? ಹೆಚ್ಚಿನ ಸಂದರ್ಭದಲ್ಲಿ ನಿರುಪಯುಕ್ತತೆಯನ್ನೇ ಪ್ರತಿನಿಧಿಸುವ ಈ ಬೆರಳಿನ ಪ್ರತಿನಿಧೀಕರಣ ಹೆಣ್ಣಿನ ಬಗೆಗಿದ್ದ ನಿರುಪಯುಕ್ತತೆಯನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಜನಪದ ಸಂಸ್ಕೃತಿಯಲ್ಲಿ ಕಿರಿಯ ಹೆಣ್ಣು ಅಥವಾ ಗಂಡು ತ್ಯಾಗ ಬಲಿದಾನಗಳ ಪ್ರತೀಕವಾಗಿಯೇ ಬರುತ್ತಾರೆ. ಇಲ್ಲಿ ಬಲಿಯಾಗುವ ಹೆಣ್ಣುಗಳೆಲ್ಲವೂ ಪರರ ಮಕ್ಕಳು. ಅಂದರೆ ಸೊಸೆಯಂದಿರು. ಸ್ವತಃ ಗೌಡನ ಕರುಳ ಕುಡಿಗಳಲ್ಲ ಎಂಬುದು ಗಮನಾರ್ಹ. 'ಹೆರವರ ಮಕ್ಕಳ ಬಾವಿಗೆ ಬಿಟ್ಟು ನೆಲಿ ನೋಡಿದರು' ಎನ್ನುವ ಗಾದೆಯಿದೆ. 'ಸೊಸೆ ಮಗಳಾಗಲಾರಳು', 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎನ್ನುವ ಮಾತುಗಳು ಬಲಿಯಾಗುವ ಹೆಣ್ಣುಗಳ ಹಾಗೂ ಅವರ ಕೌಟುಂಬಿಕ ಸದಸ್ಯರ ಅಸಹಾಯಕತೆಯ ತೋರಿಕೆಯಲ್ಲಿ ಎದ್ದುಕಾಣುತ್ತವೆ. ಸಾವನ್ನು ಬೆನ್ನಿಗೆ ಕಟ್ಟಿಕೊಂಡಿದ್ದರೂ ಹೊನ್ನಮ್ಮ, ಭಾಗೀರಥಿಯಂಥವರು ತಂದೆ-ತಾಯಿ ಹಾಗೂ ಗೆಳತಿಯರಿಗೆ ಯಾರಿಗೂ ಹೇಳುವುದಿಲ್ಲ. ಸಾವು ಕಣ್ಮುಂದೆ ನಿಂತಿದ್ದರೂ ಕೂಡ ತುಟಿ ಬಿಚ್ಚುವುದಿಲ್ಲ. ಈ ಸಂದರ್ಭದಲ್ಲಿ ಪರಸ್ಪರರ ಮಾನಸಿಕ ತೊಳಲಾಟ, ಸಂಕಟ ಅವರೆಲ್ಲರೂ ಅವಡುಗಚ್ಚಿಹಿಡಿದ ದುಮ್ಮಾನದಲ್ಲಿ ವ್ಯಕ್ತವಾಗುತ್ತವೆ. ಅದೊಂದು ಅರಣ್ಯ ರೋದನ, ಮೌನಯುದ್ಧ. ಅವರ ನಡೆನುಡಿಗಳಲ್ಲಿ ಕಾಣುವ ಅಸಹಾಯಕ ಪ್ರತಿಭಟನೆಗಳು ಗಮನಾರ್ಹವಾದುವು. ಮಹಿಳೆಯ ಇಂಥ ಸಹಜ ಸೂಕ್ಷ್ಮ ಸಂವೇದನೆಗಳನ್ನು ಅವಳ ದೌರ್ಬಲ್ಯವನ್ನಾಗಿಸಿ ಈ ಭಾವದೆಳೆಗಳನ್ನೇ ಹೆಣ್ಣಿನ ಜೀವನದ ಉರುಳುಗಳನ್ನಾಗಿ ಬಳಸುತ್ತ ಬರಲಾಗಿದೆ. ಭಾಗೀರಥಿ ಲಾವಣಿಯಲ್ಲಿ ಸಿಗುವಂತೆ :

*ಬಿರಿಬಿರಿ ನಡದಾಳು ಬಂಗಾರದ ಬಟ್ಲ ತಗೊಂಡಳು*
*ಒಂದ ಮೆಟ್ಲೇರುದುಕ ಪಾದ ಮುಣುಗಿಸ್ಯಾಳು ಗಂಗಿ*
*ಮೂರು ಮೆಟ್ಲೇರುದಕ ಮೊಣಕಾಲಿಗಿ ಬಂದಳು ಗಂಗಿ*
*ನಾಲ್ಕು ಮೆಟ್ಲೇರುದಕ ನಡುಮಟ ಬಂದಳು ಗಂಗಿ*
*ಐದು ಮೆಟ್ಲೇರುದಕ ತುಂಬಿ ಹರಿದಾಳು ಗಂಗಿ*
*ಸಣ್ಣ ಸೊಸಿ ಭಾಗೀರಥಿ ಕೆರೆಗ್ಹಾರವಾದಾಳು*

– ಈ ಲಾವಣಿಯಲ್ಲಿ ಕಾಣುವ 'ಬಿರಿಬಿರಿ ನಡೆದಾಳು' ಎನ್ನುವ ಪದಗಳಲ್ಲಿರುವ ಸಿಡಿಮಿಡಿಯೇ ಒಂದು ಮೌನ ಪ್ರತಿಭಟನೆಯಂತಿದೆ. ವ್ಯವಸ್ಥೆಗೆ ತೋರಿದ ಸವಾಲಾಗಿದೆ. ಕುಣಿಗಲ್ ಕೆರೆ ಲಾವಣಿಯಲ್ಲಿ ಕಾಣುವ :

*ಗಂಗಮ್ಮ ಗಂಗಮ್ಮ ನನಮ್ಯಾಲಿ ಹರಿಯೇ*
*ನೀ ಕಣಕಾಲಿ ಬಂದೆ ಗರಿಗೆ*
*ನನ ಮಡಿಗಂಟ ಬರಲಿಲ್ಲ*
*ಮಡಿಗಂಟ ಬಂದೆ ಗಂಗೆ*
*ನನ ನಡಿಗಂಟ ಬಾರವ್ವ*
*ನಡಿಗಂಟ ಬಂದ*
*ನನ್ನ ಎದೆಗಂಟ ಬಾರವ್ವ*
*ಎದೆಗಂಟ ಬಂದೆ ಗಂಗೆ*
*ನನ್ನ ಕತ್ತಿನ ಶಿರಕೆ ಬಾರವ್ವ*
*ನನ್ನ ಕತ್ತಿಗೆ ಬಂದೆವ್ವ*
*ನನ ತಲಿ ಮ್ಯಾಲ ಹರಿಯವ್ವ*

ಹೀಗೆ ಗಂಗೆ ಕ್ರಮವಾಗಿ ಮೇಲೇರಿ ಮಾದೇವಿಯನ್ನು ಮಡಿಲಲ್ಲಿ ಸೇರಿಸಿಕೊಳ್ಳುತ್ತಾಳೆ. ನೀರು ಸ್ವಭಾವತಃ ಅಧೋಮುಖ ಹರಿವ ಗುಣವುಳ್ಳದ್ದು. ವಿಶೇಷವೆಂದರೆ ಇಂಥ ಹಲವಾರು ಲಾವಣಿಗಳಲ್ಲಿ ಕಾಣುವ ನೀರಿನ ಮೇಲ್ಮುಖ ಚಲನೆ ಹಾಗೂ ಸಮೃದ್ಧಿಯ ಸಂಗತಿಗಳು ಹೊಸ ಅರ್ಥವನ್ನು ಹೊರಹೊಮ್ಮಿಸುತ್ತವೆ. ಪುರುಷಾಧಿಕಾರಕ್ಕೆ ನೀರು ಎನ್ನುವುದು ಬಳಕೆ ಅಥವಾ ಅಧೋಮುಖವಾದ ಸಂಗತಿ. ಅದೇ ಜನಪದ ಸಂಸ್ಕೃತಿಗಳಲ್ಲಿ ಅದು ಊರ್ಧ್ವಮುಖಿ ಹಾಗೂ ಸಮೃದ್ಧಿಯ ಪ್ರತೀಕವಾಗಿರುವಂಥದ್ದು. ನೀರಿನ ಒಳ ಮತ್ತು ಹೊರಗಿನ ಸಂಗತಿಗಳು ಅಲ್ಲಿ ಜೀವ ಸಮೃದ್ಧಿಯ ಹಾಗೂ ಸಂರಕ್ಷಣೆಯ ನೆಲೆಗಳಾಗಿವೆ. ಜೀವಜಾಲದ ಪೋಷಣೆ ಸಾಧ್ಯವಾಗುವುದೇ ನೀರಿನ ಸಂಚಲನಗುಣದಲ್ಲಿ. ಮೊದಲೇ ಗುರುತಿಸಿದಂತೆ 'ಬಲಿ' ಎನ್ನುವುದು ಪುರುಷಾಧಿಕಾರದ ಸ್ವಾರ್ಥಮೂಲ ಕಲ್ಪನೆಯಾಗಿದ್ದರೂ ಬಲಿಯಾಗುವ ವಸ್ತು ತೇಜೋಮಯವಾಗಿ ಮೇಲ್ಮುಖ ಚಲನೆಯೊಂದಿಗೆ ಸಮಷ್ಟಿ ಅಗತ್ಯವಾಗಿ ರೂಪತಾಳುತ್ತದೆ. 'ಉಕ್ಕಿ ಹರಿಯುವ' ನೀರಿನ ಗುಣಕ್ಕೆ ಸೃಷ್ಟಿಯ ಶಕ್ತಿಯಿದ್ದಂತೆ ನಾಶದ ಶಕ್ತಿಯೂ ಇದೆ. ಸಲಹುವ ಶಕ್ತಿಯಿದ್ದಂತೆ ಆಪೋಶನ ಮಾಡಿಕೊಳ್ಳುವ ಶಕ್ತಿಯೂ ಇದೆ ಎನ್ನುವುದನ್ನು ಹೆಣ್ಣಿನ ಬಲಿಯ ಸಂಕಥನಗಳು ಎತ್ತಿ ತೋರಿಸುತ್ತವೆ. ನೀರಿನ ಇಂಥ ಸಂಗ್ರಹ ಹಾಗೂ ಮೇಲ್ಮುಖ ಚಲನೆಗಳೇ ಮಾನವ ನಾಗರಿಕತೆಯ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸುತ್ತ ಬಂದಿವೆ ಎಂಬುದು ಗಮನಾರ್ಹ



ಒಡ್ಡರ ಬೋಯಿ, ಮದಗದ ಕೆಂಚವ್ವ, ಮಲಪುರಿ, ಕೆರೆಗೆ ಹಾರ, ಕೆರೆಹೊನ್ನಮ್ಮ ಇತ್ಯಾದಿ ಲಾವಣಿಗಳಲ್ಲಿ ಹೆಣ್ಣು ಬಲಿಯಾಗುವುದು ಒಂದು ಸತ್‌ಸಂಪ್ರದಾಯ ಎನ್ನುವಂತೆ ವಿವರಿಸಲಾಗಿದೆ. ಉದ್ದೇಶಿತ ಸ್ಥಳದಲ್ಲಿ ನೀರು ಬಾರದಿದ್ದಾಗ ಹಾಗೂ ನೀರು ನಿಲ್ಲದಿದ್ದಾಗ ಶಾಸ್ತ್ರ ಕೇಳುವ ಸಂಪ್ರದಾಯ ಹಾಗೂ ಪರಿಹಾರ ಹುಡುಕುವ ಮಾರ್ಗಗಳು ತುಂಬಾ ಪಕ್ಷಪಾತದಿಂದ ಕೂಡಿದಂಥವು. ಶಾಸ್ತ್ರ ಹೇಳುವುದೊಂದಾದರೆ ಪರಿಹಾರ ನೀಡುವುದು ಮತ್ತೊಂದು. ಸಾರ್ವಜನಿಕರ ಉಪಯೋಗಕ್ಕಾಗಿ ನೆಲೆನಿಲ್ಲಿಸುವ ನೀರಿನ ಮೂಲಗಳಿಗೆ ಬಲಿ ನೀಡುವ ಪ್ರಸಂಗಗಳು ಬಹಳ ಬರ್ಬರವಾದಂಥವು. ಈ ಸಂದರ್ಭದಲ್ಲಿ ಬಲಿಯಾಗುವ ಹೆಣ್ಣಿನ ಮನದಾಳದಲ್ಲಿ ನಡೆಯುವ ಸಂಘರ್ಷಗಳಿಗೆ ಅವಳ ಪ್ರತಿಕ್ರಿಯೆಗಳಿಗೆ ಕಾಸಿನ ಕಿಮ್ಮತ್ತೂ ಇಲ್ಲ. ಕಾರಣ ಪ್ರಭುತ್ವ ಹಾಗೂ ಪುರೋಹಿತಶಾಹಿ ದಬಾವಣೆಗಳು. ಆದರೆ ಹೆಣ್ಣು ಹಾಗೂ ನೀರಿನ ಪುರುಷಪ್ರಧಾನ ಯಜಮಾನಿಕೆಯಲ್ಲಿ ರೂಪಗೊಂಡ ನಿಯಂತ್ರಣಗಳು ಹಾಗೂ ವಿಸ್ತರಣೆ ಯೋಜನೆಗಳು ನೀರಿನ ಹಾಗೂ ಭೂಮಿಯ ಸಾವಯವ ಅಂಶವಾದ ವೈವಿಧ್ಯತೆ, ಸಮಗ್ರತೆ ಹಾಗೂ ಪುನರುತ್ಪಾದನೆಯ ಸಾಮರ್ಥ್ಯವನ್ನು ನಾಶಗೊಳಿಸುತ್ತ ಬಂದಿವೆ. ವೈವಿಧ್ಯತೆಯ ಈ ನಾಶ ಜೀವ ಪೋಷಣೆಯನ್ನು ಸಾಧ್ಯಗೊಳಿಸುವ ಸಂಗತಿಗಳ ಮೇಲೆ ಹೆಂಗಸರಿಗಿದ್ದ ನಿಯಂತ್ರಣವನ್ನು ನಾಶಗೊಳಿಸಿವೆ. ಬೃಹತ್ ನೀರಾವರಿ ಯೋಜನೆಗಳು, ಸಣ್ಣ ನೀರಾವರಿ ಯೋಜನೆಗಳು ಇಂದು ಭೂಮಿಯ, ಅರಣ್ಯ ಹಾಗೂ ಬೇಸಾಯದ ರೀತಿಗಳನ್ನು ದಾರಿತಪ್ಪಿಸಿವೆ. ವೈವಿಧ್ಯಮಯ ಭೂಮಿ ಹಾಗೂ ಅದರ ವೈವಿಧ್ಯಮಯ ಉತ್ಪಾದನಾ ಮಾರ್ಗಗಳ ನಾಶದಿಂದಾಗಿ ಒಂದು ಸ್ವಾವಲಂಬಿ ಸಾವಯವ ಸಮಾಜ ಕ್ಷೀಣಗೊಂಡಿತೆಂದೇ ಹೇಳಬೇಕು. ಹಿಂದಿನ ಕೃಷಿ ಹಾಗೂ ನೀರಾವರಿ ಚಟುವಟಿಕೆಗಳಿಗಿದ್ದ ಸಾರ್ವತ್ರಿಕ ಹಾಗೂ ಸಾವಯವ ಗುಣ ಇಂದಿನ ಕೃಷಿ ನೀತಿಗಳಿಗಿಲ್ಲವಾಗಿ ನೀರು, ಭೂಮಿ ಹಾಗೂ ಅನ್ನದಂತಹ ಜೀವ ಪೋಷಕಗಳು, ವಹಿವಾಟಿನ ಸರಕುಗಳಾಗಿ ಪರಭಾರೆಯ ವಸ್ತುಗಳಾಗಿ ಸ್ಥಾನಪಡೆದಿವೆ.

**ಡಾ|| ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ- ೫೮೩೨೭೬

# ಪಾಪರೆಡ್ಡಿಗಳ ಪ್ರಪಂಚ

ಮನು ವಿ. ದೇವದೇವನ್

ಸ್ಥಳನಾಮಗಳ ಅಧ್ಯಯನದ ದೃಷ್ಟಿಯಿಂದ ಬೆಂಗಳೂರು ನಗರದಲ್ಲಿ ಕಂಡುಬರುವ ವೈವಿಧ್ಯತೆ ಗಮನ ಸೆಳೆಯುವಂಥದ್ದು. ಕಳೆದ ನಾಲ್ಕೈದು ಶತಮಾನಗಳಲ್ಲಿ ಇಲ್ಲಿ ಬೆಳೆದುಬಂದ ಆವಾಸ ಕೇಂದ್ರಗಳು ನೂರಾರು ವಿಶಿಷ್ಟವಾದ ಹೆಸರುಗಳನ್ನು ಮೈಗೂಡಿಸಿಕೊಂಡಿವೆ. ಅಗರ, ಆಡುಗೋಡಿ, ಉಲ್ಲಾಳು, ಕೂಡ್ಲು, ಕೆಂಗೇರಿ, ಚಿಕ್ಕಬಿದಿರಕಲ್ಲು, ತಿಂಡ್ಲು, ದೊಡ್ಡನೆಕುಂಡಿ, ನಾಗವಾರ, ಪೀಣ್ಯ, ಫೈಜ಼ಾಬಾದ್, ಬನಶಂಕರಿ, ಬಸವನಗುಡಿ, ಬಾಣಸವಾಡಿ, ಬೈರತಿ, ಮಡಿವಾಳ, ಮಾದಾವರ, ಯಲಹಂಕ, ಶಿನಿವಾಗಿಲು, ಸಾರಕ್ಕಿ, ಸುಂಕದಕಟ್ಟೆ, ಹುಳಿಮಾವು, ಹೆಬ್ಬಾಳ, ಹೊರಮಾವು – ಹೀಗೆ ಕೆಲವೊಮ್ಮೆ ಸ್ಪಷ್ಟವಾದ ಅರ್ಥ ನೀಡುವ, ಕೆಲವೊಮ್ಮೆ ಅರ್ಥದ ಒಡಪನ್ನು ಬಿಟ್ಟುಕೊಡದ ನೂರಾರು ಹೆಸರುಗಳು ಬೆಂಗಳೂರಿನ ಉದ್ದಗಲಕ್ಕೂ ಚೆಲ್ಲಿಕೊಂಡಿವೆ. ಆಧುನಿಕ ಯುಗದ ಸ್ಥಳನಾಮಗಳಲ್ಲಿ ಕಾಲನಿ, ಲೇಔಟ್, ಗಾರ್ಡನ್, ನಗರ ಮುಂತಾದ ಪ್ರಯೋಗಗಳ ಬಳಕೆ ಹೇರಳವಾಗಿ ಕಂಡುಬರುತ್ತದೆ. ಕಾಲನಿಗಳಲ್ಲಿ ಡಿಫೆನ್ಸ್ ಕಾಲನಿ, ಬ್ಯಾಂಕ್ ಕಾಲನಿ, ಎನ್. ಆರ್. ಕಾಲನಿ, ಲೇಔಟ್‌ಗಳಲ್ಲಿ ಚಂದ್ರಾ ಲೇಔಟ್, ಮಹಾಲಕ್ಷ್ಮಿ ಲೇಔಟ್, ಭದ್ರಪ್ಪ ಲೇಔಟ್, ಗಾರ್ಡನ್‌ಗಳಲ್ಲಿ ವಿಲ್ಸನ್ ಗಾರ್ಡನ್, ಮಾರಪ್ಪ ಗಾರ್ಡನ್, ಪಿಳ್ಳಣ್ಣ ಗಾರ್ಡನ್ ಮತ್ತು ನಗರಗಳಲ್ಲಿ ಜಯನಗರ, ಇಂದಿರಾನಗರ, ಸಂಜಯನಗರ ಇವುಗಳನ್ನು ಉದಾಹರಣೆಗಳಾಗಿ ಹೆಸರಿಸಬಹುದು. ಹಾಗೆಯೇ ಶೇಷಾದ್ರಿಪುರಂ, ಶ್ರೀರಾಂಪುರಂ, ಓಕಳಿಪುರಂ ಮುಂತಾದ ಹೆಸರುಗಳಲ್ಲಿರುವ ಪುರಂ ಹಾಗೂ ವಿದ್ಯಾರಣ್ಯಪುರ, ವಸಂತಪುರ, ಆನಂದಪುರದಂತಹ ಹೆಸರುಗಳಲ್ಲಿರುವ ಪುರ ಆಧುನಿಕ ಯುಗದಲ್ಲಿ ಸಾಕಷ್ಟು ಬಳಕೆಯಾಗಿರುವ ಸಂಜ್ಞೆಗಳು. ಪುರವನ್ನು ಹಳೆಯ ಕಾಲದ ಹೆಸರುಗಳಲ್ಲೂ ಕಾಣಬಹುದು. ಉದಾಹರಣೆಗೆ, ಸಿಂಗಾಪುರ, ಬಂಡಾಪುರ, ಬ್ಯಾಟರಾಯನಪುರ. ಬ್ರಿಟಿಷರ ಕಾಲದಲ್ಲಿ ಫ್ರೇಜ಼ರ್ ಟೌನ್, ಕಾಕ್ಸ್ ಟೌನ್, ರಿಚ್ಮಂಡ್ ಟೌನ್ ಮುಂತಾದ ಟೌನ್‌ಗಳ ಸ್ಥಾಪನೆ ನಡೆಯಿತು. ಹತ್ತೊಂಬತ್ತನೇ ಶತಮಾನದವರೆಗಿನ ಸ್ಥಳನಾಮಗಳಲ್ಲಿ ಜಾಲಹಳ್ಳಿ, ಗುಟ್ಟಹಳ್ಳಿ, ಪುಟ್ಟೇನಹಳ್ಳಿಗಳಂತಹ ಹಳ್ಳಿಗಳು ಹಾಗೂ ಹಲಸೂರು, ಬೇಗೂರು, ದೊಮ್ಮಲೂರು ಮೊದಲಾದ ಊರುಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ದೇವಸಂದ್ರ, ಚನ್ನಸಂದ್ರ, ಲಕ್ಕಸಂದ್ರ ಇತ್ಯಾದಿ ಹೆಸರುಗಳಲ್ಲಿ ಕಾಣುವ ಸಂದ್ರ (ಸಮುದ್ರ) ಮತ್ತು ಮತ್ತಿಕೆರೆ, ಅಬ್ಬಿಗೆರೆ, ಗೊಟ್ಟಿಗೆರೆಗಳಲ್ಲಿರುವ ಕೆರೆ ಅಷ್ಟೇ ಜನಪ್ರಿಯವಾದ ಸಂಜ್ಞೆಗಳು. ಇನ್ನು ಚಿಕ್ಕಪೇಟೆ, ಬಳೇಪೇಟೆ, ಚಾಮರಾಜಪೇಟೆಗಳಂಥ ಪೇಟೆಗಳು, ಬಗಲಗುಂಟೆ, ದೊಡ್ಡಕುಂಟೆ, ಕೋಣನಕುಂಟೆಗಳಂಥ ಕುಂಟೆಗಳು, ನಡುಘಟ್ಟ, ಚಲ್ಲಘಟ್ಟ, ಹೆಸರಘಟ್ಟ ಮುಂತಾದ ಘಟ್ಟಗಳು, ಕುಂಬೇನ ಅಗ್ರಹಾರ, ಪರಪ್ಪನ ಅಗ್ರಹಾರ, ಕೆಂಪಾಪುರ ಅಗ್ರಹಾರ ಮೊದಲಾದ ಅಗ್ರಹಾರಗಳು, ಜಿನ್ನಮಂಗಲ, ಕೋರಮಂಗಲ, ಬೆಂಗಳೂರು ನಗರದಿಂದ ಅನತಿ ದೂರದಲ್ಲಿರುವ ನೆಲಮಂಗಲಗಳಂತಹ ಮಂಗಲಗಳು ಗಮನಾರ್ಹವಾದ ಇತರ ಸಂಜ್ಞೆಗಳು. ಆದರೆ ಬೆಂಗಳೂರಿನ ವಿಶೇಷ ಎಂದರೆ ಇಲ್ಲಿ ಹಳ್ಳಿ, ಊರು ಮುಂತಾದವುಗಳಷ್ಟೇ ದೊಡ್ಡ ಪ್ರಮಾಣದಲ್ಲಿ ಪಾಳ್ಯಗಳು ಕಂಡುಬರುವುದು. ಖಲಾಸಿ ಪಾಳ್ಯ ನಮಗೆಲ್ಲ ಸುಪರಿಚಿತ. ಕಾಮಾಕ್ಷಿ ಪಾಳ್ಯದ ಹೆಸರನ್ನೂ ನಾವೆಲ್ಲಾ ಕೇಳಿದ್ದೇವೆ. ಪ್ರಸಿದ್ಧವಾದ ಪಾಳ್ಯಗಳ ಸಾಲಿಗೆ ಸುಲ್ತಾನ್ ಪಾಳ್ಯ, ಮುರುಗೇಶ ಪಾಳ್ಯಗಳಂಥಾ ಇನ್ನೂ ಒಂದೆರಡು ಹೆಸರುಗಳನ್ನು ಸೇರಿಸಬಹುದು. ಇವು ಅಪರೂಪದ ಉದಾಹರಣೆಗಳೇನಲ್ಲ. ನಗರದ ನಕ್ಷೆ ಹಿಡಿದು ಕೂತರೆ ಗೋಚರವಾಗುವ ಚಿತ್ರ ದಂಗುಬಡಿಸುವಂಥದ್ದು. ಕಣ್ಣು ಹಾಯಿಸಿದಲ್ಲೆಲ್ಲಾ ಪಾಳ್ಯಗಳದ್ದೇ ಝುಂಡೆ. ನಗರದ ನೈಋತ್ಯ ಕೋಣದಲ್ಲೇ ಒಂದು ಡಜ಼ನ್‌ಗಿಂತ ಹೆಚ್ಚಿನ ಪಾಳ್ಯಗಳನ್ನು ಗುರುತಿಸಬಹುದು : ಮುತ್ತಯ್ಯನ ಪಾಳ್ಯ, ಗದ್ದೇಚನ ಪಾಳ್ಯ, ನಾಗೇಗೌಡನ ಪಾಳ್ಯ, ಗಾಣಿಗರ ಪಾಳ್ಯ, ಚಿಕ್ಕೇಗೌಡನ ಪಾಳ್ಯ, ಹುಚ್ಚಪ್ಪನ ಪಾಳ್ಯ, ಗಟ್ಟಿಗೇರಿ ಪಾಳ್ಯ, ಕರಿಯನ ಪಾಳ್ಯ, ಸಣಕಲು ಪಾಳ್ಯ, ಕೋಡಿ ಪಾಳ್ಯ, ಅಂಚೆ ಪಾಳ್ಯ, ಗೌಡನ ಪಾಳ್ಯ, ಪಂತರ ಪಾಳ್ಯ, ಒಡ್ಡರ ಪಾಳ್ಯ, ದುವಾಸಾಬ್ ಪಾಳ್ಯ, ಮರಿಯಪ್ಪನ ಪಾಳ್ಯ ಹೀಗೆ. ಅಲ್ಲಿಂದ ಉತ್ತರಕ್ಕೆ, ಅಂದರೆ ನಗರದ ಪಶ್ಚಿಮ ಭಾಗಕ್ಕೆ ಹೊರಟಾಗ ಎದುರಾಗುವುದು ಇಂಥದ್ದೇ ದೃಶ್ಯ. ಪಾಪರೆಡ್ಡಿ ಪಾಳ್ಯ, ವೀರನ ಪಾಳ್ಯ, ಪಟ್ಟೇಗಾರ ಪಾಳ್ಯ, ಕೊಟ್ಟಿಗೆ ಪಾಳ್ಯ, ತಿಗಳರ ಪಾಳ್ಯ, ಮೂಡಲ ಪಾಳ್ಯ, ಮತ್ತೊಂದು ಒಡ್ಡರ



ಪಾಳ್ಯ ಮೊದಲಾದ ಹತ್ತಾರು ಪಾಳ್ಯಗಳಿವೆ ಅಲ್ಲಿ. ಉತ್ತರದ ಯಲಹಂಕದಿಂದ ಜಾಲಹಳ್ಳಿ ಮಾರ್ಗವಾಗಿ ಮಲ್ಲೇಶ್ವರಕ್ಕೆ ಬರುವ ದಾರಿಯಲ್ಲಿ ಮೆಹಮೂದ್ ಸಾಬ್ ಪಾಳ್ಯ (ಎಂ. ಎಸ್. ಪಾಳ್ಯ). ಗೋವಿಂದಯ್ಯನ ಪಾಳ್ಯ, ದಿವಾನರ ಪಾಳ್ಯ ಮತ್ತು ಸುಬೇದಾರ ಪಾಳ್ಯದಿಂದ ಪಶ್ಚಿಮಕ್ಕೆ ಹೊರಟರೆ ಗೊರಗುಂಟೆ ಪಾಳ್ಯ. ಪೂರ್ವಕ್ಕೆ ಹೊರಟರೆ ಸುಮಾರು ಅಷ್ಟೇ ದೂರದಲ್ಲಿ ಮುನಿರೆಡ್ಡಿ ಪಾಳ್ಯ. ಮುನಿರೆಡ್ಡಿ ಪಾಳ್ಯದಿಂದ ಹೊರಟು ಲಿಂಗರಾಜಪುರ ತಲುಪಿದರೆ ರಸ್ತೆಯ ಎಡಕ್ಕೆ ಕರಿಯಣ್ಣನ ಪಾಳ್ಯ, ಬಲಕ್ಕೆ ಸೇಠು ಪಾಳ್ಯ. ಲಿಂಗರಾಜಪುರ ಮತ್ತು ಓಲ್ಡ್ ಮದ್ರಾಸ್ ರಸ್ತೆ ನಡುವೆ ರಾಮಸ್ವಾಮಿ ಪಾಳ್ಯ, ನಾಗನ ಪಾಳ್ಯ, ಕದಿರನ ಪಾಳ್ಯ, ಕೃಷ್ಣಯ್ಯನ ಪಾಳ್ಯ. ಓಲ್ಡ್ ಮದ್ರಾಸ್ ರಸ್ತೆ ದಾಟಿದ ಕೂಡಲೆ ನಾಗವಾರ ಪಾಳ್ಯ, ಸುದ್ದುಗುಂಟೆ ಪಾಳ್ಯ, ಜೌಗು ಪಾಳ್ಯ. ನಗರದ ಆಗ್ನೇಯ ಪ್ರದೇಶಕ್ಕೆ ಬಂದರೆ ಮತ್ತೊಂದು ಸುದ್ದುಗುಂಟೆ ಪಾಳ್ಯ. ಅಲ್ಲಿಂದಾಚೆಗೆ ಗುರಪ್ಪನ ಪಾಳ್ಯ, ಸೋಮಸುಂದರ ಪಾಳ್ಯ, ಮಂಗಮ್ಮನ ಪಾಳ್ಯ, ಗಾರೇಬಾವಿ ಪಾಳ್ಯ, ಬಂಡೆ ಪಾಳ್ಯ, ಶಾನುಭೋಗನ ಪಾಳ್ಯ, ಇನ್ನೊಂದು ಒಡ್ಡರ ಪಾಳ್ಯ, ಗುಂಜೂರು ಪಾಳ್ಯ, ಗೊಲ್ಲರ ಪಾಳ್ಯ, ಪರಂಗಿ ಪಾಳ್ಯ. ನಗರದ ಪೂರ್ವ ಕೋಣದಲ್ಲಿ ಸೀತಾರಾಮನ ಪಾಳ್ಯ, ಗರುಡಾಚಾರ್ಯನ ಪಾಳ್ಯ, ಸಿಂಗಯ್ಯನ ಪಾಳ್ಯ ಮುಂತಾದವು ಗಳಲ್ಲದೆ ಎರಡು ತಿಗಳರ ಪಾಳ್ಯಗಳು. ಇನ್ನು ಲಿಂಗರಾಜಪುರದಿಂದ ಉತ್ತರಕ್ಕೆ ಹೊರಟರೆ ಮನೋರಾಯನ ಪಾಳ್ಯ. ಮುಂದೆ ನಾಗವಾರ ಕೆರೆಯ ದಕ್ಷಿಣಕ್ಕೆ ವೀರಣ್ಣನ ಪಾಳ್ಯ. ಕೆರೆಯ ಪೂರ್ವಕ್ಕೆ ಸಾರಾಯ ಪಾಳ್ಯ, ಉತ್ತರಕ್ಕೆ ಮರಿಯಣ್ಣನ ಪಾಳ್ಯ. ಇನ್ನೂ ಉತ್ತರಕ್ಕೆ ಹೊರಟರೆ ರಾಚೇನಹಳ್ಳಿಗಳ ಕೆರೆಯ ಸಮೀಪ ಮೇಸ್ತ್ರಿ ಪಾಳ್ಯ. ಇತ್ತ ರಿಂಗ್ ರೋಡ್ ಮಾರ್ಗವಾಗಿ ಕೃಷ್ಣರಾಜಪುರಕ್ಕೆ ಹೊರಟರೆ ದಾರಿಯಲ್ಲಿ ಬಾಬೂ ಸಾಬ್ ಪಾಳ್ಯ.

ಪಾಳ್ಯಗಳ ಸಮಗ್ರ ಪಟ್ಟಿ ತಯಾರಿಸುವುದು ಕಷ್ಟಸಾಧ್ಯವೇನಲ್ಲ. ಸೆನ್ಸಸ್ ವರದಿ ಅಥವಾ ಕಂದಾಯ ಇಲಾಖೆಯ ನೆರವಿನಿಂದ ಅದನ್ನು ನಿರಾಯಾಸವಾಗಿ ಸಂಗ್ರಹಿಸಬಹುದು. ಆದರೆ ಮೇಲಿನ ವಿವರಣೆಯಿಂದಲೇ ಪಾಳ್ಯಗಳ ಸಂಖ್ಯೆ ಯಾವ ಪ್ರಮಾಣದಲ್ಲಿದ್ದುವೆಂದು ಸ್ಪಷ್ಟವಾಗುತ್ತದೆ. ನಗರದಾದ್ಯಂತ ಇಷ್ಟು ದೊಡ್ಡ ಸಂಖ್ಯೆಯಲ್ಲಿ ಪಾಳ್ಯಗಳು ಹುಟ್ಟಿಕೊಳ್ಳಲು ಕಾರಣವೇನು ?

ಈ ಪ್ರಶ್ನೆಯನ್ನು ಉತ್ತರಿಸುವ ಮುನ್ನ ಪಾಳ್ಯಗಳ ಕಾಲವನ್ನು ಗುರುತಿಸುವುದು ಅವಶ್ಯ. ಪಾಳ್ಯ ಎಂದರೆ ಒಂದು ಸಣ್ಣ ಸೈನಿಕ ತುಕಡಿ. ಅದು ನೆಲೆಸಿರುವ ಸ್ಥಳವನ್ನೂ ಪಾಳ್ಯ ಎಂದೇ ಕರೆಯುವುದು. ಮುಂದೆ ಪಾಳ್ಯ ಎಂಬ ಪ್ರಯೋಗ ನಿರ್ದಿಷ್ಟವಾದ ಈ ಅರ್ಥವನ್ನಷ್ಟೇ ಅಲ್ಲದೆ ಕೆಲವೊಮ್ಮೆ ಆವಾಸ ಕೇಂದ್ರವನ್ನು ಸೂಚಿಸುವ ಪದವಾಗಿಯೂ ಬಳಕೆಯಾದದ್ದಿದೆ. ಅದು ತೀರಾ ಇತ್ತೀಚಿನ, ಅಂದರೆ ಇಪ್ಪತ್ತನೇ ಶತಮಾನದ ಬೆಳವಣಿಗೆ. ಆ ಹೊತ್ತಿಗಾಗಲೇ ಹೊಸ ಸ್ಥಳನಾಮಗಳಲ್ಲಿ ಪಾಳ್ಯ, ಹಳ್ಳಿ, ಊರು, ಕೆರೆ, ಕುಂಟೆ ಇತ್ಯಾದಿ ಸಂಜ್ಞೆಗಳನ್ನು ಬಳಸುವ ಪದ್ಧತಿ ನಿಂತುಹೋಗಿತ್ತು. ಆದ್ದರಿಂದ ಪಾಳ್ಯಗಳ ಸ್ಥಾಪನೆ ಇಪ್ಪತ್ತನೇ ಶತಮಾನಕ್ಕಿಂತ ಹಿಂದಿನದೆಂದು ಸ್ಪಷ್ಟವಾಗುತ್ತದೆ. ಕ್ರಿ. ಶ. ೧೬೩೭ರಲ್ಲಿ ಬಿಜಾಪುರದ ಆದಿಲ್ ಶಾಹಿ ಸೈನ್ಯ ಬೆಂಗಳೂರಿನ ಮೇಲೆ ಹಲ್ಲೆ ನಡೆಸಿತು. ಸಂತೇಬೆನ್ನೂರಿನ (ಬಾಣಾವರದಲ್ಲಿ ನೆಲೆಸಿದ್ದ) ಚಿಕ್ಕಕೆಂಗಾ ಹನುಮಪ್ಪ ನಾಯಕನ ನೆರವಿನೊಂದಿಗೆ ಬೆಂಗಳೂರನ್ನು ಮುತ್ತಿಗೆ ಹಾಕಿದ ರಂದೌಲಾ ಖಾನ್ ನಗರವನ್ನು ಕೆಂಪೇಗೌಡನ ಕೈಯಿಂದ ವಶಪಡಿಸಿಕೊಂಡು ಶಿವಾಜಿಯ ತಂದೆ ಶಾಹ್‌ಜಿಗೆ ಜಹಗೀರಾಗಿ ನೀಡಿದನೆಂದು ಪರ್ಶಿಯನ್ ಆಕರಗಳು ಹೇಳುತ್ತವೆ. ಕೈಫಿಯತ್ತುಗಳಲ್ಲಿ ರಣದುಲ್ಲಾ ಖಾನ್ ಎಂದು ಕರೆಯಲ್ಪಟ್ಟಿರುವ ರಂದೌಲಾ ಖಾನ್ ಕೆಂಪೇಗೌಡನಿಗೆ ಮಾಗಡಿಯನ್ನು ಆಳುವ ಅನುಮತಿ ನೀಡಿ ತನ್ನ ದಂಡಯಾತ್ರೆ ಮುಂದುವರಿಸಿದ. ಅಂದಿನವರೆಗೆ ಕೆಂಪೇಗೌಡನ ನಿಯಂತ್ರಣದಲ್ಲಿದ್ದ ಬೆಂಗಳೂರಿನಲ್ಲಿ ಅವನದೊಂದು ಬಿಟ್ಟರೆ ಬೇರೆ ಯಾವುದೇ ಪಾಳ್ಯಗಳು ಇದ್ದಿರಲು ಸಾಧ್ಯವಿಲ್ಲ. ೧೬೭೭ರವರೆಗೆ ಬೆಂಗಳೂರು ಮರಾಠರ ನಿಯಂತ್ರಣದಲ್ಲಿತ್ತು. ನಂತರ ಅದು ಮೈಸೂರಿನ ಚಿಕ್ಕದೇವರಾಯನ ವಶಕ್ಕೆ ಬರತೊಡಗಿತ್ತು. ೧೬೮೬ರಲ್ಲಿ ಕಾಸಿಂ ಖಾನ್‌ನ ಹಲ್ಲೆಯೊಂದಿಗೆ ಬೆಂಗಳೂರು ಮುಘಲರ ಕೈ ಸೇರಿತು. ಈಗಾಗಲೇ ಸಡಿಲಗೊಂಡಿದ್ದ ಮರಾಠರ ಆಳ್ವಿಕೆ ಇದರೊಂದಿಗೆ ಕೊನೆಗೊಂಡಿತು. ಮುಘಲರ ಕೈಯಿಂದ ಚಿಕ್ಕದೇವನು ಬೆಂಗಳೂರನ್ನು ಗುತ್ತಿಗೆ ಪಡೆದುಕೊಂಡನಾದರೂ ಸದೃಢವಾದ ಆಡಳಿತವನ್ನು ಜಾರಿಗೊಳಿಸಲು ಅವನಿಗೆ ಸಾಧ್ಯವಾಗಲಿಲ್ಲ. ಇದರಿಂದ ೧೭೦೦ರ ಹೊತ್ತಿಗೆ ಇಲ್ಲಿ ಸ್ವತಂತ್ರ ಪಾಳ್ಯಗಳ ವಿಕಾಸಕ್ಕೆ ಯೋಗ್ಯವಾದ ವಾತಾವರಣ ನಿರ್ಮಾಣಗೊಂಡಿತ್ತೆಂದು ಹೇಳಬಹುದು. ೧೮೦೦ರ ವೇಳೆಗೆ ಪಾಳ್ಯಗಳೂ ತಮ್ಮ ಅಸ್ತಿತ್ವ ಕಳೆದುಕೊಂಡಿದ್ದವು. ೧೭೬೧ರಲ್ಲಿ ಹೈದರ್‌ಅಲಿಯ ನಿಯಂತ್ರಣಕ್ಕೆ ಬಂದ ಮೈಸೂರು ರಾಜ್ಯ ೧೭೯೯ರಲ್ಲಿ, ಟೀಪೂ ಸುಲ್ತಾನ್‌ನ ನಿಧನದ ನಂತರ ಪುನಃ ಒಡೆಯ ಮನೆತನದ ವಶವಾಯ್ತು (ಕನ್ನಡ ಬರಹಗಳಲ್ಲಿ ಸಾಮಾನ್ಯವಾಗಿ 'ಟೀಪೂ' ಬದಲು 'ಟಿಪ್ಪು' ಎಂಬ ಅಪಪಾಠ ಬಳಕೆಯಲ್ಲಿದೆ). ಕಂಪೆನಿ ಸರಕಾರದ ವತಿಯಿಂದ ವೆಲೆಸ್ಲೆ ಜಾರಿಗೆ ತಂದ ಸಬ್ಸಿಡಿಯರಿ ಅಲಯನ್ಸ್ ನೀತಿಗೆ ೧೭೯೯ರಲ್ಲಿ ಮೈಸೂರು ತನ್ನ ಒಪ್ಪಿಗೆ ಸೂಚಿಸಿದ ಮೇಲೆ ರಾಜ್ಯದ ಸುರಕ್ಷೆಯನ್ನು ಬ್ರಿಟಿಷರು ವಹಿಸಿಕೊಂಡರು. ಈ ನೀತಿಯ ಅನ್ವಯ ಒಪ್ಪಂದಕ್ಕೆ ಸಹಿ ಹಾಕಿದ ರಾಜ್ಯಗಳು ತಮ್ಮ ವೆಚ್ಚದಲ್ಲಿ ಬ್ರಿಟಿಷರ ದೊಡ್ಡ ಸೈನಿಕ ತುಕಡಿಯೊಂದಕ್ಕೆ ಆಶ್ರಯ ನೀಡಬೇಕಿತ್ತು. ಅಲ್ಲದೆ ತುಕಡಿ ಸ್ಥಾಪಿಸಲು ರಾಜ್ಯದ ಕೆಲವು ಪ್ರದೇಶಗಳನ್ನು ಕಂಪೆನಿಗೆ ಹಸ್ತಾಂತರಿಸಬೇಕಿತ್ತು. ಬದಲಾಗಿ ಸುತ್ತಮುತ್ತಲಿನ ಇತರ ರಾಜ್ಯಗಳ ಅಥವಾ ಯಾವುದೇ ವಿದೇಶಿ ಶಕ್ತಿಗಳ ಹಲ್ಲೆಯಿಂದ ರಾಜ್ಯವನ್ನು ರಕ್ಷಿಸುವುದು ಕಂಪೆನಿಯ ಜವಾಬ್ದಾರಿ. ಈ ನೀತಿಯಿಂದಾಗಿ ರಾಜ್ಯಗಳ ಸ್ವಂತ ಸೈನಿಕ ಶಕ್ತಿ ದುರ್ಬಲಗೊಂಡರೂ ಪದೇಪದೇ ನಡೆಯುತ್ತಿದ್ದ ವಿಧ್ವಂಸಕ ಹಲ್ಲೆಗಳು ಕೊನೆಗೊಳ್ಳತೊಡಗಿದವು. ೧೭೯೯ರ ಒಪ್ಪಂದದಂತೆ ಬೆಂಗಳೂರು ನಗರದ ಕೆಲವು ಭಾಗಗಳನ್ನು ಕಂಪೆನಿಗೆ ನೀಡಲಾಗಿ ಅಲ್ಲಿ ಸ್ಥಾಪಿತವಾದ ಕಂಟೋನ್ಮೆಂಟ್ ೧೮೧೦ರ ಹೊತ್ತಿಗೆ ಸ್ಥಿರವಾದ ಕಾರ್ಯಾಚರಣೆಯಲ್ಲಿ ನಿರತವಾಗಿತ್ತು. ಇದರಿಂದ ಬೆಂಗಳೂರಿನ ಪಾಳ್ಯಗಳು ಹದಿನೆಂಟನೇ ಶತಮಾನಕ್ಕೆ ಸೇರಿದ್ದೆಂದು ಸ್ಪಷ್ಟವಾಗುತ್ತದೆ. ೧೭೦೦ರ ಸುಮಾರಿಗೆ ಜನ್ಮ ಪಡೆಯತೊಡಗಿದ ಪಾಳ್ಯಗಳು ೧೮೦೦ರ ಹೊತ್ತಿಗೆ ಕೊನೆಯುಸಿರೆಳೆದಿದ್ದವು.

ಈ ಪಾಳ್ಯಗಳನ್ನು ಸ್ಥಾಪಿಸಿದವರು ಯಾರು ? ಅದರ ಹಿಂದಿನ ಉದ್ದೇಶವೇನು ? ಪಾಳ್ಯಗಳು ಕೊನೆಗೊಂಡದ್ದು ಹೇಗೆ ?

ಪಾಳ್ಯಗಳಿಗೆ ಒದಗಿಬಂದ ಹೆಸರುಗಳನ್ನು ಗಮನಿಸಿದಾಗ ಅಲ್ಲಿ ನಿರ್ದಿಷ್ಟವಾದ ಕೆಲವು ಕ್ರಮಗಳನ್ನು ಗುರುತಿಸಬಹುದು. ಕೊಟ್ಟಿಗೆ ಪಾಳ್ಯ, ಮೂಡಲ ಪಾಳ್ಯ, ಗಾರೇಬಾವಿ ಪಾಳ್ಯ ಮುಂತಾದಲ್ಲಿ ಆಯಾ ಸ್ಥಳದ ಯಾವುದೋ ವೈಶಿಷ್ಟ್ಯವನ್ನು ಸೂಚಿಸಲಾಗಿದೆ. ಗಾಣಿಗರ ಪಾಳ್ಯ, ಗೊಲ್ಲರ ಪಾಳ್ಯ, ತಿಗಳರ ಪಾಳ್ಯ, ಒಡ್ಡರ ಪಾಳ್ಯದಂಥಾ ಉದಾರಣೆಗಳಲ್ಲಿ ವೃತ್ತಿಪರ ಅಥವಾ ಜಾತಿಪರ ಒಕ್ಕೂಟಗಳನ್ನು ಕಾಣುತ್ತೇವೆ. ಸುಬೇದಾರ ಪಾಳ್ಯ, ದಿವಾನರ ಪಾಳ್ಯ, ಶಾನುಭೋಗನ ಪಾಳ್ಯ ಅಧಿಕಾರಿ ವರ್ಗದ ಸೂಚಕಗಳು. ಉಳಿದಂತೆ ನಾವು ಹೆಚ್ಚಾಗಿ ಕಾಣುವುದು ವ್ಯಕ್ತಿನಾಮಗಳನ್ನೇ. ಕರಿಯಣ್ಣ, ಮರಿಯಪ್ಪ, ನಾಗೇಗೌಡ, ಪಾಪರೆಡ್ಡಿ, ಮುನಿರೆಡ್ಡಿ, ಮೆಹಮೂದ್ ಸಾಬ್, ಬಾಬೂ ಸಾಬ್, ಕೃಷ್ಣಯ್ಯ, ವೀರಣ್ಣ, ಗೋವಿಂದಯ್ಯ, ರಾಮಸ್ವಾಮಿ, ಗರುಡಾಚಾರ್ಯ, ಹುಚ್ಚಪ್ಪ, ಚಿಕ್ಕೇಗೌಡ, ಮಂಗಮ್ಮ... ಹೀಗೆ. ಇದು ಅಂದು ಸ್ವಂತವಾಗಿ ಪಾಳ್ಯಗಳನ್ನು ಕಟ್ಟಿಕೊಳ್ಳುವ ಸಾಮರ್ಥ್ಯವಿದ್ದ ಉದ್ದಿಮೆಶೀಲ ವರ್ಗವೊಂದನ್ನು ಸೂಚಿಸುತ್ತದೆ. ಪಾಳ್ಯಗಳನ್ನು ಈ ವರ್ಗದ ಬಳುವಳಿಯೆಂದು ಕರೆಯಬಹುದು.

ಇವು ಖಾಸಗಿ ಪಾಳ್ಯಗಳು. ಇವುಗಳ ಸ್ಥಾಪನೆಯ ಹಿಂದೆ ಆರ್ಥಿಕ ಲಾಭ ಮತ್ತು ಸ್ಥಳೀಯ ಸ್ತರದ ಅಧಿಕಾರ ರಾಜಕಾರಣಗಳು ಮುಖ್ಯ ಪ್ರೇರಣೆಗಳಾಗಿದ್ದವು. ಇದನ್ನು ಸ್ಪಷ್ಟಪಡಿಸುವ ಒಂದು ಕಥೆಯಿದೆ. ಕರಿಯಣ್ಣ, ಬಿಳಿಯಣ್ಣ ಅಣ್ಣತಮ್ಮಂದಿರು. ಇಬ್ಬರೂ ಕೂಡಿ ತಮ್ಮ ತೋಟವನ್ನು ಕೊಟ್ಟು ಬಂದ ಹಣದಿಂದ ಪಾಳ್ಯ ಸ್ಥಾಪಿಸುತ್ತಾರೆ. ಕ್ರಮೇಣ ಕರಿಯಣ್ಣನಿಗೆ ದಿವಾನರೊಂದಿಗೆ ಸಂಪರ್ಕ ಬೆಳೆದು ವ್ಯವಹಾರದಲ್ಲಿ ತನ್ನದೇ ಮೇಲುಗೈ ಸಾಧಿಸತೊಡಗುತ್ತಾನೆ. ಇದರಿಂದ ಸಿಟ್ಟಿಗೆದ್ದ ಬಿಳಿಯಣ್ಣ ಬೇರೆ ಪಾಳ್ಯ ಕಟ್ಟಿಕೊಳ್ಳುತ್ತಾನೆ. ಕರಿಯಣ್ಣನ ಪಾಳ್ಯದಲ್ಲಿ ಇರುವುದು ನೂರು ಸೈನಿಕರು. ಬಿಳಿಯಣ್ಣ ತನ್ನ ಹೊಸ ಪಾಳ್ಯಕ್ಕೆ ಇನ್ನೂರು ಜನ ಸೈನಿಕರನ್ನು ಸೇರಿಸಿಕೊಳ್ಳುತ್ತಾನೆ. ಮಾತ್ರವಲ್ಲ, ಕರಿಯಣ್ಣನ ಪಾಳ್ಯದಿಂದ ಸೈನಿಕರನ್ನು ಪಡೆಯುವವರು ಪ್ರತಿ ಸೈನಿಕನಿಗೆ ತಿಂಗಳಿಗೆ ಒಂದು ವರಹದ ಲೆಕ್ಕದಲ್ಲಿ ಹಣ ನೀಡುತ್ತಿರುವಾಗ ಬಿಳಿಯಣ್ಣ ವರಹವೊಂದಕ್ಕೆ ಇಬ್ಬರು ಸೈನಿಕರನ್ನು ಒದಗಿಸುತ್ತಾನೆ. ಇದರಿಂದ ಕರಿಯಣ್ಣನ ಪಾಳ್ಯಕ್ಕೆ ಬೇಡಿಕೆ ಕಡಿಮೆಯಾಗತೊಡಗುತ್ತದೆ. ಇತ್ತ ಬಿಳಿಯಣ್ಣ ಶ್ರೀಮಂತನಾಗುತ್ತಾ ಹೋಗುತ್ತಾನೆ. ಕೆಲವೇ ವರ್ಷಗಳಲ್ಲಿ ಹತ್ತು ಕುದುರೆಗಳನ್ನು ಖರೀದಿಸಿ ಅಶ್ವದಳ ರಚಿಸುತ್ತಾನೆ. ಸವಾರ ಸೇರಿದಂತೆ ಪ್ರತಿ ಕುದುರೆಗೆ ತಿಂಗಳಿಗೆ ಮೂರು ವರಹ ಬಾಡಿಗೆ. ಹೀಗೆ ಅಣ್ಣ ತಮ್ಮಂದಿರಲ್ಲಿ ದ್ವೇಷ ಹೆಚ್ಚುತ್ತಾ ಬಂದು ಕೊನೆಗೊಮ್ಮೆ ಇಬ್ಬರಿಗೂ ಮುಖಾಮುಖಿಯಾಗುತ್ತದೆ. ಇಬ್ಬರೂ ಸಾಯುತ್ತಾರೆ.



ದಂಡೆ ಹೋಗುವವರಿಗೆ ಬಾಡಿಗೆಗೆ ಸೈನಿಕರನ್ನು ಒದಗಿಸುವುದೇ ಪಾಳ್ಯಗಳ ಕೆಲಸವಾಗಿತ್ತೆಂದು ಈ ಕಥೆ ಸ್ಪಷ್ಟಪಡಿಸುತ್ತದೆ. ಕರ್ನಾಟಕದಲ್ಲಿ ದೊರಕುವ ಹದಿನೆಂಟನೇ ಶತಮಾನದ ಲಿಖಿತ ಆಕರಗಳಲ್ಲಿ ಎಲ್ಲಿಯೂ ಈ ಕಥೆಗೆ ಪುಷ್ಟಿ ನೀಡುವ ನಿದರ್ಶನಗಳಿಲ್ಲ. ಆದರೆ ತಮಿಳುನಾಡು ಹಾಗೂ ಕೇರಳದ ಸಂದರ್ಭದಲ್ಲಿ ಇದನ್ನು ಸಮರ್ಥಿಸುವ ಬ್ರಿಟಿಷ್ ಮತ್ತು ಡಚ್ ಆಕರಗಳಿವೆ. ಏಪ್ರಿಲ್ ೮, ೧೭೩೪ರಂದು ತಲಶ್ಶೇರಿಯ ಫ್ಯಾಕ್ಟರಿಯಿಂದ ಬಾಂಬೆಯಲ್ಲಿದ್ದ ಕಂಪೆನಿ ಕೌನ್ಸಿಲ್ ಅಧ್ಯಕ್ಷ ರಾಬರ್ಟ್ ಕೋವನ್‌ಗೆ ಕಳಿಸಲಾದ ಪತ್ರದಲ್ಲಿ ಕೋಟ್ಟಯಂ ರಾಜನು ಕರ್ನಾಟಕದ ಕರಾವಳಿಯಿಂದ ಉತ್ತರ ಕೇರಳದ ಮೇಲೆ ನಡೆದ ಹಲ್ಲೆಯನ್ನು ಎದುರಿಸಲು ಮೈಸೂರಿನಿಂದ ಐದು ಸಾವಿರ ಸೈನಿಕರನ್ನು ಬಾಡಿಗೆಗೆ ತೆಗೆದುಕೊಂಡನೆಂದು ಹೇಳಲಾಗಿದೆ. ಜುಲೈ ೩೧, ೧೭೪೧ರಲ್ಲಿ ಕೇರಳದ ಕೊಳಚ್ಚಲ್‌ನಲ್ಲಿ ನಡೆದ ಯುದ್ಧದಲ್ಲಿ ತಿರುವಿತಾಂಕೂರಿನ ಮಾರ್ತಾಂಡವರ್ಮನ ಕೈಯಲ್ಲಿ ಡಚ್ಚರು ಸೋಲನ್ನನುಭವಿಸಿದರು. ಈ ಯುದ್ಧದಲ್ಲಿ ತಿರುವಿತಾಂಕೂರು ಮಧುರೆಯಿಂದ ತಿಂಗಳಿಗೆ ೬೦,೦೦೦ ರೂಪಾಯಿಗಳ ವೆಚ್ಚದಲ್ಲಿ ಹತ್ತು ಸಾವಿರದ ಅಶ್ವದಳವನ್ನೂ ಸಾವಿರಾರು ಜನ ಮರವರ್ ಕಾಲಾಳುಗಳನ್ನೂ ಪಡೆದುಕೊಂಡಿತ್ತು. ಕೊಳಚ್ಚಲ್‌ನಲ್ಲಿ ಅವಮಾನಿತರಾದ ನಂತರ ತಿರುವಿತಾಂಕೂರನ್ನು ಪುನಃ ಮುತ್ತಿಗೆ ಹಾಕಲು ನಿಶ್ಚಯಿಸಿದ ಕೊಚ್ಚಿಯ ಡಚ್ ಗವರ್ನರ್ ಸ್ಟೈನ್ ಫಾನ್ ಗೊಲೆನೇಸ್‌ಗೆ ನೆರವಾಗಲು ಮಧುರೆಯ ಅಪ್ಪಯ್ಯ ನಾಯಕನೇ ಮುಂದಾದ. ಈ ಸಲ ಅಪ್ಪಯ್ಯ ನಾಯಕ ಕೇಳಿದ ಬಾಡಿಗೆ ತಿಂಗಳಿಗೆ ೨೫,೦೦೦ ವರಹಗಳು ಅಥವಾ ೮೭,೫೦೦ ರೂಪಾಯಿಗಳು. ಇದು ದುಬಾರಿಯಾದ್ದರಿಂದ ಗೊಲೆನೇಸ್ ತನ್ನ ಯೋಜನೆಯನ್ನು ಕೈಬಿಡಬೇಕಾಯ್ತು. ಯಾರ ಪರವಾಗಿಯೂ ನಿಷ್ಠೆ ಅಥವಾ ಮಮತೆ ಇಲ್ಲದೆ ಹೆಚ್ಚು ಬಾಡಿಗೆ ನೀಡುವವರಿಗೆ ಸೈನಿಕ ಸೇವೆಯನ್ನು ಒದಗಿಸುವ ವ್ಯವಸ್ಥೆ ಇದಾಗಿತ್ತು. ಈ ವ್ಯವಸ್ಥೆಯ ಸಣ್ಣಪುಟ್ಟ ಪ್ರತಿನಿಧಿಗಳೇ ಬೆಂಗಳೂರಿನಲ್ಲಿ ಪಾಳ್ಯಗಳನ್ನು ಕಟ್ಟಿಕೊಂಡಿದ್ದ ಕರಿಯಣ್ಣ, ಮರಿಯಪ್ಪ, ಪಾಪರೆಡ್ಡಿ, ಬಾಬೂ ಸಾಬ್, ಮಂಗಮ್ಮ ಮುಂತಾದವರು.

ಪಾಳ್ಯಗಳ ವಿಕಾಸ ಹದಿನೆಂಟನೇ ಶತಮಾನದ ಅನೇಕ ಐತಿಹಾಸಿಕ ವಿದ್ಯಮಾನಗಳ ಮೇಲೆ ಬೆಳಕು ಚೆಲ್ಲುತ್ತದೆ. ಮೊದಲಿಗೆ, ಇದನ್ನು ಪಾಳೆಗಾರ ವ್ಯವಸ್ಥೆ ಶಿಥಿಲಗೊಳ್ಳತೊಡಗಿದ್ದರ ಸೂಚನೆಯಾಗಿ ಕಾಣಬಹುದು. ಕ್ರಿ. ಶ. ೧೭೦೦-೧೭೫೦ರ ಕಾಲಕ್ಕಾಗಲೇ ಕೆಳದಿ, ಚಿತ್ರದುರ್ಗ, ಸಂತೇಬೆನ್ನೂರು ಮುಂತಾದಲ್ಲಿನ ಪ್ರಬಲ ಪಾಳೆಗಾರರೂ ಹಾಗಲವಾಡಿ, ಹರಪನಹಳ್ಳಿ ಮೊದಲಾದ ಸಣ್ಣ ಪಾಳೆಗಾರರೂ ಸಾಕಷ್ಟು ಕ್ಷೀಣಿಸಿಹೋಗಿದ್ದರು. ಆದಿಲ್ ಶಾಹಿ ಮತ್ತು ಅರವೀಡು ರಾಜ್ಯಗಳ ಅಸ್ತಮಾನದಿಂದ ಯಾವುದೇ ಶಕ್ತಿಯ ಮೇಲುಗೈ ಇಲ್ಲದ ಸ್ಥಿತಿಯೊಂದು ಉದ್ಭವಿಸಿತ್ತು. ಅದೇ ವೇಳೆಗೆ ಅಡಕೆ, ಮೆಣಸು, ವಸ್ತ್ರ, ಉಪ್ಪು, ಲೋಹಗಳೇ ಮೊದಲಾದ ಉತ್ಪನ್ನಗಳ ಹೆಚ್ಚಿದ ವ್ಯಾಪಾರದಿಂದಾಗಿ ಸ್ಥಳೀಯ ಮಟ್ಟದಲ್ಲಿ ಪಾಳ್ಯದಂತಹ ಹೊಸ ಉದ್ದಿಮೆಗಳನ್ನು ಸ್ಥಾಪಿಸುವ ಸಾಮರ್ಥ್ಯವುಳ್ಳ ವರ್ಗವೊಂದು ಬೆಳೆದುಬಂತು. ಸಂಘರ್ಷ ಹೆಚ್ಚು ಮುಕ್ತವಾದಂತೆ ಮತ್ತು ದಂಡೆ, ಲೂಟಿಗಳು ದಿನದಿಂದ ದಿನಕ್ಕೆ ತೀವ್ರವಾಗುತ್ತಾ ಹೋದಂತೆ ಮಧುರೆ, ಮೈಸೂರು ಮುಂತಾದ ರಾಜ್ಯಗಳು ಸೈನ್ಯವನ್ನು ಬಾಡಿಗೆಗೆ ನೀಡುವ ವ್ಯವಸಾಯಕ್ಕೆ ಕೈಹಾಕತೊಡಗಿದ್ದನ್ನು ಬ್ರಿಟಿಷ್ ಮತ್ತು ಡಚ್ ಆಕರಗಳಿಂದ ತಿಳಿಯಬಹುದು. ಕರಿಯಣ್ಣ, ಮರಿಯಪ್ಪ, ಪಾಪರೆಡ್ಡಿಗಳಂಥವರೂ ಇದೇ ವ್ಯವಸಾಯದಲ್ಲಿ ತಮ್ಮನ್ನು ತೊಡಗಿಸಿಕೊಂಡಾಗ ಇತ್ತ ಪಾಳ್ಯಗಳ ಸಂಖ್ಯೆ ಹೆಚ್ಚಿತು, ಅತ್ತ ಹಳೆಯ ಪಾಳೆಗಾರರ ರಾಜಕಾರಣ ದುರ್ಬಲಗೊಳ್ಳತೊಡಗಿತು.

ವಸಾಹತುಪೂರ್ವ ಯುಗದಲ್ಲಿ ಭಾರತದಲ್ಲಿ ಫೌಜಿ ವೃತ್ತಿಗೆ ದೊಡ್ಡ ಮಾರುಕಟ್ಟೆ (ಮಿಲಿಟರಿ ಲೇಬರ್ ಮಾರ್ಕೆಟ್) ಇತ್ತೆಂದು ಕೆಲವು ಇತಿಹಾಸಕಾರರು ವಾದಿಸಿದ್ದಾರೆ. ಕ್ರಿ. ಶ. ೧೫೯೦ರಲ್ಲಿ ಮುಘಲ್ ಸೈನ್ಯವನ್ನು ಹೊರತುಪಡಿಸಿಯೇ ಭಾರತದಲ್ಲಿ ಮೂರು ಲಕ್ಷ ನಲವತ್ತು ಸಾವಿರದಷ್ಟು ಅಶ್ವದಳವೂ ನಲವತ್ತು ಲಕ್ಷ ಕಾಲಾಳುಗಳೂ ಇದ್ದರೆಂದು ಅಂದಾಜು ಮಾಡಲಾಗಿದೆ. ಮುಂದೆ ಇದರ ಸಂಖ್ಯೆ ಮತ್ತಷ್ಟು ಹೆಚ್ಚಿತು. ಕರ್ನಾಟಕದಲ್ಲಿ ಸೈನಿಕ ಕಾರ್ಯಾಚರಣೆಯಲ್ಲಿ ತೊಡಗಿದ್ದವರ ಸಂಖ್ಯೆಯ ಬಗ್ಗೆ ಖಚಿತವಾದ ಮಾಹಿತಿಗಳಿಲ್ಲ. ಆದರೆ ಅಲ್ಲಲ್ಲಿ ದೊರಕುವ ಅಂಕಿ-ಅಂಶಗಳ ನೆರವಿನಿಂದ ಇದನ್ನು ಅಂದಾಜು ಮಾಡಬಹುದಾಗಿದೆ. ೧೭೮೬ನೇ ವರ್ಷನ್ನು ಉದಾಹರಣೆಯಾಗಿ ತೆಗೆದುಕೊಳ್ಳೋಣ. ಆ ವರ್ಷ ಮೈಸೂರನ್ನು ಮುತ್ತಿಗೆ ಹಾಕಲು ಸಿದ್ಧನಾಗಿದ್ದ ನಾನಾ ಫಡ್‌ನಾವಿಸ್‌ಗೆ ಹೈದರಾಬಾದಿನ ನಿಜಾಮನು ೨೫,೦೦೦ ಸೈನಿಕರನ್ನು ಒದಗಿಸುತ್ತಾನೆ. ಸವಣೂರಿನ ನವಾಬನ ಸುರಕ್ಷೆಗೆಂದು ಗಣೇಶ್ ಪಂತ್‌ನ ಹತ್ತಿರ ೧೫,೦೦೦ ಸೈನಿಕರನ್ನು ಬಿಟ್ಟು, ಧಾರವಾಡವನ್ನು ನಿಯಂತ್ರಿಸಲು ನಿಂತಿದ್ದ ಬಾಪೂ ಹೋಲ್ಕರ್‌ಗೆ ಇನ್ನೊಂದು ೧೫,೦೦೦ವನ್ನು ನೀಡಿ ೧೫,೦೦೦ ಸೈನಿಕರೊಂದಿಗೆ ತುಕೋಜಿ ಹೋಲ್ಕರ್ ಕಿತ್ತೂರಿಗೆ ಬರುತ್ತಾನೆ. ಅಪ್ಪಾ ಬಲವಂತ್ ಮತ್ತು ರಘುನಾಥ್ ರಾವ್ ಕೈಯಲ್ಲಿ ೨೦,೦೦೦ ಸೈನಿಕರಿದ್ದಾರೆ. ಟೀಪೂನ ಹಲ್ಲೆಯನ್ನು ಹತ್ತಿಕ್ಕಲು ಆದೋಣಿಯ ಮಹಾಬತ್ ಖಾನ್‌ನಿಗೆ ನಿಜಾಮನು ಒದಗಿಸುವ ಸೈನಿಕರ ಸಂಖ್ಯೆ ೨೫,೦೦೦. ಅದೇ ಹೊತ್ತಿಗೆ ಆದೋಣಿ ಪ್ರದೇಶದಲ್ಲಿ ಯಾವುದೇ ಚಟುವಟಿಕೆಗಳಿಲ್ಲದೆ ಸುಮ್ಮನೆ ನಿಂತಿರುವ ಮುಘಲ್ ಸೈನಿಕರ ಸಂಖ್ಯೆ ೫೦,೦೦೦. ಬಾಜೀಪಂತ್ ಅನ್ನಾನ ಹುದ್ದರಿಕೆಯಲ್ಲಿ ಟೀಪೂನನ್ನು ಎದುರಿಸಲು ಹೊರಟ ಹರಿಪಂತ್‌ನ ಸೈನಿಕರು ೨೦,೦೦೦. ಕೊಪ್ಪಳಕ್ಕೆ ಹೊರಟ ರಘುನಾಥ್ ರಾವ್ ಪಟವರ್ಧನ್ ಬಳಿ ಇದ್ದದ್ದು ೧೦,೦೦೦ ಸೈನಿಕರು. ತುಕೋಜಿ ಹೋಲ್ಕರ್‌ನ ೧೫,೦೦೦ ಮತ್ತು ರಘುನಾಥ್ ರಾವ್ ಪಟವರ್ಧನ್‌ನ ೧೦,೦೦೦ ಸೇರಿ ಹರಿಪಂತ್ ಒಂದು ಲಕ್ಷದ ಸೈನ್ಯದೊಂದಿಗೆ ದಂಡೆ ಹೋದನೆಂದು ಹೇಳಲಾಗಿರುವುದರಿಂದ ಅವನ ಬಳಿ ೭೫,೦೦೦ ಸೈನಿಕರಿದ್ದರೆಂದು ಖಾತ್ರಿಯಾಗುತ್ತದೆ. ೧೭೮೬ರಲ್ಲಿ ಟೀಪೂ ಬಳಿ ಇದ್ದ ಸೈನಿಕರ ಸಂಖ್ಯೆ ಎಷ್ಟೆಂದು ತಿಳಿಯದು. ೧೭೯೦ರಲ್ಲಿ ಮೂರನೇ ಆಂಗ್ಲ-ಮೈಸೂರು ಯುದ್ಧ ಪ್ರಾರಂಭವಾಗುವ ಮುನ್ನ ಅವನ ಬಳಿ ಒಂದು ಲಕ್ಷದ ಮೂವತ್ತೆರಡು ಸಾವಿರ ಸೈನಿಕರಿದ್ದರು. ಯುದ್ಧ ಪ್ರಾರಂಭವಾದ ಸಂದರ್ಭದಲ್ಲಿ ಅದು ಹೆಚ್ಚಾಯ್ತೆಂದು ತೋರುತ್ತದೆ. ಆಗ ಅವನಲ್ಲಿದ್ದದ್ದು ಒಂದು ಲಕ್ಷದ ನಲವತ್ತಮೂರು ಸಾವಿರ ಸೈನಿಕರು. ೧೭೮೬ರಲ್ಲಿ ಆದೋಣಿಗೆ ಹೊರಡುವ ಮುನ್ನ ಬೆಂಗಳೂರಿನಲ್ಲಿ ೪೦,೦೦೦ಕ್ಕೂ ಹೆಚ್ಚು ಸೈನಿಕರನ್ನು ಟೀಪೂ ಬಿಟ್ಟುಹೋಗಿದ್ದನೆಂದು ತಿಳಿದುಬರುತ್ತದೆ. ಒಂದು ಲಕ್ಷದ ಮೂವತ್ತೆರಡು ಸಾವಿರವನ್ನೇ ೧೭೮೬ರ ಸಂಖ್ಯೆಯಾಗಿ ತೆಗೆದುಕೊಂಡರೆ ಮೇಲಿನ ಅಂಕಿ-ಅಂಶಗಳಿಂದ ಅಂದು ಕರ್ನಾಟಕದಲ್ಲಿ ಒಟ್ಟು ನಾಲ್ಕು ಲಕ್ಷ



ಎರಡು ಸಾವಿರ ಸೈನಿಕರು ಕ್ರಿಯಾಶೀಲರಾಗಿದ್ದರೆಂದು ಹೇಳಬಹುದು. ನಿಜವಾದ ಸಂಖ್ಯೆ ಇದಕ್ಕಿಂತ ಹೆಚ್ಚಾಗಿಯೇ ಇದ್ದಿರಬೇಕು. ಕರಾವಳಿ ಪ್ರದೇಶವನ್ನು ನಾವಿಲ್ಲಿ ಲೆಕ್ಕಕ್ಕೆ ತೆಗೆದುಕೊಂಡಿಲ್ಲ. ಟೀಪೂಗೆ ನೆರವು ನೀಡದಿದ್ದ ಉಚ್ಚಂಗಿದುರ್ಗ, ಹರಪನಹಳ್ಳಿ ಮುಂತಾದಲ್ಲಿನ ಪಾಳೆಗಾರರ ಸೈನ್ಯವನ್ನೂ ಎಣಿಸಿಲ್ಲ. ಇನ್ನು ಕೋಟೆಗಳ ರಕ್ಷಣಾ ವ್ಯೂಹದ (ಗ್ಯಾರಿಜ಼ನ್) ಬಗ್ಗೆ ಏನನ್ನೂ ಹೇಳುವುದು ಕಷ್ಟ. ಬಾದಾಮಿ ಕೋಟೆಗೆ ೧೭೮೬ರಲ್ಲಿ ೩೦೦೦ ಸೈನಿಕರ ರಕ್ಷಣಾ ವ್ಯೂಹವಿತ್ತು. ನರಗುಂದದ ಕೋಟೆಗೆ ೧೭೮೫ರಲ್ಲಿ ೨೦೦೦. ಹೈದರ್‌ಗಡ್‌ನಲ್ಲಿ ೧೭೮೩ರಲ್ಲಿ ೧೭೦೦. ಸಾವನದುರ್ಗದಲ್ಲಿ ೧೭೯೧ರಲ್ಲಿ ೧೫೦೦. ರಕ್ಷಣಾ ವ್ಯೂಹದ ಸಂಖ್ಯೆಯಲ್ಲಿ ಏರಿಳಿತಗಳು ಸಂಭವಿಸುತ್ತಿದ್ದವು. ೧೭೭೮ರಲ್ಲಿ ಧಾರವಾಡದ ಕೋಟೆಗೆ ೩೦೦೦ ಸೈನಿಕರ ವ್ಯೂಹವಿತ್ತು. ೧೭೯೧ರಲ್ಲಿ ಅದು ೧೦,೦೦೦ಕ್ಕೆ ಏರಿ ಪುನಃ ೩೦೦೦ಕ್ಕೆ ಇಳಿಯಿತು. ಕೋಟೆಗಳಿಗೆ ಸ್ಥಿರವಾದ ರಕ್ಷಣಾ ವ್ಯೂಹ ಇದ್ದಿರಲಿಕ್ಕಿಲ್ಲ. ೧೭೯೧ರಲ್ಲಿ ಚಿತ್ರದುರ್ಗದ ಕೋಟೆಗೆ ೧೧,೦೦೦ ಸೈನಿಕರ ವ್ಯೂಹವಿತ್ತು. ಆದರೆ ಒನಕೆ ಓಬವ್ವನ ಕಥೆಯಲ್ಲಿ ಕೋಟೆಯ ಕಾವಲುಗಾರ ಊಟಕ್ಕೆ ಹೋಗಿದ್ದಾಗ ಹೈದರ್‌ನ ಸೈನಿಕರು ಒಳಗೆ ನುಸುಳಿಕೊಳ್ಳುವಲ್ಲಿ ಯಶಸ್ವಿಯಾದರೆಂದು ಹೇಳಿರುವುದು ಅಂದು ಅಲ್ಲಿ ರಕ್ಷಣಾ ವ್ಯೂಹ ಇರಲಿಲ್ಲವೆಂದು ಸ್ಪಷ್ಟಪಡಿಸುತ್ತದೆ.

ಈ ನಾಲ್ಕೈದು ಲಕ್ಷ ಸೈನಿಕರಲ್ಲಿ ಎಲ್ಲರೂ ಸ್ಥಿರವಾದ ಸೈನಿಕರಲ್ಲ. ಅನೇಕರು ರೈತಾಪಿ ವರ್ಗಕ್ಕೆ ಸೇರಿದವರು. ಕೊಯ್ಲು ಮುಗಿದು ಮುಂದಿನ ಬಿತ್ತನೆ ಕಾಲ ಪ್ರಾರಂಭವಾಗುವವರೆಗಿನ ಅವಧಿಯಲ್ಲಿ ದಂಡೆ ಹೋಗುತ್ತಿದ್ದವರೇ ಹೆಚ್ಚಾಗಿದ್ದರು. ಫ್ರಾನ್ಸಿಸ್ ಬ್ಯುಕಾನನ್ ಹೇಳುವಂತೆ ೧೮೦೦ರಲ್ಲಿ ಚನ್ನರಾಯನ ದುರ್ಗದ ಕೋಟೆಗೆ ಮೈಸೂರು ಒಡೆಯರದೇ ರಕ್ಷಣಾ ವ್ಯೂಹವಿತ್ತು. ಆದರೆ ಮೂಗನಾಯಕನ ಕೋಟೆಗೆ ರಕ್ಷಣಾ ವ್ಯೂಹ ಒದಗಿಸುತ್ತಿದ್ದವರು ಅಲ್ಲಿನ ರೈತರೇ. ರೈತ ವರ್ಗಕ್ಕೆ ಸೇರಿದವರೇ ಹೆಚ್ಚಾಗಿದ್ದಲ್ಲಿ ಪಾಳ್ಯಗಳೂ ರೂಪುಪಡೆದದ್ದು ವಿರಳ. ಅಂಥಲ್ಲಿ ಸೈನಿಕ ತರಬೇತಿಗೆ ಪ್ರತ್ಯೇಕ ಗರಡಿಗಳಿರುತ್ತಿದ್ದವು. ಅಗತ್ಯ ಬಿದ್ದಾಗ ಈ ಗರಡಿಗಳಲ್ಲಿ ತರಬೇತಿ ಪಡೆದ ರೈತಾದಿಗಳನ್ನೇ ದಂಡೆಗೆ ಕರೆದೊಯ್ಯಲಾಗುತ್ತಿತ್ತು. ಉತ್ತರ

ಕರ್ನಾಟಕದಲ್ಲಿ ಇಂಥ ಗರಡಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತೇವೆ. ಇವುಗಳಲ್ಲಿ ಅನೇಕ ಗರಡಿಗಳು ತಮ್ಮ ಹಳೆಯ ಆಯಾಮಗಳನ್ನು ಕಳೆದುಕೊಂಡಿದ್ದರೂ ಇಂದಿಗೂ ಕ್ರಿಯಾಶೀಲವಾಗಿವೆ. 'ದೇವಕ್ಕಿ ಹೋರಿಯೂ ಮಲ್ಲಣ್ಣ ಪೈಲ್ವಾನನೂ' ಎಂಬ ತಮ್ಮ ಕಥೆಯಲ್ಲಿ ಮನು ಬಳಿಗಾರ್ ಈ ಗರಡಿಗಳ ಸುಂದರ ಚಿತ್ರವೊಂದನ್ನು ಬಿಡಿಸಿದ್ದಾರೆ. ಇದು ಕನ್ನಡದ ಶ್ರೇಷ್ಠ ಕಥೆಗಳಲ್ಲಿ ಒಂದು ಮಾತ್ರವಲ್ಲ, ಉತ್ತಮವಾದ ಎಥ್ನೋಗ್ರಾಫಿಕ್ ಡಾಕ್ಯುಮೆಂಟ್ ಕೂಡ. ಈ ಕಥೆಯಲ್ಲಿ ಬರುವ ಪೈಲ್ವಾನರಾದ ಮಲ್ಲಣ್ಣ ಮತ್ತು ಬಸವಣ್ಣ ರೈತ ಕುಟುಂಬಗಳಿಗೆ ಸೇರಿದವರು. ರೈತ ವರ್ಗಗಳ ಸಂಖ್ಯೆ ಕಡಿಮೆಯಿದ್ದ ಕೆಲವೆಡೆಗಳಲ್ಲಿ ಸೈನ್ಯದ ಪೂರೈಕೆ ಸ್ಥಿರವಾದ ಮತ್ತು ಪೂರ್ಣಾವಧಿಯ ವ್ಯವಸಾಯವಾಗಿ ಬೆಳೆದುಕೊಂಡಿತು. ಪಾಳ್ಯಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪಿತವಾದ್ದು ಇಲ್ಲಿಯೇ. ಅಂಥ ಪ್ರದೇಶಗಳ ಪೈಕಿ ಬೆಂಗಳೂರು ವಿಶೇಷ ಮಹತ್ವ ಪಡೆದಿತ್ತು.

ಹದಿನೆಂಟನೇ ಶತಮಾನದ ಈ ಬರ್ಬರ ವಾತಾವರಣ ಮತ್ತು ಅದನ್ನು ಪೋಷಿಸಿದ ಪಾಳ್ಯಗಳಂಥಾ ಉದ್ದಿಮೆಗಳು ಕೊನೆಗೊಳ್ಳಬೇಕಾದರೆ ಇದ್ದದ್ದು ಒಂದೇ ದಾರಿ. ಸ್ಥಳೀಯ ವ್ಯಾಪಾರ, ವ್ಯವಸಾಯ ಮತ್ತು ಅಧಿಕಾರಗಳ ಮೇಲೆ ನಿಯಂತ್ರಣವಿದ್ದ ಮರಿಯಪ್ಪ, ಬಾಬೂ ಸಾಬ್, ಮಂಗಮ್ಮ, ಪಾಪರೆಡ್ಡಿಗಳಂಥವರನ್ನು ಸದೆಬಡಿದು ಸದೃಢವಾದ ರಾಜಕೀಯ ವ್ಯವಸ್ಥೆಯೊಂದಕ್ಕೆ ಚಾಲನೆ ನೀಡುವುದು. ಅಂಥದ್ದೊಂದು ವ್ಯವಸ್ಥೆಯನ್ನು ಹದಿನೆಂಟನೇ ಶತಮಾನದ ಪೂರ್ವಾರ್ಧದಲ್ಲಿ ಕೇರಳದ ತಿರುವಿತಾಂಕೂರಿನಲ್ಲಿ ಮಾರ್ತಾಂಡವರ್ಮನು (ಆಳ್ವಿಕೆ ೧೭೨೯-೧೭೫೮) ಜಾರಿಗೆ ತರುವಲ್ಲಿ ಯಶಸ್ವಿಯಾಗಿದ್ದ. ಆದರೆ ತಿರುವಿತಾಂಕೂರಿನ ಹೊರಕ್ಕೆ ತನ್ನ ಶಕ್ತಿಯನ್ನು ವ್ಯಾಪಿಸುವ ಆಸೆಯಾಗಲಿ ಸಂಪನ್ಮೂಲಗಳಾಗಲಿ ಅವನಲ್ಲಿ ಇರಲಿಲ್ಲ. ಮುಂದಿನ ದಶಕಗಳಲ್ಲಿ ದಕ್ಷಿಣ ಭಾರತದಲ್ಲಿ ಇದನ್ನು ಸಾಧಿಸುವ ಸಾಮರ್ಥ್ಯ ಪಡೆದುಕೊಂಡಿದ್ದವರು ಮರಾಠರು, ಮೈಸೂರಿನ ಹೈದರ್ ಹಾಗೂ ಟೀಪೂ, ಬ್ರಿಟಿಷರು ಮತ್ತು ಫ್ರೆಂಚರು. ಅಲ್ಲದೆ ಹೈದರಾಬಾದಿನ ನಿಜಾಮರಿಗೂ ಅಂದು ಸಾಕಷ್ಟು ಮಾನ್ಯತೆಯಿತ್ತು. ಆದರೆ ಇವರು ಅಗತ್ಯಕ್ಕಿಂತ ಹೆಚ್ಚಾಗಿಯೇ ತಮ್ಮನ್ನು ಬ್ರಿಟಿಷರ ಮತ್ತು ಫ್ರೆಂಚರ ಹಸ್ತಕ್ಷೇಪಕ್ಕೆ ಒಡ್ಡಿಕೊಂಡು ದುರ್ಬಲರಾಗಿದ್ದರು. ಫ್ರೆಂಚ್ ಶಕ್ತಿ ೧೭೬೦ರ ವಂಡೀವಾಷ್ ಕದನದೊಂದಿಗೆ ಕೊನೆಗೊಂಡಿತ್ತು. ೧೭೬೩ರ ಪ್ಯಾರಿಸ್ ಒಪ್ಪಂದದ ನಂತರ ಫ್ರೆಂಚರ ಪಾಲಿಗೆ ಪಾಂಡಿಚ್ಚೇರಿ, ಮಾಹಿ, ಕಾರೈಕ್ಕಲ್ ಮುಂತಾದ ಕೆಲವೇ ಕೆಲವು ವಸಾಹತುಗಳು ಉಳಿದವು. ಮರಾಠರ ಕಥೆ ಭಿನ್ನವೇ ಆಗಿತ್ತು. ದಕ್ಷಿಣದ ತಮಿಳುನಾಡಿನಿಂದ ಉತ್ತರದ ಬಂಗಾಳ, ರಾಜ್‌ಪುತಾನಾವರೆಗೆ ಹಸಿರು ಕಂಡಲ್ಲೆಲ್ಲಾ ಮೇಯತೊಡಗಿದ್ದರಿಂದ ಅವರಿಗೆ ಯಾವ ಪ್ರದೇಶವನ್ನೂ ತಮ್ಮ ಪೂರ್ಣ ನಿಯಂತ್ರಣಕ್ಕೆ ತಂದುಕೊಳ್ಳುವ ಸಾಮರ್ಥ್ಯ ಇಲ್ಲದಂತಾಯ್ತು. ಹೀಗಾಗಿ ದಕ್ಷಿಣ ಭಾರತದಲ್ಲಿ ಉಳಿದದ್ದು ಎರಡೇ ಶಕ್ತಿಗಳು. ಮೈಸೂರು ಮತ್ತು ಇಂಗ್ಲಿಷರ ಈಸ್ಟ್ ಇಂಡಿಯಾ ಕಂಪೆನಿ. ಯಾವುದೇ ಸದೃಢವಾದ ವ್ಯವಸ್ಥೆಯ ಸ್ಥಾಪನೆ ಈ ಎರಡು ಶಕ್ತಿಗಳಿಂದಲೇ ನಡೆಯಬೇಕಿತ್ತು.

ಈ ನಿಟ್ಟಿನಲ್ಲಿ ಮೊದಲ ಹೆಜ್ಜೆ ಇಟ್ಟದ್ದು ಹೈದರ್. ೧೭೬೦ರ ದಶಕದಲ್ಲಿ ಕರ್ನಾಟಕದ ಬಹುತೇಕ ಪಾಳೆಗಾರರನ್ನು ಅಲುಗಿಸಿಹಾಕುವಲ್ಲಿ ಹೈದರ್ ಯಶಸ್ವಿಯಾದ. ಅಲ್ಲದೆ ಮಲಬಾರ್ ಮತ್ತು ತಮಿಳುನಾಡಿನ ವಿವಿಧ ಪ್ರದೇಶಗಳ ಮೇಲೆಯೂ ಹೈದರ್‌ನ ಹಲ್ಲೆ ನಡೆಯಿತು. ಆದರೆ ಹೈದರ್ ಈ ಸ್ಥಳೀಯರ ಆಳ್ವಿಕೆಯನ್ನು ಕೊನೆಗೊಳಿಸಲಿಲ್ಲ. ಆ ಹೊಣೆಗಾರಿಕೆಯನ್ನು ಟೀಪೂ ವಹಿಸಿಕೊಂಡ.

ಇದನ್ನು ಸಾಧಿಸಲು ಟೀಪೂ ಕೈಗೊಂಡ ಕ್ರಮವೆಂದರೆ ತನ್ನ ರಾಜಧಾನಿಯ ಆಸುಪಾಸು ಪ್ರದೇಶಗಳಲ್ಲಿ ಕೋಟೆಗಳನ್ನು ನೆಲಸಮಗೊಳಿಸುವುದು. ಕೋಟೆಗಳಿಲ್ಲದ ಮತ್ತು ಕೋಟೆಗಳನ್ನು ನಿಯಂತ್ರಿಸುವ ಸ್ಥಳೀಯ ಶಕ್ತಿಗಳಿಲ್ಲದ ಹೊಸ ಆರ್ಥಿಕ-ರಾಜಕೀಯ ವ್ಯವಸ್ಥೆಯನ್ನು ಟೀಪೂ ಪರಿಕಲ್ಪಿಸಿಕೊಂಡಿರಲು ಸಾಧ್ಯ. ಮದ್ದೂರು ಮತ್ತು ರಾಜಧಾನಿಯಾದ ಶ್ರೀರಂಗಪಟ್ಟಣದ ಸುತ್ತಮುತ್ತ ಕೋಟೆಗಳು ಇರಲಿಲ್ಲವೆಂದು ಬುಕಾನನ್ ತಿಳಿಸುತ್ತಾನೆ. ಮದ್ದೂರಿನ ಕೋಟೆ ಒಡೆಯ ವಂಶದವರು ನಿರ್ಮಿಸಿದ್ದು, ಟೀಪೂ ಅದನ್ನು ಉರುಳಿಸಿ ಹಾಕಿದ. ಚನ್ನಪಟ್ಟಣದಲ್ಲಿ ಕೋಟೆ ಇರಲಿಲ್ಲ. ಹಳೆಯ ಕೋಟೆ ಬೇಚಿರಾಕುಗೊಂಡಿತ್ತು. ಬಿಡದಿಯಲ್ಲೂ ಕೋಟೆ ಇರಲಿಲ್ಲ. ಮಂಡ್ಯದ ಕೋಟೆಯನ್ನೂ ಟೀಪೂ ಧ್ವಂಸಗೊಳಿಸಿದ್ದ. ಕೆಂಗೇರಿ ಮತ್ತು ಪಿರಿಯಾಪಟ್ಟಣ ಟೀಪೂ ಉರುಳಿಸಿದ ಇತರ ಕೋಟೆಗಳು. ರಾಜಧಾನಿಯ ಸಮೀಪದಲ್ಲೇ ಅಲ್ಲ, ದೂರದ ಪ್ರದೇಶಗಳಲ್ಲಿಯೂ ಟೀಪೂ ಕೋಟೆಗಳನ್ನು ನೆಲಸಮಗೊಳಿಸಿದ್ದಕ್ಕೆ ಉದಾಹರಣೆಗಳಿವೆ. ಉಚ್ಚಂಗಿದುರ್ಗದ ಕೋಟೆ ಅವುಗಳಲ್ಲಿ ಒಂದು. ಸದೃಢವಾದ ಆಡಳಿತ ವ್ಯವಸ್ಥೆ ಜಾರಿಗೊಳ್ಳಬೇಕಾದರೆ ಕೋಟೆ ಕೇಂದ್ರಿತ ಸ್ಥಳೀಯ ಶಕ್ತಿಗಳ ಉನ್ಮೂಲನೆ ಅತ್ಯಗತ್ಯವೆಂದು ಟೀಪೂ ಅರಿತುಕೊಂಡಿದ್ದನ್ನು ಅವನ ಕಾರ್ಯಾಚರಣೆಗಳು ಸ್ಪಷ್ಟಪಡಿಸುತ್ತವೆ. ಈ ಶಕ್ತಿಗಳು ನೆಲೆನಿಂತಷ್ಟು ಕಾಲ ವ್ಯಾಪಾರ ಮತ್ತು ವ್ಯವಸಾಯಗಳ ಮೇಲೆ ಸಮರ್ಪಕವಾದ ನಿಯಂತ್ರಣ ಸಾಧ್ಯವಿರಲಿಲ್ಲ.



ಟೀಪೂನ ಪದ್ಧತಿಗೆ ಅವನ ಅಕಾಲ ಮರಣದಿಂದ ಕಡಿವಾಣ ಬಿತ್ತು. ಮುಂದೆ ಸಬ್ಸಿಡಿಯರಿ ಅಲಯನ್ಸ್ ಜಾರಿಗೊಂಡಿತು. ಅದರೊಂದಿಗೆ ಪಾಳ್ಯಗಳ ಯುಗ ಮುಗಿಯಿತು.

ಟೀಪೂನ ಪಡೆಯಲ್ಲಿ ಪಾಳ್ಯಗಳಿಂದ ಬಂದ ಸೈನಿಕರು ಇದ್ದಿರಲೇಬೇಕು. ಆದರೆ ಅವರ ಸಂಖ್ಯೆ ಮೂರನೇ ಆಂಗ್ಲ-ಮೈಸೂರು ಯುದ್ಧದ ನಂತರ ಕಡಿಮೆಯಾಯ್ತು. ೧೭೯೦ರಲ್ಲಿ ೨೦,೦೦೦ ಖಾಸಗಿ ಸೇವಕರಿದ್ದರು. ೧೭೯೩ರಲ್ಲಿ ಇದು ೬೦೦೦ಕ್ಕೆ ಇಳಿಯಿತು. ಅಲ್ಲದೆ ಖಾಸಗಿ ಕಾಲಾಳುಗಳ ಸಂಖ್ಯೆ ೪೫,೦೦೦ದಿಂದ ೨೫,೦೦೦ಕ್ಕೆ ಮತ್ತು ಖಾಸಗಿ ಅಶ್ವದಳ ೧೨,೦೦೦ದಿಂದ ೬೦೦೦ಕ್ಕೆ ಇಳಿಯಿತು. ೧೭೯೮ರ ಹೊತ್ತಿಗೆ ಖಾಸಗಿ ಕಾಲಾಳುಗಳು ೧೫,೩೦೦ ಆಗಿದ್ದರು. ಕಾಯಂ ಸೈನಿಕರ ಸಂಖ್ಯೆಯಲ್ಲೂ ಗಮನಾರ್ಹವಾದ ಇಳಿತ ಸಂಭವಿಸಿತು. ೧೭೯೦ರಲ್ಲಿ ೯೦,೦೦೦ ಕಾಯಂ ಕಾಲಾಳುಗಳಿದ್ದಾಗ ೧೭೯೩ರಲ್ಲಿ ಇದ್ದದ್ದು ಕೇವಲ ೩೦,೦೦೦. ೧೭೯೮ ಜೂನ್‌ನಲ್ಲಿ ಇದು ೨೦,೦೦೦ ಆಗಿತ್ತು. ಯುದ್ಧದ ಸಿದ್ಧತೆಯಿಂದಾಗಿ ಜುಲೈನಲ್ಲಿ ಇದನ್ನು ಟೀಪೂ ೩೦,೦೦೦ಕ್ಕೆ ಏರಿಸಿದ. ಆದರೂ ಇದು ಹಳೆಯ ೯೦,೦೦೦ದ ಅರ್ಧದಷ್ಟೂ ಆಗಲಿಲ್ಲ. ಮೂರನೇ ಆಂಗ್ಲ-ಮೈಸೂರು ಯುದ್ಧದ ನಂತರ ಟೀಪೂ ತನ್ನ ರಾಜ್ಯದ ಅರ್ಧ ಭಾಗವನ್ನು ಬ್ರಿಟಿಷರಿಗೆ ಒಪ್ಪಿಸಲು ನಿರ್ಬಂಧಿತನಾದದ್ದೇ ಸೈನಿಕರ ಸಂಖ್ಯೆ ಇಳಿಮುಖವಾಗಲು ಕಾರಣ.

ರೈತ ಹಿನ್ನೆಲೆಯಿಂದ ಬಂದ ಸೈನಿಕರಿಗೆ ಸಬ್ಸಿಡಿಯರಿ ಅಲಯನ್ಸ್‌ನಿಂದ ವಿಶೇಷವಾದ ನಷ್ಟ ಏನೂ ಆಗಿರಲಿಕ್ಕಿಲ್ಲ. ಅವರು ತಮ್ಮ ಮೂಲ ವೃತ್ತಿಗಳಲ್ಲಿ ಬೇರೂರಿಕೊಂಡರು. ಆದರೆ ಬೆಂಗಳೂರಿನಂಥ ಪ್ರದೇಶಗಳಲ್ಲಿ ಪೂರ್ಣಾವಧಿ ಸೈನಿಕರಾಗಿ ಪಾಳ್ಯಗಳನ್ನು ಸೇರಿದ್ದವರಿಗೆ ಇದರಿಂದ ದೊಡ್ಡ ಹೊಡೆತವೇ ಸಂಭವಿಸಿರಬಹುದು. ನೂರಾರು ಜನ ನೌಕರಿ ಕಳೆದುಕೊಂಡರು. ಭಾರತದಾದ್ಯಂತ ಹತ್ತೊಂಬತ್ತನೇ ಶತಮಾನದ ಮೊದಲ ದಶಕಗಳಲ್ಲಿ ಲಕ್ಷಾಂತರ ಜನ ಸೈನಿಕರು ನಿರುದ್ಯೋಗಿಗಳಾದರೆಂದು ಕೆಲ ಇತಿಹಾಸಕಾರರು ಹೇಳುತ್ತಾರೆ. ಇದು ಅತಿಶಯೋಕ್ತಿಯ ಮಾತು. ಆದರೆ ಸಾವಿರಾರು ಸೈನಿಕರು ಉದ್ಯೋಗ ಕಳೆದುಕೊಂಡರು ಎಂಬುದರಲ್ಲಿ ಸಂಶಯವಿಲ್ಲ. ಬೆಂಗಳೂರಿನ ಪಾಳ್ಯಗಳಲ್ಲಿ ಮುಸ್ಲಿಂ ಜನಾಂಗದವರೇ ಅಧಿಕ ಸಂಖ್ಯೆಯಲ್ಲಿ ಇದ್ದಿರಬಹುದು. ಇವರಲ್ಲಿ ಹೆಚ್ಚು ಸ್ಥಿತಿವಂತರಾದವರು ವ್ಯಾಪಾರಕ್ಕೆ ತಿರುಗಿದರೆಂದೂ ಆರ್ಥಿಕವಾಗಿ ಹಿಂದುಳಿದವರು ಕೃಷಿಯಲ್ಲಿ ತೊಡಗಿದರೆಂದೂ ಬುಕಾನನ್ ಹೇಳುತ್ತಾನೆ. ಆದರೆ ಇದು ಮುಸಲ್ಮಾನರಿಗೆ ಮಾತ್ರವಲ್ಲ, ಬುಕಾನನ್ ಕಂಡಿರದ ನಾಗೇಗೌಡ, ಗೋವಿಂದಯ್ಯ, ಮಂಗಮ್ಮ, ಗರುಡಾಚಾರ್ಯ, ಸಿಂಗಯ್ಯ, ರಾಮಸ್ವಾಮಿ, ಮರಿಯಪ್ಪ, ಕರಿಯಣ್ಣ, ಮುನಿರೆಡ್ಡಿ, ಪಾಪರೆಡ್ಡಿಗಳಂಥಾ ಎಲ್ಲ ಪಾಳ್ಯೋದ್ಯಮಿಗಳಿಗೂ ಅನ್ವಯಿಸುವ ಮಾತು. ಸುಮಾರು ನೂರು ವರ್ಷಗಳ ಕಾಲ ಮೆರೆದ ಪಾಳ್ಯೋದ್ಯಮಿಗಳು ೧೮೦೦ರ ಹೊತ್ತಿಗೆ ಅವನತಿ ಹೊಂದಿದರು. ಇತರ ವ್ಯವಸಾಯಗಳ ಕಡೆಗೆ ತಿರುಗತೊಡಗಿದರು.

'ಹಿಸ್ಟರಿ ರಿಪೀಟ್ಸ್ ಇಟ್‌ಸೆಲ್ಫ್' ಎಂದು ಮಾರ್ಕ್ಸ್ ಬಹಳ ಹಿಂದೆಯೇ ಹೇಳಿದ್ದಾನೆ. ಮೊದಲು ಟ್ರ್ಯಾಜಡಿಯಾಗಿ. ನಂತರ ಫಾರ್ಸ್ ಆಗಿ. ಇಂದು ಪಾಪರೆಡ್ಡಿಗಳ ಪ್ರಪಂಚ ಫಾರ್ಸುಗೊಂಡು ನಮ್ಮ ಮುಂದೆ ಮತ್ತೆ ತಲೆಯೆತ್ತುತ್ತಿದೆಯೇ ? 'ತಾಜಾ ಬೆಂಡೆಕಾಯಿ, ಮೂಲಂಗಿ ಕೊಳ್ಳಲು ನಮ್ಮ ಹವಾನಿಯಂತ್ರಿತ ಶೋ-ರೂಮಿಗೆ ಭೇಟಿಕೊಡಿ' ಎಂಬ ಜಾಹೀರಾತುಗಳು ಹೊರಡುತ್ತಿರುವಾಗ, ದಿನ ಬೆಳಗಾದರೆ ಪತ್ರಿಕೆಯಲ್ಲಿ ಯಾವ ರೆಡ್ಡಿ ಎಷ್ಟು ತಿಂದ ಎಂಬ ಸುದ್ದಿಯನ್ನೇ ಓದಲು ನಿರ್ಬಂಧಿತನಾಗುವಾಗ, ತಾನು ಇಷ್ಟು ದಿನ ವಾಸವಾಗಿದ್ದ ವಠಾರಕ್ಕೆ ಥಟ್ಟನೆ ಒಂದು ದಿನ ಬಚ್ಚೇಗೌಡ ಲೇಔಟ್ ಎಂದು ನಾಮಕರಣವಾಗಿ ಬಿಡುವಾಗ, ''ಇಲ್ಲ'' ಎಂದು ಹೇಳುವ ಧೈರ್ಯ ಈ ಲೇಖಕನಿಗಿಲ್ಲ.

ಮನು ವಿ. ದೇವದೇವನ್
ನಂ. ೧೪೯, 'ಹನುಮಂತು ನಿಲಯ', ೪ನೇ ಕ್ರಾಸ್, ವೆಂಕಟಗಿರಿಯಪ್ಪ ಬಡಾವಣೆ
೧ನೇ ಬ್ಲಾಕ್, ದೊಡ್ಡಬೊಮ್ಮಸಂದ್ರ, ವಿದ್ಯಾರಣ್ಯಪುರ, ಬೆಂಗಳೂರು - ೫೬೦ ೦೯೭

# ಗೊಂದಲಪುರದಲ್ಲಿ ಇಸ್ವಾಸ್ ಮತ !

ಬೀರಣ್ಣ

**ಈ** ರಾಂಜಣ ಊರಿಗೆ ಬಂದು ಹೋದರೆ ಗೊಂದಲಪುರವನ್ನೇ ಗೊಂದಲದಲ್ಲಿ ಬೀಳಿಸುವಂಥ ಕೈಂಕರ್ಯ ಮಾಡಿಯೇ ಹೋಗುವವನು !

ಈ ಬಾರಿ ಬಂಗಾರಿಯ ಹೋಟೆಲಿನಲ್ಲಿ ಬಿಸಿಬಿಸಿ ಬೋಂಡ ಮೆಲ್ಲುತ್ತ ನಡೆಸಿದ ಗುಸಗುಸ ಸಭೆಯಲ್ಲಿ ಊರ ಯಜಮಾನ ಗುರುವಜ್ಜನ ಮೇಲೆ ಅವಿಶ್ವಾಸ ನಿರ್ಣಯ ಮಂಡಿಸಿ, ಮತ ಹಾಕಿಸಿ, ಆತನ ಯಜಮಾನಿಕೆ ಕಿರೀಟವನ್ನು ಕಿತ್ತು ಮಾಸ್ತಿಯ ತಲೆಗೆ ಹಾಕುವ ಠರಾವು ಪಾಸಾಯಿತಂತೆ !

ಬಂಗಾರಿ ಅಂಗಡಿಯಿಂದ ಸುದ್ದಿ ಪ್ರಸಾರವಾಗಿ ಊರಿನ ಪ್ರತಿಯೊಬ್ಬರೂ ಅದನ್ನು ಟಿ.ವಿ. x ೧೬ ಕಾರ್ಯಕ್ರಮದಂತೆ ನಿಂತಲ್ಲಿ ಕುಳಿತಲ್ಲಿ ಚರ್ಚಿಸಿದರು. ಬಂಡೇಶ್ವರ ಮಠದಲ್ಲಿ – ಇದನ್ನು ಕೆಲವರು ಆಶ್ರಮ ಎಂದೂ ಕರೆಯುತ್ತಾರೆ, – ವಾದ-ವಿವಾದ, ಚರ್ಚೆ ಮುಂದುವರಿಯಿತು. ಕೆಲವರ ಬಾಯಲ್ಲಿ ಆ ಪ್ರಕರಣಕ್ಕೆ ಇಸ್ವಾಸ್ ಮತ ಎಂದಾಯಿತು. ಜೊತೆಗೆ ಊರು ಗುರುವಜ್ಜನ ಪರ-ವಿರೋಧ ಹೀಗೆ ಎರಡು ಪಾರ್ಟಿಯಾಗುವ ಅಪಾಯಕ್ಕೆ ತಲುಪಿತು.

ಗೊಂದಲಪುರದ ಇತಿಹಾಸದಲ್ಲಿ ಯಾವ ಯಜಮಾನನಿಗೂ ಇಸ್ವಾಸಮತ ಎದುರಿಸುವ ಪೀಕಲಾಟ ಬಂದಿರಲಿಲ್ಲ. ಒಂದು ಕ್ಷಣ ಗುರುವಜ್ಜನ ತಲೆಗೆ ಜ್ಞಾನೋದಯವಾದಂತೆ ಬೆಳಕು ಮೂಡಿತು. 'ಯಜಮಾನ್ಕೆ ಯಾವ್ ಸಾಸ್ವಿತ ತಗೊಳೊ ಅತ್ಲಾಗೆ !'

ಎಂದಿನಂತೆ ಗುರುವಜ್ಜ ಬೇವಿನ ಕಟ್ಟೆಯಲ್ಲಿ ಕುಳಿತು ಊರಿನ ಮೇಲೆ ಗಮನ ಹರಿಸಿದ. ಅತ್ತ ಸುಳಿದ ಕೆಲವರಂತೂ ಏನೂ ನಡೆಯಲಿಲ್ಲ ಎಂಬಂತೆ ತಮ್ಮ ತಮ್ಮ ಕೆಲಸ ಕಾರ್ಯಗಳಲ್ಲಿ ತೊಡಗಿಕೊಂಡಿದ್ದರು. ಯಾರೂ ತನ್ನತ್ತ ಗಮನವನ್ನೇ ನೀಡುತ್ತಿಲ್ಲ! ಯಾರು ತನ್ನ ಕಡೆಗಿದ್ದಾರೆ. ಯಾರು ಇಲ್ಲ!

ಜೊತೆಗೆ ಈ ಇಸ್ವಾಸ್ ಮತ ಈವರೆಗೆ ತಾನು ಕೇಳರಿಯದ ವಿಷಯ. ಅದು ಹೇಗಿರುತ್ತದೋ ಏನೋ ಎಂಬ ಗೊಂದಲ !

ಗಯ್ಯಾಳಿ ಗಂಗೆ ತಲೆಯ ಮೇಲೊಂದು, ಕಂಕುಳಲ್ಲೊಂದು ಕೊಡ ಸಹಿತ ನಿಧಾನವಾಗಿ ನಡೆದು ಬರುತ್ತಿದ್ದಳು. ''ಲೇ ಗಂಗಕ್ಕಾ, ಯಜಮಾನ ಮನೇಲಿಲ್ವ ?'' ಎಂದ ಗುರುವಜ್ಜ.

''ಮನೇಲೇ ಅವ್ನೆ. ನೀನೂವೆ ವತ್ತಾರೆಗೆ ಎದ್ದು ಇನಾಯ್ಕನಂಗೆ ಕಟ್ಟೆಮ್ಯಾಲ್ ಕೂತ್ಕತ್ತೀಯೆ. ಈ ಊರ್ನಲ್ಲಿ ಏಳೋರು ಕೇಳೋರು ಯಾರೂ ಇಲ್ಲ. ಬೋರೆಲ್ ಕೆಟ್ಟು ತಿಂಗ್ಳಾಯ್ತಲ್ಲ. ಯಾವ್ ಗ್ರಾಸ್ತಾನಾದ್ರೂ ಏನಾಯ್ತು ಎತ್ತಾಯ್ತು ಅಂತ ಇಚಾರಿಸಿದ್ದಾರಾ ?'' ಎಂದು ಆಕೆ ಗುರುವಜ್ಜನಿಗೇ ತಿರುಗೇಟು ನೀಡಿ, ಮನೆಯ ಕಡೆ ಹೆಜ್ಜೆ ಹಾಕಿದಳು !

ಗುರುವಜ್ಜನ ಪುಣ್ಯಕ್ಕೆ ಇಬೂತಿಧಾರಿ ತರ್ಲೆ ತಿಪ್ಪ ಬೀಡಿಯನ್ನು ಹಲ್ಲಿನಲ್ಲಿ ಕಚ್ಚಿ ಹಿಡಿದೇ ಹೊಗೆ ಬಿಡುತ್ತ ಬೇವಿನಕಟ್ಟೆಗೆ ಬಂದ. ಗುರುವಜ್ಜನ ಮನಸ್ಸಿಗೆ ಸ್ವಲ್ಪ ಸಮಾಧಾನವೆನ್ನಿಸಿತು.

''ಲೋ ತರ್ಲೆ, ಬಾರ್ಲಾ ಇಲ್ ಕೂತ್ಕೋ !'' ಎಂದು ಪೂಸಿಯ ದನಿಯಲ್ಲಿ ಹೇಳಿದ.

''ಓಹೋ... ನಿನ್‌ತಾವ ಬಂದ್ ಕೂತ್ಕಂಡ್ರೆ ಉದ್ದಾರಾಯ್ತದೆ. ನೀನೇನು ಹೊಲ ಮನೇಲಿ ಗೇಯ್ಬೇಕ, ಆಡು ಕುರಿ ಮೇಯಿಸ್ಬೇಕ. ಸಂತೆಗೋಗಿ ಸಾಮಾನ್ ಸರಂಜಾಮ್ ತರ್ಬೇಕ ? ಮನೇಲಿ ಮುದ್ದೆ ಮಾಡಾಕ್ತಾರೆ. ಒಟ್ಟೆ ತುಂಬಾ ಉಂಡ್ಬುಟ್ಟು ಇಲ್ ಕೂತ್ಗಂಡು ಯಜಮಾನ್ಕೆ ಮಾಡ್ತೀಯೆ !'' ಎಂದು ಸಿಡಿಮಿಡಿಗೊಂಡವನಂತೆ ನಟಿಸುತ್ತ ತರ್ಲೆ ತಿಪ್ಪ ಬಂದು ಕುಳಿತ.

''ಆದೇನ್ಲಾ ಇಸ್ವಾಸ್ ಮತ ಅಂತ ಪಿಸ್ಗುಟ್ತಾರಂತಲ್ಲ !''

''ಓಹೋ... ನಿನ್ ಸಿಮ್ಮಾಸ್ನ ಒಂಟೋಯ್ತದಲ್ಲ ಅಂತ ಆಗ್ಲೆ ಒಟ್ಟೆ ಕಿತ್ಗಂಡಿರುವಂಗದೆ ! ಇಸ್ವಾಸ್ ಮತ ಅಂದ್ರೆ ನೀನು ಒಲ್ಡಾಗೋದೆ, ಒಗೆಸೊಪ್ ಒತ್ತರ್ಸಿ ಒತ್ತರ್ಸಿ ನಿನ್ ಬುದ್ಧಿ ಮಂದಾಗ್ಬುಟ್ಟದೆ. ನಿನ್ ಯಜಮಾನ್ಕೆ ಮ್ಯಾಲೆ ಊರಿನೋರ್ಗೆ ಇಸ್ವಾಸ ಇಲ್ಲ. ನಿನ್ ಸಿಮ್ಮಾಸ್ನ ಕಿತ್ತು ನಸ್ನಂಗೆ ಅರೇದೋರ್ಗೆ ಕೊಡ್ತಾರಂತೆ. ಅದ್ಕೇ ಇಸ್ವಾಸ್ ಮತ ಅನ್ನೂದು !''

''ಅದೆಂಗ್ಲೆ ಆಯ್ತದೆ ? ನಾನೇನ್ ಸತ್ತೋಗಿದ್ದೀನಾ ? ಅದೆಂಗೆ ನನ್ ಯಜಮಾನ್ಕೆ ಕಿತ್ತಾಕ್ತಾರೆ !''

''ಈಗ ರೂಲೀಸ್‌ಗಳೆಲ್ಲ ಚೇಂಜಾಗ್ಬುಟ್ಟವೆ ಬಲ್ಕಾ ? ಪಂಚಾಯ್ತಿ ಮೆಂಬರ್ಗಳೆಲ್ಲ ಸೇರಿ ಓಟಾಕಿ ನಿನ್ ಯಜಮಾನ್ಕೆ ಕಿತ್ತು ಅತ್ಲಾಗ್ ಎಸೀಬೌದು !''

''ಲೇಲೇ ಅದೆಂಗ್ಲಾ ಆಯ್ತದೆ ?'' ಗುರುವಜ್ಜನಿಗೆ ನಿಜವಾಗಿ ಗಾಬರಿಯಾಯಿತು.

''ಪಂಚಾಯ್ತಿ ಅಂದ್ರೆ ಅಂಗ್ಯೇ ! ಸಪೋಸ್, ನಿನ್ ಕಡೆ ಜನ ನಿಂಗೇ ಓಟಾಕಿದ್ರೆ ನೀನು ಗೆಲ್ತೀಯೆ. ಸಿಮ್ಮಾಸ್ನಾನು ಉಳಿತ್ತೆ !''

''ತಿಪ್ಪಾ... ನಮ್ ಕಡೇಗೂ ಜನ ಸೇರಿಸ್ಬೇಕಲ್ಲ !'' ಎಂದು ಗುರುವಜ್ಜ ಪೂಸಿಮಾಡುವ ದನಿಯಲ್ಲಿ ಹೇಳಿ ತರ್ಲೆತಿಪ್ಪನ ಸಹಕಾರ ಯಾಚಿಸಿದ.

''ಇಲ್ಲೇ ಕೂತಿದ್ರೆ ಅವೆಲ್ಲ ನಡೆಯಂಗಿಲ್ಲ ಯಜ್‌ಮಾನ ! ನನ್ನನ್ನ ಏಜೆಂಟು ಅಂತ ನೇಮಿಸ್ಕಂಡು, ಜೋಬ್ನಲ್ಲಿ ರೂಪಾಯ್ ತುಂಬಿಸ್ಕಂಡು ಕ್ಯಾನ್ವಾಸ್ ಮಾಡ್ಬೇಕು...''



''ಅದೇ ಎಲೆಕ್ಷನ್ ಟೇಮ್ನಲ್ಲಿ ಪಾರ್ಟಿಗಳವ್ರು ಮಾಡ್ತಾರಲ್ಲ ಅಂಗೆ !''

''ಉಸ್ಲಾ ! ಇಡ್ಡೆ ಜಾಡು !''

ಅಷ್ಟರಲ್ಲಿ ಮನೆಯ ಕಡೆಯಿಂದ ಗಯ್ಯಾಳಿ ಗಂಗೆಯ ಸೈರನ್ ಕೇಳಿಸಿತು. ತಿಪ್ಪ ಗಲಿಬಿಲಿಯಿಂದ ಮನೆಯ ಕಡೆ ಪೇರಿ ಕಿತ್ತ.

ಗುರುವಜ್ಜನಿಗೆ ನಿಜವಾಗಿ ಹೆದರಿಕೆ ಪ್ರಾರಂಭವಾಯಿತು. ಯಜಮಾನಿಕೆಯ ಗತ್ತು ಇಲ್ಲದೆ ಗೊಂದಲಪುರದಲ್ಲಿ ಬದುಕುವುದು ಹೇಗೆಂಬ ಆತಂಕ...

ಕಾಲೇಜು ಕನ್ಯೆ ಕಮಲಿ, ನೀರಿನ ಕೊಡದ ಸಹಿತ ಮೊಬೈಲಿನ ಇಯರ್ ಫೋನಿನ ಮೂಲಕ ಎಫ್‌ಎಂ ರೇಡಿಯೋ 'ಕೊತ್ತಂಬ್ರಿ'ಯಲ್ಲಿ ಹಾಡು ಕೇಳಿಸಿಕೊಳ್ಳುತ್ತ ಬೇವಿನಕಟ್ಟೆಯ ಬಳಿ ಕಾಣಿಸಿಕೊಂಡಳು. ಕಾಲೇಜು ಹುಡುಗರು ಆಕೆಯನ್ನು ಚುಡಾಯಿಸಲು ಆಕೆಗೆ 'ಆಪರೇಷನ್ ಕಮಲಿ' ಎಂದು ಅಡ್ಡ ಹೆಸರಿಟ್ಟಿದ್ದರು. ಪ್ರಾಯಶಃ ಕರ್ನಾಟಕದ ರಾಜಕೀಯ ಬೆಳವಣಿಗೆಯಿಂದ ಪಡೆದ ಸ್ಫೂರ್ತಿ ಅದು.

ಕಮಲಿ ಬುದ್ಧಿವಂತೆ. ಪೇಪರುಗಳಲ್ಲಿ ಬರುವ ಸುದ್ದಿ-ಗಿದ್ದಿ ಓದಿ ತಿಳಿದುಕೊಂಡಿರುವವಳು. ಗುರುವಜ್ಜ ಆಕೆಯ ಸಹಾಯ ಕೇಳಲು ನಿರ್ಧರಿಸಿದ. ''ಲೇ ತಾಯವ್ವ, ಆ ಬೊಡ್ಡಿಮಗ ಬೋರೆಲ್ ರಿಪೇರಿ ಮಾಡೋವ್ನು ಇನ್ನು ಬಂದೇ ಇಲ್ವ !'' ಎಂದು ಆಕೆಯ ಸಹಾನುಭೂತಿ ಗಳಿಸಲು ಪ್ರಯತ್ನಿಸಿ, ಪಿಸುದನಿಯಲ್ಲಿ ಕೇಳಿದ : ''ಅಲ್ಲಾ ಕಣ್ಲ ಮಗ, ಇಸ್ವಾಸ್‌ಮತ ಅಂತಾರಲ್ಲ, ಅಂಗಂದ್ರೇನು !'' ಎಂದ.

''ಯಾಕ್ ತಾತಾ, ಕೆಟ್ ಸಪ್ನ ಬಿತ್ತಾ ? ನಿದ್ದೆ ಚಂದಾಗ್ ಬಂದಿಲ್ವ ?'' ಎಂದು ಕೀಟಲೆ ದನಿಯಲ್ಲಿ ಕೇಳಿದಳು.

ಗುರುವಜ್ಜ ಪೆಚ್ಚಾದ – ತಾನು ಕೇಳಬಾರದ್ದೇನಾದರೂ ಕೇಳಿಬಿಟ್ಟೆನೆ ಎಂದು. ''ಅಂಗಲ್ಲ ತಾಯವ್ವ, ಆ ಮನೆಮುರ್ಕ ತರ್ಲೆ ಅದೇನು ಅಂತ ಸರಿಯಾಗ್ ಏಳ್ದೇನೆ ಒಂಟೋದ. ನೀನೆಂಗುವೆ ಓದ್ದೋಳಲ್ವ...'' ಎಂದು ಆಕೆಯನ್ನು ಓಲೈಸಿದ.

''ಇಸ್ವಾಸ್ ಮತ ಅಂದ್ರೆ ಇನ್ನೇನೂ ಇಲ್ಲ ತಾತಾ. ನೋ ಕಾನ್ಪಿಡೆನ್ಸು ಅಂತ'' ಅಂದವಳೆ, ನೀರು ತುಳುಕಿಸುತ್ತ ನಡೆದುಹೋದಳು.




ಅಕ್ಟೋಬರ್ ೩೧ರಂದು ಬೆಂಗಳೂರಿನ ಮಿಥಿಕ್ ಸೊಸೈಟಿ ಸಭಾಂಗಣದಲ್ಲಿ ನವಕರ್ನಾಟಕದ ಮೂರು ಪುಸ್ತಕಗಳ ಲೋಕಾರ್ಪಣೆ ಸಮಾರಂಭ ನಡೆಯಿತು. ಡಾ॥ ರಾಮಲಿಂಗಪ್ಪ ಟಿ. ಬೇಗೂರು ಅವರ 'ಪರಕಾಯ', ಸಾದತ್ ಹಸನ್ ಮಾಂಟೋ ಅವರ 'ದೇಶ ವಿಭಜನೆಯ ಕಥೆಗಳು' ಅನು : ಫಕೀರ್ ಮುಹಮ್ಮದ್ ಕಟ್ಪಾಡಿ ಮತ್ತು ಎನ್ಕೆ ಅವರ 'ಬದುಕು – ಕುತೂಹಲದ ಒಂದು ಸರಕು' – ಇವು ಅನಾವರಣಗೊಂಡ ಪುಸ್ತಕಗಳು.

ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ, ಶ್ರೀ ಬೊಳುವಾರು ಮಹಮದ್ ಕುಂಞಿ ಮತ್ತು ಡಾ॥ ರಾಮಲಿಂಗಪ್ಪ ಟಿ. ಬೇಗೂರು.

ಗುರುವಜ್ಜನ ಗೊಂದಲ ನಾಲ್ಕುಪಟ್ಟು ಹೆಚ್ಚಿತು. ಅದರ ಜೊತೆಗೆ ತನ್ನ ಯಜಮಾನಿಕೆ ಕಿತ್ತುಕೊಳ್ಳಲು ಸಂಚು ಮಾಡುತ್ತಿರುವವರನ್ನು ಒಂದು ಕೈ ನೋಡಿಯೇಬಿಡುತ್ತೇನೆ ಎಂಬ ಒಂದು ಬಗೆಯ ಹುಂಬ ಧೈರ್ಯವೂ ಬಂದಿತು.

ತರ್ಲೆ ತಿಪ್ಪ ಕುರಿ ಕಾಯುವ ಕೆಲಸವನ್ನು ಹೇಗೋ ಗಯ್ಯಾಳಿ ಗಂಗೆಯ ತಲೆಗೇ ಕಟ್ಟಿ, ಎಲೆಕ್ಷನ್ ಏಜೆಂಟನ ಗತ್ತಿನಲ್ಲಿ ನಡೆಯುತ್ತ ಮತ್ತೆ ಬೇವಿನಕಟ್ಟೆಗೆ ಬಂದ.

ಗುರುವಜ್ಜ ಪಿಸುದನಿಯಲ್ಲಿ ಕೇಳಿದ. ''ಲೋ ತರ್ಲೆ... ಈ ಮುದ್ಕ ಇಂಗಂತಾನಲ್ಲ ಅಂದ್ಕಬ್ಯಾಡ. ನೀನು ಯಾರ್ ಕಡೆಗೆ ಏಳ್ಲ ?''

''ನೋಡಿದ್ಯ ನಿನ್ ಓಲ್ಡ್ ಬುದ್ಧಿ ತೋರಿಸಿದ್ಯೆಲ್ಲ. ನಾನ್ಯಾವಾಗ್ಲೂ ನಿನ್ ಪಕ್ಸ ಅಲ್ವ ?'' ಆದರೂ ತರ್ಲೆ ತಿಪ್ಪನಿಗೆ ಈ ಮುದುಕ ಯಜಮಾನಿಕೆ ನನಗೇ ವಹಿಸಿಕೊಟ್ಟರೆ ಈತನ ಗಂಟೇನು ಮುಳುಗುತ್ತದೆ ಎಂಬ ದುರಾಸೆ ಮನಸ್ಸಿನಲ್ಲಿ ಸುಳಿಯದೆ ಹೋಗಲಿಲ್ಲ !

ಗುರುವಜ್ಜನಿಗೆ ಸಮಾಧಾನವಾಯಿತು. ಮತ್ತಷ್ಟು ಪಿಸುದನಿಯಲ್ಲಿ ರಣನೀತಿಯ ಚರ್ಚೆ ನಡೆಯಿತು.

ಮೊದಲಿಗೆ ಬಂಡೇಶ್ವರ ಮಠಕ್ಕೆ ಸೇರುವ ಸಿದ್ದೇಶ್ವರಾನಂದಜಿಯ ಭಕ್ತಾದಿಗಳನ್ನು ತಮ್ಮ ಕಡೆಗೆ ಎಳೆದುಕೊಳ್ಳಬೇಕು. ಅವರಿಗೆ ಏನು ಬೇಕೋ ಅದನ್ನು ಸಪ್ಲೈ ಮಾಡುವುದು. ಇನ್ನು ಊರಿನ ಹೆಂಗಸರು ಹೇಗಿದ್ದರೂ ಗುರುವಜ್ಜನ ಕೈಬಿಡಲಾರರು. ಬಂಗಾರಿಯ ಹೋಟೆಲಿಗೆ ಸೇರುವ ಜನ ಈಗಾಗಲೇ ಎದುರು ಪಾರ್ಟಿಯಾಗಿಬಿಟ್ಟಿದ್ದಾರೆ. ಅವರಿಗೂ ಒಂದೊಂದು ಬೋಂಡ ಹೆಚ್ಚಾಗಿ ಕೊಡಿಸಿದರೆ ಓಟು ಈ ಕಡೆಗೇ ಬೀಳಬಹುದು.

''ಇದೆಲ್ಲಕ್ಕಿಂತ ಮುಖ್ಯ ಇನ್ನೊಂದ್ ಇಸ್ಯ. ಮೊದ್ಲು ಒಂದು ವೈರಿ ಸಮ್ಹಾರ ಮಾಟ ಮಾಡಿಸ್ಬೇಕು ! ಗೊಂಬೆ ಮಾಡ್ಸಿ, ಲಿಂಬಿ ಅಣ್ಗೆ ಮೊಳೆ ಚುಚ್ಚಿ ಆ ನನ್ಮಗ ಮಾಸ್ತಿ ತಿರ್ಗಾಡು ದಾರಿಲಿ ಗುಂಡಿ ತೋಡಿ ಊತಾಕಿದ್ರೆ ನಿನ್ ಓಟು ಪಾಟು ಎಲ್ಲ ನೆಗೆದ್ ಬಿದ್ದಂಗ್ಯೆ...'' ಎಂದು ತರ್ಲೆಯ ಉಪದೇಶ.

ಇವರು ಮಾಟ ಮಂತ್ರದಂಥ ಗಂಭೀರ ವಿಷಯ ಪಿಸುಗುಡುತ್ತಿದ್ದಾಗ, ಆಪ್ರೇಷನ್ ಕಮಲಿ ತನ್ನ ಕಿವಿಗಳಿಗೆ ತಗುಲಿಸಿದ ಇಯರ್‌ಫೋನ್‌ನಿಂದ ಹಾಡು ಕೇಳಿಸಿಕೊಳ್ಳುತ್ತ ಬರಿ ಕೊಡದ ಸಹಿತ ಮತ್ತೊಂದು ವಚ್ಚೆ ನೀರಿಗೆ ಹೊರಟು ಇವರತ್ತ ಕೀಟಲೆ ನೋಟ ಬೀರಿ ಮುಂದೆ ನಡೆದಳು !

''ಇಂಗೆ ಮಾಟ್ನ-ಗೀಟ್ನ ಯಾಕ್ಲಾ'' – ಎಂದು, ಮೊದಲಿಗೆ ಆಕ್ಷೇಪಿಸಿದವನಂತೆ ಕಾಣಿಸಿದರೂ ''ಕೋಳಿ ತಲೇನೆ ಮರ್ತ್‌ಬುಟ್ರೆ ಎಂಗ್ಲ !'' – ಎಂದು, ತರ್ಲೆ ಮರೆತಿದ್ದುದನ್ನು ನೆನಪಿಸಿದ. ''ವೈರಿ ಸಮ್ಹಾರ ಮಾಟಾನ ಆ ಪೂಜಾರಿ ಮಾಂತಪ್ಪಂಗೂ ಮಾಡಿಸ್ಬೇಕು ಕಣ್ಲ. ಆ ನನ್ಮಗಂದೆ ಇದೆಲ್ಲ ಕಿತಾಪತಿ'' ಎಂದು ಯಜಮಾನ ಎಚ್ಚರಿಕೆಯ ಮಾತಾಡಿದ.

ಜೊತೆಗೇ, ಈರಾಂಜಣಿ ಕಡೆಯವರೂ ನಮ್ಮ ಮೇಲೆ ವೈರಿ ಸಮ್ಹಾರ ಮಾಟ ಮಾಡಿಸಿದರೆ ಏನು ಗತಿ ಎಂದು ಎದೆ ಡವಗುಟ್ಟಿತ್ತು !

ಮತ್ತೆ ಅವರ ರಣನೀತಿ ಹೇಗಿರಬೇಕೆಂದು ಇನ್ನಷ್ಟು ಪಿಸಪಿಸ ಚರ್ಚೆ ನಡೆಯಿತು. ಸಿದ್ದೇಶ್ವರಾನಂದಜಿಯ ಭಕ್ತರ ಜೊತೆಗೆ ಚೆಲುವಕ್ಕನನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಉಪಾಯ ಆಲೋಚಿಸಲಾಯಿತು. ಆಕೆ ಇತ್ತ ಬಂದರೆ ಹೆಂಗಸರ ಒಂದು ದೊಡ್ಡ ಗುಂಪಿನ ಓಟು ಗುರುವಜ್ಜನಿಗೆ ಗ್ಯಾರಂಟಿ. ಜೊತೆಗೆ ಶಾಲೆ ಕಾಲೇಜುಗಳಿಗೆ ಹೋಗುವ ಹುಡುಗ-ಹುಡುಗಿಯರನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವುದು ಹೇಗೆ ಎಂದು ಚರ್ಚೆ ನಡೆಯಿತು.

ಇದೇ ರೀತಿ ಮಾಸ್ತಿಯ ಕಡೆಯವರೂ ರಣನೀತಿ ರೂಪಿಸುವುದನ್ನು ಮರೆತಿರಲಿಲ್ಲ. ಅವರಿಗೆ ಈ ಈರಾಂಜಣಿ ದೊಡ್ಡ ಹಣದ ಗಣಿ ಇದ್ದಂತೆ ! ಗುರುವಜ್ಜನ ಕಡೆಯವರಿಗೆ ಅಂಥ ಅನುಕೂಲ ಇಲ್ಲ. ಏನಿದ್ದರೂ ಉಪದೇಶವನ್ನು ಮಾತ್ರ ಧಾರಾಳವಾಗಿ ನೀಡುವ ಜನರು.

ಗೊಂದಲಪುರದಲ್ಲಿ 'ಅಡ್ಡಗೋಡೆ'ಯವರ ಒಂದು ಗುಂಪೂ ಇತ್ತು. ಅವರಿಗೆ ಇಂಡಿಪೆಂಡೆಗಳು ಎಂದು ಹೆಸರು. ಆ ಗುಂಪಿನ ಸದಸ್ಯರ ಗುಪ್ತ ಸಭೆಯಲ್ಲಿ, ಇನ್ನು ಮುಂದೆ ಊರ ಪಂಚಾಯ್ತಿ ಸೇರಿದಾಗ ಮೊದಲಿಗೆ ಇಸ್ವಾಸ ಮತ ಕೋರಿ, ಗೆದ್ದವರು ಪಂಚಾಯ್ತಿಯ ಅಧ್ಯಕ್ಷರಾಗಬೇಕೆಂಬ ಠರಾವು ಪಾಸು ಮಾಡಿತಂತೆ !

ಗೊಂದಲಪುರ ಮುಂದೆ ನಡೆಯಲಿರುವ ಊರ ಪಂಚಾಯಿತಿಯಲ್ಲಿ ನಡೆಯುವ ಇಸ್ವಾಸ್ ಮತದ ಅಥವಾ ಆಪ್ರೇಷನ್ ಕಮಲಿ ಹೇಳಿದಂತೆ ನೋ ಕಾನ್ಪಿಡೆನ್ಸ್‌ನ ಮನರಂಜನೆಗಾಗಿ ಕಾಯುತ್ತಿದೆ.

ಬೀರಣ್ಣ

ನಂ. ೧೬೬೩, ೧೦ನೇ ಮೇನ್, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

# ಭೂಮಿ ಬಿಸಿ ಪ್ರಳಯದ ಹೊಸ್ತಿಲಲ್ಲಿ...

ಪರಮೇಶ್ವರಯ್ಯ ಸೊಪ್ಪಿಮಠ

ಕಳೆದ ಡಿಸೆಂಬರ್ ೭, ೨೦೦೯ರಂದು ಕೋಪನ್‌ಹೇಗನ್‌ನಲ್ಲಿ ವಿಶ್ವ ಹವಾಮಾನ ಸಮ್ಮೇಳನ ಆರಂಭವಾಗುವ ತುಸು ಮುನ್ನ ೧೯೨ ದೇಶಗಳು ಒಕ್ಕೊರಲಿನಿಂದ ಸಂದೇಶವೊಂದನ್ನು ಸಾರಿದವು.

ಈ ಒಕ್ಕೊರಲಿನ ಸಂದೇಶ ಸಾರಲು ಅನೇಕ ಕಾರಣಗಳಿದ್ದವು. ಮನುಸಂಕುಲ ಅತ್ಯಂತ ಅಪಾಯಕಾರಿ ಸ್ಥಿತಿಗೆ ಬಂದು ನಿಂತಿದೆ. ನಾವೆಲ್ಲ ಒಂದಾಗಿ ಕ್ರಮ ಕೈಗೊಳ್ಳದಿದ್ದರೆ ಹವಾಮಾನ ಬದಲಾವಣೆಯಿಂದಾಗಿ, ಇಡೀ ಭೂಮಂಡಲವೇ ಧೂಳೀಪಟವಾಗುತ್ತದೆ. ಭವಿಷ್ಯ ಮತ್ತು ಭದ್ರತೆ ಇಲ್ಲದಂತಾಗಿ, ಮುಂದೆ ಭೂಮಿಗೆ ಒದಗುವ ಇಂತಹ ಸ್ಥಿತಿಗೆ ನಾವೇ ಕಾರಣ ಅಲ್ಲವೇ ಎಂದು ಚರ್ಚೆಮಾಡುತ್ತಾ ಕೂರುವಷ್ಟು ಸಮಯ ನಮಗಿರುವುದಿಲ್ಲ. ಇದರ ಬಗ್ಗೆ ತುರ್ತಾಗಿ ಜಾಗೃತಿ ಮೂಡಿಸಿ ಕ್ರಮಕೈಗೊಳ್ಳಬೇಕು.

ಅಮೆರಿಕಾದಲ್ಲಿ ಕೇವಲ ಶೇಕಡ ಎರಡರಷ್ಟು ತೈಲ ನಿಕ್ಷೇಪವಿದೆ. ಆದರೆ ಅದು ಶೇಕಡ ೨೫ರಷ್ಟು ತೈಲವನ್ನು ತನ್ನ ಸಾರಿಗೆ ವ್ಯವಸ್ಥೆಗೆ ನೀರಿನಂತೆ ಖರ್ಚುಮಾಡುತ್ತಿದೆ. ಯೂರೋಪ್‌ನ ದೇಶಗಳು ಹಾಗೂ ಜಪಾನ್ ಇದೇ ಹಾದಿಯಲ್ಲಿವೆ. ಜಾಗತಿಕ ಪ್ರಭಾವದಿಂದಾಗಿ ಹಾಗೂ ದುಂದುಬಳಕೆಯಿಂದ ಪಾಶ್ಚಾತ್ಯ ದೇಶಗಳಲ್ಲಿ ಯಂತ್ರಗಳ ನೆರವಿಲ್ಲದೆ ಕೈಕಾಲು ಆಡಿಸುವುದೂ ಕಷ್ಟ ಎಂಬ ಸ್ಥಿತಿಗೆ ಅವರು ಬಂದು ತಲುಪಿದ್ದಾರೆ. ಇದನ್ನೆ ಅವರು ಅಭಿವೃದ್ಧಿ ಎಂದು ಕರೆಯುತ್ತಾರೆ. ಈ ಹಾದಿಯನ್ನು ಚೀನಾ, ಭಾರತ, ಬ್ರೆಜಿಲ್ ಮುಂತಾದ ಮುಂದುವರಿಯುತ್ತಿರುವ ದೇಶಗಳು ಅಮೆರಿಕಾಕ್ಕೆ ಸರಿಸಾಟಿಯಾದ ಪ್ರಗತಿ ಸಾಧಿಸಲು, ಪೆಟ್ರೋಲಿಯಂ ಆಮದು ಹಾಗೂ ನಿಕ್ಷೇಪ ಶೋಧಕಾರ್ಯಗಳಲ್ಲಿ ತೊಡಗಿವೆ.



ಭೂಮಿಯ ರಕ್ಷಣೆಯ ಮಾತು ಬಂದಾಗ, ನಮ್ಮೆಲ್ಲರ ದೃಷ್ಟಿ ಹಿಮಗಳಿಂದ ಆವೃತವಾಗಿರುವ ಧ್ರುವ ಪ್ರದೇಶಗಳ ಕಡೆ ವಾಲುತ್ತದೆ. ಸಾಮಾನ್ಯವಾಗಿ ಭೂಮಿಯ ವಾತಾವರಣದಲ್ಲಿ ಇಂಗಾಲದ ಡೈಆಕ್ಸೈಡ್ ಪ್ರಮಾಣ ೧೮೦ ಪಿ.ಪಿ.ಎಂ.ನಿಂದ ೨೦೦ ಪಿ.ಪಿ.ಎಂ.ವರೆಗೆ ಇರಬೇಕು. ಆದರೆ ಕಳೆದ ೧೫೦ ವರ್ಷಗಳಲ್ಲಿ ಇಂಗಾಲದ ಡೈಆಕ್ಸೈಡ್ ಪ್ರಮಾಣ ವಾತಾವರಣದಲ್ಲಿ ೩೮೦ ಪಿ.ಪಿ.ಎಂ.ನಷ್ಟು ಏರಿಕೆಯಾಗಿದೆ. ಪೆಟ್ರೋಲಿಯಂಅನ್ನು ನಿರಂತರವಾಗಿ ಉರಿಸುತ್ತಿರುವುದೇ ಇದಕ್ಕೆ ಕಾರಣ. ಭೂಮಿಯ ಉಷ್ಣತೆ ನಿರಂತರವಾಗಿ ಏರುತ್ತಿದೆ. ಹಾಗಾಗಿ ಕೋಟ್ಯಂತರ ವರ್ಷಗಳಿಂದ ಮಲಗಿ ಮೈತುಂಬಾ ಹೊದ್ದ ಹಿಮ ಸದ್ದಿಲ್ಲದೆ ಕರಗಿ ನೀರ್ಗಲ್ಲುಗಳ ರೂಪದಲ್ಲಿ ಸಾಲುಗಟ್ಟಿ ಸಮುದ್ರಕ್ಕೆ ತೇಲಿಬರುತ್ತಿದೆ. ಹೀಗಾಗಿ ಸಮುದ್ರ ಮಟ್ಟ ನಿಧಾನವಾಗಿ ಏರುತ್ತಿದೆ. ಭೂಮಿಯ ಎಲ್ಲಾ ಖಂಡಗಳಲ್ಲಿ ಹವಾಮಾನ ಸಂಬಂಧಿತ ದುರಂತಗಳು ಹೆಚ್ಚಾಗಿ ಸಂಭವಿಸುತ್ತಿವೆ.

ಆಶ್ಚರ್ಯಕರ ಸಂಗತಿ ಎಂದರೆ ಹವಾಮಾನ ತಜ್ಞರು ಅಧಿಕವಾಗಿರುವ ಯೂರೋಪ್ ಹಾಗೂ ಅಮೆರಿಕಾದಲ್ಲಿ ಪ್ರಕೃತಿ ವಿಕೋಪಗಳು ಹೆಚ್ಚಾಗುತ್ತಿವೆ. ನೆರೆ ಹಾವಳಿ, ಅತಿ ಬಿಸಿಲ ಝಳ, ಅತಿ ಗಾಳಿ, ಅಗ್ನಿ ಪ್ರಳಯ, ಚಂಡಮಾರುತಗಳು ಮುಂತಾದುವು ಸಂಭವಿಸಿ ಹೊಸ ಹೊಸ ಕಾಯಿಲೆಗಳು ಹುಟ್ಟಿಕೊಳ್ಳುವ ಪರಿಸ್ಥಿತಿ ಉಂಟಾಗಿದೆ. ಯೂರೋಪ್ ಪರಿಸರ ಪ್ರಾಧಿಕಾರದ ಅಂಕಿ-ಅಂಶಗಳ ಪ್ರಕಾರ ೧೯೮೦ರ ದಶಕದಲ್ಲಿ ಹವಾಮಾನ ಸಂಬಂಧಿ ದುರಂತಗಳಿಗಿಂತ ದುಪ್ಪಟ್ಟು ದುರಂತಗಳು ೧೯೯೦ರಲ್ಲಿ ಘಟಿಸಿವೆ. ೧೯೯೦ರ ದಶಕವಂತೂ ಹಿಂದಿನ ಎಲ್ಲಾ ದಶಕಗಳ ದಾಖಲೆಗಳನ್ನು ಅಳಿಸಿಹಾಕಿದೆ. ೨೦೦೨ ಮತ್ತು ೨೦೦೩ರಲ್ಲಿ ಪ್ರಕೃತಿ ವಿಕೋಪಗಳು ಇನ್ನೂ ಹೆಚ್ಚಾಗಿ ಯೂರೋಪಿನಲ್ಲಿ ಅತಿ ಬಿಸಿಲ ಝಳ ಸಂಭವಿಸಿ ಸರಾಸರಿಗಿಂತ ಹೆಚ್ಚಾಗಿ, ಇದರಿಂದ ೨೦ ಸಾವಿರ ಜನ ಸತ್ತಿದ್ದಾರೆ. ೧೯೯೭-೯೮ರಲ್ಲಿ ಎಲ್‌ನೈನೊ ಹಾವಳಿಯಿಂದ ಭೂಖಂಡಗಳಲ್ಲಿ ಅನೇಕ ಕಡೆ ಅರಣ್ಯಗಳಿಗೆ ಬೆಂಕಿ, ಅತಿವೃಷ್ಟಿ, ಬರಗಾಲ, ಚಂಡಮಾರುತಗಳು ಸಂಭವಿಸಿ ಅಪಾರ ಹಾನಿಯಾಗಿದೆ. ಚಂಡಮಾರುತಗಳು ಭೂಮಿ ಬಿಸಿಯಾಗಿರುವುದರ ಸಂಕೇತವಾಗಿವೆ. ಸಮುದ್ರದ ನೀರು ಬಿಸಿಯಾದಂತೆಲ್ಲ ಚಂಡಮಾರುತಗಳ ತೀವ್ರತೆ ಹೆಚ್ಚುತ್ತದೆ ಎಂದು ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ.

ಕಳೆದ ವರ್ಷ ಏಷ್ಯಾ ಖಂಡದಲ್ಲಿ ಜಲಪ್ರಳಯ ಸಂಭವಿಸಿದಾಗ ಯೂರೋಪಿನ ಹಲವು ರಾಷ್ಟ್ರಗಳು ಬಿಸಿಲಿನ ಝಳದಿಂದಾಗಿ ಕಾಡ್ಗಿಚ್ಚಿನ ಹಾವಳಿಗೆ ತುತ್ತಾದವು. ದಕ್ಷಿಣ ಅಮೆರಿಕಾದ ದೇಶಗಳು ಹಿಂದೆಂದೂ ಕಾಣದಷ್ಟು ದೊಡ್ಡ ಪ್ರಮಾಣದ ಬರಗಾಲವನ್ನು ಎದುರಿಸಿದವು. ಹವಾಮಾನದ ಈ ಅವಾಂತರದಿಂದಾಗಿ ಜಗತ್ತಿನಲ್ಲಿ ದೇಹಿಕಾಳುಗಳ ಮತ್ತು ದವಸಧಾನ್ಯಗಳ ಉತ್ಪಾದನೆಯ ಪ್ರಮಾಣ ಸಾಕಷ್ಟು ಕಡಿಮೆಯಾಗಿದೆ. ಇದರಿಂದ ಮುಂಬರುವ ದಿನಗಳಲ್ಲಿ ಪ್ರೋಟೀನ್ ಕೊರತೆಯಿಂದ ನಾನಾ ಬಗೆಯ ಕಾಯಿಲೆಗಳು ಹಬ್ಬಲಿವೆ. ಸ್ವೀಡನ್ ದೇಶದಲ್ಲಿ ಚಳಿ ಪ್ರಮಾಣ ಕಡಿಮೆಯಾದುದರಿಂದ ಮಂಗನ ಕಾಯಿಲೆಗೆ ಕಾರಣವಾದ ರೋಗಕಾರಕ ತಿಗಣೆಗಳು ಕಾಣಿಸಿವೆ. ಇದರಿಂದ

ನಿಸರ್ಗ ತನ್ನ ಸಮತೋಲನವನ್ನು ಕಳೆದುಕೊಳ್ಳಬಾರದು. ಪ್ರಕೃತಿಯ ಕಿರೀಟದಂತಿರುವ ಮಾನವನಿಗೆ ಸಾಗರದ ಮಧ್ಯ ಕಾಲುವೆಗಳನ್ನು ತೋಡಬಲ್ಲ ಕೌಶಲವಿದೆ. ಗಿಡಮರಗಳನ್ನು ಬೆಳೆಸಿ ಬರಗಾಲವನ್ನು ತಡೆಗಟ್ಟುವ ಶಕ್ತಿಯಿದೆ. ಕೃತಕ ಮಳೆಯಿಂದ ಕಾಡಿನ ಬೆಂಕಿಯನ್ನು ನಂದಿಸಬಲ್ಲ ಸಾಮರ್ಥ್ಯವಿದೆ. ಆದರೆ ಈಗ ಮಾನವನೇ ತನ್ನ ಸ್ವಾರ್ಥಕ್ಕಾಗಿ ಭೂಮಿಯನ್ನು ಅಪಾಯದ ಅಂಚಿಗೆ ತಂದು ನಿಲ್ಲಿಸಿದ್ದಾನೆ ಭೂಮಿಯ ತಳಭಾಗದ ಪೆಟ್ರೋಲ್‌ಅನ್ನು ಹೊರತೆಗೆದು, ಹೆಚ್ಚಿನ ದುರ್ಬಳಕೆಯಿಂದ ಭೂಮಿಯ ಸರಾಸರಿ ಉಷ್ಣಾಂಶವನ್ನು ಹೆಚ್ಚಿಸಿ, ಧ್ರುವಗಳಲ್ಲಿನ ಹಿಮ ಬಂಡೆಗಳು ಬೆದರಿ ಬೆವರುವಂತೆ ಮಾಡಿದ್ದಾನೆ.

ಜಿನಿವಾ ಸಮುದ್ರ ತೀರದಲ್ಲಿ ರೋಗಕಾರಕ ಸೂಕ್ಷ್ಮ ಪಾಚಿಜೀವಿಗಳು ಸಾಗಿಬಂದಿವೆ.

ನಮ್ಮ ದೇಶದ ಕೇರಳದ ಕಡಲ ತೀರದಲ್ಲಿ ಎಂದೂ ಇಲ್ಲದ ಕೆಂಪು ಪಾಚಿಗಳು ತೇಲಿಬಂದಿವೆ. ಮೊನ್ನೆ ತಾನೆ ಅಮೆರಿಕಾದಲ್ಲಿ ಕಟ್ರೀನಾ ಚಂಡಮಾರುತ ಹಲವು ಸಮಸ್ಯೆಗಳನ್ನು ತಂದೊಡ್ಡಿತು. ಅಲ್ಲಿ ಮಡುಗಟ್ಟಿದ ನೀರಿನ ಮಟ್ಟ ಕಡಿಮೆಯಾಗುತ್ತಿದೆ. ನೀರಿನಲ್ಲಿ ಪೆಟ್ರೋಲಿಯಂ, ಆಸಿಡ್, ಕಾರ್ಖಾನೆಯ ವಿಸರ್ಜಿತ ವಿಷವಸ್ತುಗಳು, ಕೊಳೆತ ಶವಗಳು, ಫ್ರಿಜ್‌ನಿಂದ ಸೋರಿದ ಆಹಾರ ವಸ್ತುಗಳು, ಚರಂಡಿ ದ್ರವ್ಯಗಳು, ನಾನಾ ಬಗೆಯ ತೈಲಗಳು ಸೇರಿ ಒಂದು ದೊಡ್ಡ ಕೂಪವೇ ನಿರ್ಮಾಣವಾಗಿದೆ. ಇಂತಹ ದುರ್ಬಲ ಸಂದರ್ಭದಲ್ಲಿಯೇ ಎಲ್ಲಾ ಬಗೆಯ ಪರಿಸರ ರಕ್ಷಣಾ ಕಾನೂನುಗಳಿಗೆ ಎಳ್ಳು ನೀರು ಬಿಡುವಂತಹ ಸರ್ಕಾರದ ಆದೇಶಗಳು ಜಾರಿಯಾಗುತ್ತಿರುವುದು ವಿಷಾದನೀಯ.

ಮುಂದಿನ ದಿನಗಳಲ್ಲಿ ಭೂಮಿಯ ಬಿಸಿ ಹೆಚ್ಚಾದಂತೆ ಋತುಮಾನಗಳೆಲ್ಲ ಅನಿಶ್ಚಿತವಾಗುತ್ತವೆ. ಮಳೆ, ಚಳಿ ಬಿಸಿಲಿನ ಪ್ರಖರತೆಯಲ್ಲಿ ಅನಿಶ್ಚಿತತೆ ಹಾಗೂ ಅನಿರ್ದಿಷ್ಟತೆ ಆವರಿಸುತ್ತವೆ. ಗುಲ್ಬರ್ಗಾದಲ್ಲಿ ಹಠಾತ್ ಚಳಿ ಉಂಟಾಗಬಹುದು. ಕೊಡಚಾದ್ರಿಯಲ್ಲಿ ಕಡುಬಿಸಿಲು ಆಗಬಹುದು. ಕೃಷಿವಲಯದ ಚಟುವಟಿಕೆಗಳು




ಏರುಪೇರಾಗುವ ಸಾಧ್ಯತೆಗಳಿವೆ. ದೊಡ್ಡ ದೊಡ್ಡ ನಗರಗಳಲ್ಲಿ ನೀರಿನ ಪೂರೈಕೆ ಅಸಮರ್ಪಕವಾಗುತ್ತದೆ.

ಸಮುದ್ರದ ಮಟ್ಟ ಏರುವುದರಿಂದ ಕೆಲವೇ ಮೀಟರ್‌ಗಳ ಎತ್ತರವಿರುವ ಮಾಲ್ಡೀವ್ಸ್ ದ್ವೀಪಗಳು, ಕೆರಿಬಿಯನ್ ದ್ವೀಪ ಸಮೂಹಗಳು, ಫಿಜಿ ದ್ವೀಪಗಳು, ಕ್ರಿ.ಶ. ೨೦೫೦ ರೊಳಗೆ ಮುಳುಗಿಹೋಗುವ ಸಾಧ್ಯತೆಗಳಿವೆ. ಹೀಗಾಗಿ ಬಹುಸಂಖ್ಯಾತ ಜನರು ನಿರಾಶ್ರಿತರಾಗುವ ಸಾಧ್ಯತೆಗಳಿವೆ. ಹಿಮಾಲಯ ತಪ್ಪಲುಗಳು, ಅಮೆಝಾನ್, ಜಾವಾ ದ್ವೀಪ ಸಮೂಹಗಳು ಹಾಗೂ ನಮ್ಮ ಪಶ್ಚಿಮ ಘಟ್ಟಗಳು, ದಟ್ಟ ಅರಣ್ಯಗಳಿಂದ ಕೂಡಿವೆ. ಭೂಮಿಯ ಬಿಸಿ ಹೆಚ್ಚಾದಂತೆಲ್ಲ ಅರಣ್ಯಗಳಲ್ಲಿ ವಾಸಿಸುವ ಜೀವಿಗಳು ಅರ್ಧಕ್ಕರ್ಧ ನಾಶವಾಗುತ್ತವೆ. ಹೊಸ ಬಗೆಯ ರೋಗರುಜಿನಗಳು ಸೃಷ್ಟಿಯಾಗುತ್ತಾ ಆರೋಗ್ಯ ವ್ಯವಸ್ಥೆಗೆ ಸವಾಲೊಡ್ಡುತ್ತವೆ. ನೀರು, ಆಹಾರ, ಎರಡೂ ಅನಿಶ್ಚಿತವಾದಾಗ, ಯುದ್ಧ, ಕ್ಷಾಮ, ಸಾಮಾಜಿಕ ಕ್ಷೋಭೆಗಳು ಹೆಚ್ಚಾಗುವ ಸಾಧ್ಯತೆಗಳಿವೆ.

ಸುಮಾರು ೧,೨೦,೦೦೦ ವರ್ಷಗಳ ಹಿಂದೆ ಅನೇಕ ನೈಸರ್ಗಿಕ ಕಾರಣಗಳಿಂದ ಭೂಮಿಯಲ್ಲಿ ಉಷ್ಣತೆ ಹೆಚ್ಚಾಗಿತ್ತು. ಆಗ ಹಿಮಬಂಡೆಗಳು ಕರಗಿ, ನೀರಾಗಿ ಸಮುದ್ರದ ಮಟ್ಟ ಆರು ಮೀಟರ್‌ಗಳವರೆಗೆ ಏರಿತ್ತು. ಆದರೆ ಜನರಿಗೆ ಹೆಚ್ಚಿನ ಅಪಾಯ ಆಗಲಿಲ್ಲ. ಏಕೆಂದರೆ ಆಗ ಕರಾವಳಿ ತೀರದಲ್ಲಿ ಜನರು ವಾಸಿಸುತ್ತಿರಲಿಲ್ಲ.

ನಿಸರ್ಗ ತನ್ನ ಸಮತೋಲನವನ್ನು ಕಳೆದುಕೊಳ್ಳ ಬಾರದು. ಪ್ರಕೃತಿಯ ಕಿರೀಟದಂತಿರುವ ಮಾನವನಿಗೆ



# ಸಾರ್ಥಕ್ಯ

೧

ನೀ ಕರೆದಾಗ ನನ್ನ ಕೊಳಲ ಕೊರಳು
ಅಪಸ್ವರವೆತ್ತಿದ ಕಾರಣ ಏನೆಂದು ತಿಳಿದಿಲ್ಲ
ಶಬ್ದ ಮೊಳಗಿಸಲು ಈ ಚಳಿ ತುಟಿಗಳ ಸೀಳಿ
ಆಚೆ ಹಾಯುವ ಸಂಗತಿಯ ಹೇಳಿರಲಿಲ್ಲ.

೨

ಅವರು ದಿನಾ ಮಲಗಿದ್ದಿದೆ
ಬೆಟ್ಟದಷ್ಟು ಆಸೆಯ ಬೆಳಗಿಗೆ
ಬಯಕೆಗಳ ಕೋಣೆಗೆ ಚಾವಿ
ಹಾಕುವ ರೂಢಿ ನನ್ನದಲ್ಲ.

೩

ಚಾದರಕೆ ಚಳಿಯ ಹಂಗು ಹೇರಿದವರು
ಮುದುಡಿ ಡಿಸೆಂಬರಿಗೆ ಬೈದರೆ
ಗಿಡಮರಗಳ ಎಲೆ ಕಳಚಿ
ಭೂಮಿಗೆ ಹೊದಿಕೆಯಾಗುವುದು
ಯಾರಿಗೆ ತಿಳಿದಿಲ್ಲ ಹೇಳು !

೪

ಯಾರೂ ಆ ರಾತ್ರಿಗೆ ಹೇಳಿರಲಿಲ್ಲ
ನಾಳೆ ಸೂರ್ಯನ ಅಸ್ತಂಗತಕೆ
ಮುಂಜಾನೆ ರಶ್ಮಿಗೆ ಇಬ್ಬನಿಯ
ಕನಸು ಬೀಳುವುದ.

೫

ಇಡೀ ವರ್ಷದ ಈ ಸಮಯ
ನಿನ್ನದೇ ನೆನಪ ಸಾಂಗತ್ಯ ಬಯಸುವುದು
ಏಕೆಂದು ಗೊತ್ತಿಲ್ಲ.
ಮನಸ್ಸಿಗೆ ತೋಚಿದಾಗ ತೊಟ್ಟಿಕ್ಕುವ
ಇಬ್ಬನಿಯ ಲೆಕ್ಕಿಸದೇ ನಡೆದುಬಿಡುತ್ತೇನೆ.

೬

ಅದೆಷ್ಟೋ ದಿನ ಅನ್ನಿಸಿತ್ತು
ಗೋಳಿನ ಜಾಡೊಳಗೆ ನರಳಿ,
ಹಾಳು ಧ್ವನಿಯ ಆಲಿಸಿ ಸುಮ್ಮನಿರುವ
ನನಗಿಂತ ನಿನ್ನ ಹಾಡಿಗೆ
ಸ್ವರವಾಗುವುದೇ ಸಾರ್ಥಕವೆಂಬುದು.

ಎನ್. ವಿ. ಮಂಜುನಾಥ
ಉಪ್ಪಳೇಕೊಪ್ಪ, ಅಂಚೆ : ಉಂಬಳೇಕೊಪ್ಪ - ೫೮೧ ೩೧೮, ಸಿರ್ಸಿ
ತಾಲ್ಲೂಕು ಉತ್ತರ ಕನ್ನಡ ಜಿಲ್ಲೆ

ಸಾಗರದ ಮಧ್ಯ ಕಾಲುವೆಗಳನ್ನು ತೋಡಬಲ್ಲ ಕೌಶಲವಿದೆ. ಗಿಡಮರಗಳನ್ನು ಬೆಳೆಸಿ ಬರಗಾಲವನ್ನು ತಡೆಗಟ್ಟುವ ಶಕ್ತಿಯಿದೆ. ಕೃತಕ ಮಳೆಯಿಂದ ಕಾಡಿನ ಬೆಂಕಿಯನ್ನು ನಂದಿಸಬಲ್ಲ ಸಾಮರ್ಥ್ಯವಿದೆ. ಆದರೆ ಈಗ ಮಾನವನೇ ತನ್ನ ಸ್ವಾರ್ಥಕ್ಕಾಗಿ ಭೂಮಿಯನ್ನು ಅಪಾಯದ ಅಂಚಿಗೆ ತಂದು ನಿಲ್ಲಿಸಿದ್ದಾನೆ. ಭೂಮಿಯ ತಳಭಾಗದ ಪೆಟ್ರೋಲ್‌ಅನ್ನು ಹೊರತೆಗೆದು, ಹೆಚ್ಚಿನ ದುರ್ಬಳಕೆಯಿಂದ ಭೂಮಿಯ ಸರಾಸರಿ ಉಷ್ಣಾಂಶವನ್ನು ಹೆಚ್ಚಿಸಿ, ಧ್ರುವಗಳಲ್ಲಿನ ಹಿಮಬಂಡೆಗಳು ಬೆದರಿ ಬೆವರುವಂತೆ ಮಾಡಿದ್ದಾನೆ.

ಅಪಾಯದ ಸಂಕೇತ ಎಲ್ಲ ದಿಕ್ಕುಗಳಲ್ಲಿ ಕಂಡು ಬಂದಿರುವಾಗ, ಅದನ್ನು ಸರಿಯಾಗಿ ಎದುರಿಸಲು ವಿಶ್ವದ ಎಲ್ಲ ರಾಷ್ಟ್ರಗಳು ಒಂದುಗೂಡಿವೆ. ಪರಿಣಾಮ ೧೯೮೮ರಲ್ಲಿ ವಿಶ್ವಮಟ್ಟದ ಮೊದಲ ಹವಾಗುಣ ಸಮಾವೇಶ ನಡೆಯಿತು. ಇದರ ಕೂಲಂಕಷ ಅಧ್ಯಯನಕ್ಕೆ ವಿಶ್ವಸಂಸ್ಥೆಯು ನೂರಾರು ದೇಶಗಳಿಂದ ಆಯ್ದ ೪೫೦ಕ್ಕೂ ಹೆಚ್ಚು ವಿಜ್ಞಾನಿಗಳನ್ನು ಐ.ಪಿ.ಸಿ.ಸಿ. ಎಂಬ ಅಧ್ಯಯನ ಮಂಡಲಿಯೊಂದನ್ನು ರಚಿಸಿದೆ. ಈ ತಜ್ಞರು ಭೂ ಚರಿತ್ರೆಯನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದರು. ಆಕಾಶ, ಪಾತಾಳಗಳಲ್ಲಿ ಸಮೀಕ್ಷೆ ನಡೆಸಿದರು.

ವಾಯುಮಂಡಲದಲ್ಲಿ ಇಂಗಾಲದ ಡೈಆಕ್ಸೈಡ್ ಪ್ರಮಾಣ ಕಳೆದ ೫೦ ವರ್ಷಗಳಿಂದ ಹೆಚ್ಚುತ್ತಿರುವುದರಿಂದ ಭೂಮಿಯ ತಾಪಮಾನ ಹೆಚ್ಚುತ್ತಿದೆ ಎಂದು ಘೋಷಿಸಿದರು. ಭೂಮಿಯಿಂದ ಕಲ್ಲಿದ್ದಲು, ಪೆಟ್ರೋಲ್‌ಅನ್ನು ಅತಿ ದೊಡ್ಡ ಪ್ರಮಾಣದಲ್ಲಿ ತೆಗೆಯುತ್ತ ಹೈಟೆಕ್ ಕೃಷಿ, ಹೈಟೆಕ್ ಸಂಚಾರ, ಹೈಟೆನ್‌ಷನ್ ವಿದ್ಯುತ್‌ನ ಅತಿ ಬಳಕೆ ಮಾಡಿದ್ದೇ ಇದಕ್ಕೆ ಮುಖ್ಯ ಕಾರಣ ಎಂದು ಸ್ಪಷ್ಟಪಡಿಸಿದರು.

ಅದರ ಪರಿಣಾಮದಿಂದ ಜಪಾನಿನಲ್ಲಿ ಶೃಂಗಸಭೆ ನಡೆಸಿದ ಶ್ರೀಮಂತ ರಾಷ್ಟ್ರಗಳೆಲ್ಲ ಕ್ಯೊಟೋ ಒಪ್ಪಂದಕ್ಕೆ ೧೯೯೭ರಲ್ಲಿ ಸಹಿ ಹಾಕಿದವು. ಅದರಲ್ಲಿ ತುಸುಮಟ್ಟಿಗೆ (ಶೇಕಡ ೫ರಷ್ಟು) ಇಂಗಾಲಾಮ್ಲ ಕಡಿಮೆ ಮಾಡುವುದಾಗಿ ಘೋಷಿಸಿವೆ. ಇದಕ್ಕೆ ಅಮೆರಿಕಾ, ಆಸ್ಟ್ರೇಲಿಯಾ ದೇಶಗಳು ಸಹಿ ಹಾಕದೆ ಭಾರತ, ಚೀನಾದಂತಹ ಅಭಿವೃದ್ಧಿಶೀಲ ರಾಷ್ಟ್ರಗಳೂ ಒಪ್ಪಂದಕ್ಕೆ ಬದ್ಧರಾಗಬೇಕೆಂದು ಹಟ ಹಿಡಿದವು. ಇನ್ನೊಂದೆಡೆ ಬಲಾಢ್ಯ ತೈಲ ಕಂಪನಿಗಳು ಭೂಮಿ ಬಿಸಿಯಾಗುತ್ತಿರುವುದು ಮನುಷ್ಯನಿಂದಲ್ಲ ಎಂದು ಸಾರುತ್ತಿವೆ. ಈ ನಡುವೆ ಶ್ರೀಮಂತ ದೇಶಗಳ ಕಂಪನಿಗಳು ಬಂಡವಾಳ ಹೂಡಿಕೆಯ ಹೊಳೆ ಹರಿಸಿ ಚೀನಾ, ಭಾರತ, ಬ್ರೆಜಿಲ್, ಮೆಕ್ಸಿಕೊ, ದಕ್ಷಿಣ ಆಫ್ರಿಕಾಗಳ ದೇಶದ ಜನರನ್ನು ಆಧುನಿಕತೆಗೆ ದಾಸರಾಗಿಸಿದ್ದಾರೆ. ಈ ದೇಶಗಳಲ್ಲೂ ಶತಕೋಟಿ ಶ್ರೀಮಂತರ ಸಂಖ್ಯೆ ಹೆಚ್ಚಾಗಿದೆ. ಜನರಲ್ಲಿ ಕೊಳ್ಳುಬಾಕುತನ ವೃದ್ಧಿಯಾಗಿದೆ. ಕ್ಯೊಟೋ ಒಪ್ಪಂದ ಸಂಪೂರ್ಣವಾಗಿ ದುರ್ಬಲವಾಗಿದೆ.

ಅಮೆರಿಕಾವನ್ನೂ ಸೇರಿಸಿಕೊಂಡು ಇನ್ನೊಂದು ಒಪ್ಪಂದ ಆಗಲೇಬೇಕೆಂದು ೨೦೦೮ರಲ್ಲಿ ಬಾಲಿ ಸಮ್ಮೇಳನದಲ್ಲಿ ತೀರ್ಮಾನಿಸಲಾಯಿತು. ಇದರ ಫಲವೇ ಮೊನ್ನೆ ಡಿಸೆಂಬರ್ ೭ರಂದು ಕೋಪನ್‌ಹೇಗನ್‌ನಲ್ಲಿ ನಡೆದ ಹವಾಮಾನ ಶೃಂಗಸಭೆ, ವರ್ಷ ಒಂದಕ್ಕೆ ಹೊರಸೂಸುವ ಒಟ್ಟು ಇಂಗಾಲದ ಡೈಆಕ್ಸೈಡ್ ಪ್ರಮಾಣವನ್ನು ತೆಗೆದುಕೊಂಡಾಗ, ಚೀನಾ ಪ್ರತಿವರ್ಷ ೬೨೭ ದಶಲಕ್ಷ ಟನ್ ಕಾರ್ಬನ್ ಹೊರಸೂಸಿ ಮೊದಲಿನ ಸ್ಥಾನದಲ್ಲಿದೆ. ಅಮೆರಿಕಾ (೫೭೬೯ ದಶಲಕ್ಷ ಟನ್), ರಷ್ಯ (೧೫೮೭ ದಶಲಕ್ಷ ಟನ್) ಹಾಗೂ ಭಾರತ (೧೩೨೪ ದಶಲಕ್ಷ ಟನ್) ನಂತರದ ಮೂರು ಸ್ಥಾನಗಳಲ್ಲಿವೆ. ಭೂ ರಕ್ಷಣೆಗೆ ವಿಜ್ಞಾನಿಗಳು ಕಾರ್ಬನ್ ಹೊರಸೂಸುವಿಕೆಯ ಈ ಪ್ರಮಾಣವನ್ನು ಆಧಾರವಾಗಿಟ್ಟುಕೊಂಡು ಕಾರ್ಬನ್ ಲೆಕ್ಕಾಚಾರವನ್ನು ಸರಳವಾಗಿಬಿಡಿಸಿಟ್ಟಿದ್ದಾರೆ.

ಅದರ ಪ್ರಕಾರ ಭೂಮಿಯ ಮೇಲೆ ಬದುಕುಳಿಯಬೇಕೆಂದರೆ ಇಂದಿನಿಂದ ೨೦೫೦ವರೆಗೆ ಗರಿಷ್ಠ ೭೫೦ ಶತಕೋಟಿ ಟನ್ ಕಾರ್ಬನ್‌ಅನ್ನು ಮಾತ್ರ ವಾತಾವರಣಕ್ಕೆ ಬಿಡಬಹುದು. ಈ ಕೋಟಾವನ್ನು ಭೂಮಿಯ ಮೇಲಿನ ಎಲ್ಲಾ ದೇಶಗಳೂ ಸಮನಾಗಿ ಹಂಚಿಕೊಳ್ಳಬೇಕು. ಹಾಗಾದಲ್ಲಿ ಅಮೆರಿಕಾ ದಿವಾಳಿ ಅಂಚಿಗೆ ಬರುತ್ತದೆ. ಅಂದರೆ ಅದರ ಪಾಲು ಕೇವಲ ೩೫ ಶತಕೋಟಿ ಕಾರ್ಬನ್ ಮಾತ್ರ. ಯೂರೋಪ್ ರಾಷ್ಟ್ರಗಳ ಕೋಟಾ ಮುಂದಿನ ೧೨ ವರ್ಷಗಳಿಗೆ, ಬ್ರೆಜಿಲ್‌ನ ಕೋಟಾ ೪೬ ವರ್ಷ ಹಾಗೂ ಭಾರತ ದೇಶದ ಕೋಟಾ ೮೮ ವರ್ಷಗಳ ಕಾಲ ಈಗಿನ ಪ್ರಮಾಣದಲ್ಲಿ ಕಾರ್ಬನ್ ಹೊಗೆ ಹೊರ ಬಿಡಬಹುದಾಗಿದೆ. ಅಂತಹ ಸಮಯದಲ್ಲಿ ಅಮೆರಿಕಾದಂತಹ ಪ್ರಬಲ ರಾಷ್ಟ್ರಗಳು ಮುಂದಿನ ೧೦ ವರ್ಷಗಳಲ್ಲಿ ಪೆಟ್ರೋಲ್ ಇಂಧನಕ್ಕೆ ಬದಲಾಗಿ ಪರ್ಯಾಯ ಶಕ್ತಿಮೂಲಗಳನ್ನು ಅವಲಂಬಿಸಬೇಕಾಗುತ್ತದೆ. ಉಳಿದ ಸಮಯಕ್ಕೆ ಹೆಚ್ಚುವರಿ ಕೋಟಾ ಇರುವ ಬ್ರೆಜಿಲ್ ಮತ್ತು ಭಾರತದಂತಹ ರಾಷ್ಟ್ರಗಳಿಂದ ಖರೀದಿಸಬೇಕಾಗುತ್ತದೆ, ಅದಕ್ಕೆ ಪರಿಹಾರವಾಗಿ ಆ ಸಮಯದವರೆಗೆ ವಿದ್ಯುತ್ ಸಲಕರಣೆಗಳನ್ನು, ಅರಣ್ಯ ಬೆಳೆಸುವ ಖರ್ಚು-ವೆಚ್ಚಗಳನ್ನು ನೀಡಬೇಕಾಗುತ್ತದೆ. ಈ ನಿಯಮವನ್ನು ಅಮೆರಿಕಾ ಒಪ್ಪಿಕೊಳ್ಳುತ್ತಿಲ್ಲ.

ದೊಡ್ಡಣ್ಣನಾದ ಅಮೆರಿಕಾವು ಚೀನಾ, ಭಾರತ, ಬ್ರೆಜಿಲ್ ಹಾಗೂ ದಕ್ಷಿಣ ಆಫ್ರಿಕಾ ದೇಶಗಳನ್ನು ಶ್ರೀಮಂತ ರಾಷ್ಟ್ರಗಳ ಜೊತೆಗೆ ಸೇರಿಸಿ ಕಾನೂನು ರೀತ್ಯಾ ಸಹಿ ಹಾಕಲು ಒತ್ತಾಯಿಸುತ್ತಿದೆ. ಇದರ ಫಲವಾಗಿ ಜಾಗತಿಕ ರಂಗದಲ್ಲಿ ಎರಡು ಬಣಗಳಾಗಿವೆ. ಅವೆಂದರೆ ಧನಿಕ ರಾಷ್ಟ್ರಗಳ ಗುಂಪು ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ಗುಂಪು. ಕೋಪನ್‌ಹೇಗನ್ ಶೃಂಗಸಭೆಯಲ್ಲಿ ಈ ಗುಂಪುಗಳ ನಡುವೆ ಭಿನ್ನಮತ ಸರಿಪಡಿಸುವ ಯತ್ನದಲ್ಲೇ ಬಹು ಸಮಯ ಹಾಳಾಯಿತು.

ಶೃಂಗಸಭೆಯ ಕೊನೆಯ ದಿನ ಆತುರದಲ್ಲಿ ಬಿಕ್ಕಟ್ಟು ಶಮನಗೊಳಿಸುವ ಭಾಗವಾಗಿ ಯೂರೋಪಿನ ದೇಶಗಳು ವಾತಾವರಣಕ್ಕೆ ಕಾರ್ಬನ್ ಹೊರಬಿಡುವ ಪ್ರಮಾಣವನ್ನು ೨೦೨೦ರಲ್ಲಿ ಶೇಕಡ ೨೦ರಿಂದ ೨೬ಕ್ಕೆ ಕಡಿಮೆಗೊಳಿಸುವುದಾಗಿ ಒಪ್ಪಿಕೊಂಡಿವೆ. ಭಾರತವೂ ಸಹ ೨೦೨೦ರಲ್ಲಿ ಕಾರ್ಬನ್ ಹೊರಬಿಡುವ ಪ್ರಮಾಣವನ್ನು ಶೇಕಡ ೨೦ರಿಂದ ೨೫ರಷ್ಟು, ಚೀನಾದೇಶ ಶೇಕಡ ೪೦ರಿಂದ ೪೫ರಷ್ಟು ಹಾಗೂ ಅಮೆರಿಕಾ ಕೇವಲ ಶೇಕಡ ೧೭ರಷ್ಟು ಕಡಿಮೆ ಮಾಡುವುದಾಗಿ ಘೋಷಿಸಿವೆ. ಒಟ್ಟಾರೆ ಶೃಂಗಸಭೆಯ ಅಂತಿಮ ಒಪ್ಪಂದದ ಕರಡು ನಿರ್ಣಯ ಭೂ ರಕ್ಷಣೆಯ ದೃಷ್ಟಿಯಿಂದ ಭರವಸೆ ಮೂಡಿಸಿದೆ. ಈ ಸಭೆಯ ಯಶಸ್ಸು ಮುಂದಿನ ೨೦ ವರ್ಷಗಳಲ್ಲಿ ಎಲ್ಲಾ ದೇಶಗಳು ವಾತಾವರಣಕ್ಕೆ ಕಾರ್ಬನ್ ಹೊರಬಿಡುವ ಪ್ರಮಾಣ ಕಡಿಮೆ ಮಾಡುವುದರ ಮೇಲೆ ಅವಲಂಬಿತವಾಗಿದೆ.

ಭಾರತವನ್ನೂ ಒಳಗೊಂಡಂತೆ ಅನೇಕ ದೇಶಗಳು ತಮ್ಮ ದೇಶದ ಭೂ ಪ್ರದೇಶದಲ್ಲಿ ಪೆಟ್ರೋಲಿಯಂ ನಿಕ್ಷೇಪಗಳಿಗೆ ಶೋಧವನ್ನು ಮುಂದುವರಿಸಿವೆ. ಏಕೆಂದರೆ ಪೆಟ್ರೋಲ್ ಅತಿ ಸುಲಭವಾಗಿ ಸಿಗುವ ಶಕ್ತಿಮೂಲ. ಮೇಲಾಗಿ ಪರ್ಯಾಯ ಶಕ್ತಿಮೂಲಗಳಾದ ಸೌರಶಕ್ತಿ, ಪವನಶಕ್ತಿ, ಜೈವಿಕ ಅನಿಲಶಕ್ತಿ – ಇವು ಇನ್ನೂ ಪ್ರಾರಂಭದ ಹಂತದಲ್ಲಿವೆ. ಇನ್ನು ಆಯಾ ಭಾಗಗಳಲ್ಲಿ ಸಾಕಷ್ಟು ಸಂಶೋಧನೆಗಳಾಗಬೇಕಿದೆ. ಅದೇ ವೇಳೆ ಪೆಟ್ರೋಲ್‌ಅನ್ನು ಸಂಪೂರ್ಣವಾಗಿ ತಿರಸ್ಕರಿಸಿ ಪರ್ಯಾಯ ಶಕ್ತಿಗಳನ್ನೇ ಅವಲಂಬಿಸಲು ಸಾಧ್ಯವಿಲ್ಲ. ಈ ಅಂಶಗಳಿಂದ ಮುಂಬರುವ ವರ್ಷಗಳಲ್ಲಿ ಪೆಟ್ರೋಲ್ ಹೊಗೆ ಪ್ರಮಾಣವು ವಾತಾವರಣದಲ್ಲಿ ಕಡಿಮೆಯಾಗುವುದು ಕಷ್ಟಸಾಧ್ಯ. ಅದರಿಂದಾಗಿ ಭೂಮಿಯ ತಾಪಮಾನ ಇನ್ನೂ ಹೆಚ್ಚುತ್ತದೆ.

ಭೂಮಿ ಬಿಸಿ ಹೆಚ್ಚಾಗುತ್ತಾ ಪ್ರಳಯದ ಹಾದಿಯಲ್ಲಿ ಸಾಗುವ ಸಾಧ್ಯತೆಗಳು ಹೆಚ್ಚಾಗುತ್ತವೆ. ಇದರಿಂದ ಪ್ರಕೃತಿ ವಿಕೋಪಗಳು, ಅನಾಹುತಗಳು ಹೆಚ್ಚಾಗಿ ಮನುಕುಲದ ಉಳಿವಿಗೆ ಸಂಚಕಾರ ಬರಬಹುದು.

**ಪರಮೇಶ್ವರಯ್ಯ ಸೊಪ್ಪಿಮಠ**
ಶಿಕ್ಷಕರು, ಕೆ.ಪಿ.ಓ.ಆರ್. ಕಾಲೊನಿ, ಹಗರಿಬೊಮ್ಮನಹಳ್ಳಿ
ಬಳ್ಳಾರಿ ಜಿಲ್ಲೆ - ೫೮೩ ೨೧೨

ಚಂದ್ರ

ರಾತ್ರಿ
ಮಂದ ಬೆಳಕಲ್ಲಿ
ನಿನ್ನ ಕಣ್ಣೀರಿನ ಹನಿ
ಹುಣ್ಣಿಮೆಯ ಚಂದ್ರ

**ಕಮಲಂ ಅರಸು**
ನಂ. ೧೧, ೧೧ನೇ ಅಡ್ಡರಸ್ತೆ
೩ನೇ ಬಡಾವಣೆ, ತ್ಯಾಗರಾಜನಗರ
ಬೆಂಗಳೂರು - ೨೮




# ಏಕಾಂಗಿ ಗುರುಗ್ರಹ

**ಶು**ಭ್ರ ನೀಲಿ ಆಕಾಶದಲ್ಲಿ ಸಂಜೆ ಎದ್ದು ಕಾಣುವ ಚುಕ್ಕೆ ಗುರುಗ್ರಹ. ಇದರ ಹೊರತಾಗಿ ಬೇರೆ ಯಾವ ಪ್ರಕಾಶಮಾನ ಚುಕ್ಕೆಗಳೂ ಇಲ್ಲ. ಪಶ್ಚಿಮದ ಅಂಚಿಗೆ ಮಂಗಳ ಗ್ರಹ ಕಾಣುವುದು. ಆದರೆ ಗುರುತಿಸುವುದು ಕಷ್ಟ. ಪಶ್ಚಿಮದಲ್ಲಿ ನಕ್ಷತ್ರಗಳೇ ಇಲ್ಲವೇನೋ ಅನ್ನಿಸುವಷ್ಟು ಕ್ಷೀಣವಾದ ನಕ್ಷತ್ರಗಳಿವೆ. ಮಕರ, ಕುಂಭ ರಾಶಿಗಳನ್ನು ಗುರುತಿಸುವುದು ಕಷ್ಟ. ಆದರೆ ಕುಂಭದ ದಕ್ಷಿಣಕ್ಕೆ ಬಕ (ಗ್ರುಸ್) ಎಂಬ ಪುಂಜದ ಎರಡು ಪ್ರಕಾಶಮಾನ ನಕ್ಷತ್ರಗಳು ಕಾಣುವುವು. ಪೂರ್ವದಲ್ಲಿ ಆಕಾಶಗಂಗೆಯ ಭಾಗ ಉಜ್ವಲವಾಗಿ ಕಾಣುವುದು. ಮಹಾವ್ಯಾಧ, ವೃಷಭ ಮತ್ತು ವಿಜಯಸಾರಥಿ ಮುಂತಾದ ಪ್ರಕಾಶಮಾನ ಪುಂಜಗಳು ಕಾಣುವುವು. ಉತ್ತರದಲ್ಲಿ ಕುಂತಿ (ಕಾಸಿಯೋಪಿಯ) ಸ್ಪಷ್ಟವಾಗಿ ಕಾಣುವುದು. ನೆತ್ತಿಯ ಮೇಲೆ ಗುರುಗ್ರಹದ ಪಕ್ಕದಲ್ಲಿ ಚೌಕಾಕಾರದಲ್ಲಿ ನಕುಲ (ಪೆಗಸಸ್) ಕಾಣುವುದು. ಗುರುವಿನ ಸ್ಥಾನ ಮೀನರಾಶಿಯಲ್ಲಿ; ಆದರೆ ಆ ಮೀನುಗಳು ಬಹಳ ಕ್ಷೀಣ; ಈ ಚೌಕವನ್ನು ಮಾತ್ರ ಬಹಳ ಸ್ಪಷ್ಟವಾಗಿ ಗುರುತಿಸಬಹುದು. ೧೪ರ ಸಂಜೆ ಗುರು ಮತ್ತು ಚಂದ್ರ ಪಕ್ಕಪಕ್ಕದಲ್ಲೇ ಕಾಣುತ್ತವೆ.

ಬುಧ ಗ್ರಹ ಸಂಜೆಯ ಆಕಾಶದಲ್ಲಿ ಕಾಣುತ್ತದೆ. ಮೊದಲನೆಯ ತಾರೀಖು ಅದರ ಗರಿಷ್ಠ ಕೋನೋನ್ನತಿ. ಮಂಗಳದ ಪಕ್ಕವೇ ಕಾಣುತ್ತದೆ. ೬, ೭, ೮ ಈ ಅವಧಿಯಲ್ಲಿ ಚಂದ್ರ, ಬುಧ ಮತ್ತು ಮಂಗಳ ಇವುಗಳ ಗುಂಪನ್ನು ನೋಡಬಹುದು.

ಶುಕ್ರ ಮತ್ತು ಶನಿ ಗ್ರಹಗಳು ಬೆಳಗಿನ ಜಾವ ಕಾಣುತ್ತವೆ. ೨ನೆಯ ತಾರೀಖು ಬೆಳಗಿನ ಜಾವ ಚಂದ್ರ ಶನಿಯ ಪಕ್ಕ ಕಾಣುತ್ತದೆ; ೩ನೆಯ ತಾರೀಖು ಶುಕ್ರದ ಪಕ್ಕ ಕಾಣುತ್ತದೆ. ಮುಂದೆ ಶುಕ್ರ, ಶನಿ ದೂರ ದೂರವಾಗುತ್ತವೆ. ಪುನಃ ತಿಂಗಳ ಕೊನೆಗೆ ಪುನಃ ಹೀಗೆ ಜೋಡಿಯಾದಾಗ ಎರಡು ದಿನಗಳ ಅಂತರ ಬರುತ್ತದೆ ಎಂಬುದನ್ನು ಗಮನಿಸಿ.

ಈ ತಿಂಗಳಲ್ಲಿ ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಹೆಸರೇ ಸೂಚಿಸುವಂತೆ ಮಿಥುನ ರಾಶಿಯಿಂದ ಹೊರಟಂತೆ ಕಾಣುವ ಉಲ್ಕೆಗಳನ್ನು ಕಾಣಬಹುದು. ೨೧ರಂದು ಉತ್ತರಾಯಣ - ಕನಿಷ್ಠ ಅವಧಿಯ ಹಗಲಿನ ದಿನ. ಚಳಿಗಾಲದ ಮುಕ್ತಾಯ. ಚಂದ್ರಗ್ರಹಣವೂ ಇದೆ. ಆದರೆ ನಮ್ಮ ಹಗಲಿನಲ್ಲಿ. ಅಂದರೆ ಭಾರತಕ್ಕೆ ಕಾಣುವುದಿಲ್ಲ.

**ತಿಂಗಳ ವಿಶೇಷ ಘಟನೆಗಳು :**

೧ ಬುಧ ಗರಿಷ್ಠ ಕೋನೋನ್ನತಿ (ಸಂಜೆ); ಶನಿ-ಚಂದ್ರ ಜೋಡಿ (ಮುಂಜಾವು)*

೨ ಶುಕ್ರ-ಚಂದ್ರ ಜೋಡಿ.*

೪ ಶುಕ್ರ ಅತಿ ಹೆಚ್ಚು ಪ್ರಕಾಶಮಾನವಾಗಿ ಕಾಣುತ್ತದೆ.

೫ ಅಮಾವಾಸ್ಯೆ ೨೩:೦೬ಕ್ಕೆ.

೬ ಮಂಗಳ-ಚಂದ್ರ ಜೋಡಿ*

೭ ಚಂದ್ರ-ಬುಧ ಜೋಡಿ*

೧೨ ಜೆಮಿನಿಡ್ಸ್ ಉಲ್ಕಾವೃಷ್ಟಿ*

೧೩ ಭೂಮಿ-ಚಂದ್ರ ನಡುವೆ ಗರಿಷ್ಠ ದೂರ; ಚಾಂದ್ರಮಾಸದ ಮೊದಲ ಪಾದ.

೨೦ ಬುಧಗ್ರಹದ ಯುತಿ.

೨೧ ಹುಣ್ಣಿಮೆ ೧೩:೪೩ಕ್ಕೆ - ಸಂಪೂರ್ಣ ಚಂದ್ರಗ್ರಹಣ (ಭಾರತದಲ್ಲಿ ಕಾಣುವುದಿಲ್ಲ); ಉತ್ತರಾಯಣ

೨೫ ಚಂದ್ರ-ಭೂಮಿ ಕನಿಷ್ಠ ದೂರ.

೨೮ ಚಾಂದ್ರಮಾಸದ ಕೊನೆಯ ಪಾದ.

೨೯ ಶನಿ-ಚಂದ್ರ ಜೋಡಿ.*

೩೧ ಶುಕ್ರ-ಚಂದ್ರ ಜೋಡಿ.*

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧


೧೪ರ ಸಂಜೆ ಚಂದ್ರ ಮತ್ತು ಗುರುಗ್ರಹ

# ದೇಶ-ವಿದೇಶಗಳ ನಡುವಿನ ಹಣಕಾಸು ಲೆಕ್ಕವನ್ನು ಸರಿದೂಗಿಸುವುದು




**ಕೆ. ಎಸ್. ಪಾರ್ಥಸಾರಥಿ**

ಆರ್ಥಿಕ ಜಗತ್ತಿನಲ್ಲಿ ದೇಶದ ಒಳಕ್ಕೂ ಹೊರಕ್ಕೂ ಹಣ ನಿರಂತರ ಹರಿಯುತ್ತಿರುವ ವಿಷಯ ಈಗಾಗಲೆ ಪ್ರಸ್ತಾಪಿಸಿದ್ದೇವೆ. ಇದಕ್ಕೊಂದು ಲೆಕ್ಕದ ವ್ಯವಸ್ಥೆಯಿದೆ. ಅದರ ಕೆಲಸ ಈ ಒಳ-ಹೊರ ಹರಿವನ್ನು ಸರಿದೂಗಿಸುವುದು. ನಾವು ಯಾವಾಗಲೂ ರಫ್ತು ಮಾಡುತ್ತಾ, ಆಮದು ಮಾಡಿಕೊಳ್ಳದೆ ಡಾಲರ್ ಸಂಗ್ರಹಿಸಿ ಶ್ರೀಮಂತ ದೇಶವಾಗಬಹುದೇ ? ಬರೆ ರಫ್ತಿನ ಉದ್ಯೋಗ ಮಾಡುವ ವ್ಯಾಪಾರಿಗೆ ಇದೇ ಉದ್ದೇಶ. ಆದರೆ ಬಂದ ಡಾಲರ್ ವ್ಯಕ್ತಿಯ ಕೈಗೆ ರೂಪಾಯಿ ರೂಪದಲ್ಲಿ ಬರುತ್ತದೆ ಎಂದು ಗಮನಿಸಿದ್ದೇವಲ್ಲ. ಈ ಡಾಲರ್ ನಮ್ಮ ವಿದೇಶೀ ವಿನಿಮಯವಾಗಿ ರಿಸರ್ವ್ ಬ್ಯಾಂಕ್ ಸಂಗ್ರಹಿಸುತ್ತದೆ. ಅದನ್ನು ಅದು ಏನು ಮಾಡಬೇಕು ? ಸುಮ್ಮನೆ ತಿಜೋರಿಯಲ್ಲಿದ್ದರೆ ಹಣ ಹಣವೇ ಅಲ್ಲ. ಅದನ್ನು ಡಾಲರ್‌ಗೆ ದೊರಕುವ ವಿದೇಶೀ ಹುಂಡಿಗಳು, ಅಮೆರಿಕಾ ಸರ್ಕಾರದ ಸಾಲಪತ್ರ, ವಿದೇಶದಲ್ಲಿ ಆಸ್ತಿಪಾಸ್ತಿ ವ್ಯವಹಾರ ಮುಂತಾದವುಗಳಲ್ಲಿ ಹೂಡಿದರೆ ಆಗ ಅದು ಒಂದಿಷ್ಟು ಲಾಭ ದುಡಿಯುತ್ತದೆ. ಆಗುವುದು ಹಾಗೆಯೆ. ಅದನ್ನೆಲ್ಲಾ ರಿಸರ್ವ್ ಬ್ಯಾಂಕ್ ಒಂದೇ ಮಾಡುವುದಿಲ್ಲ. ನಮ್ಮದೇ ಉದ್ಯಮಿಗಳು ವಿದೇಶದಿಂದ ಮೂಲವಸ್ತು, ತಂತ್ರಜ್ಞಾನ, ಯಂತ್ರೋಪಕರಣಗಳು, ತಂತ್ರಜ್ಞಾನ ಸೇವೆ ಮುಂತಾದುವುಗಳನ್ನು ಪಡೆಯಲು, ವಿದೇಶದಲ್ಲಿ ಬಂಡವಾಳ ಹೂಡಲು ಬಳಸುತ್ತಾರೆ. ಆಗಲೆ ನಾವೂ ಒಂದಿಷ್ಟು ಮೌಲ್ಯಯುತ ಉತ್ಪಾದನೆ ಮಾಡಿ, ರಫ್ತು ಮಾಡುವುದು ಸಾಧ್ಯವಾಗುವುದು. ರಫ್ತು ಮಾಡಿ ಬಂದಿದ್ದು ಆಮದು ಮಾಡಿ ಹೋದದ್ದು ಎರಡೂ ತಾಳೆಯಾಗುತ್ತಿರಬೇಕು. ಇಲ್ಲದಿದ್ದರೆ ಇದರಲ್ಲಿ ವಿದೇಶೀ ವಿನಿಯಮದ ಕೊರತೆ ಅಥವಾ ಹೆಚ್ಚಳ ಉಂಟಾಗುತ್ತದೆ. **ಕೊರತೆಯಾದರೆ ಸಾಲ ತೆಗೆದು, ಹೆಚ್ಚುವರಿ ಆದರೆ ಹೊರಗೆ ಬಂಡವಾಳ ಹೂಡಿ ಅಥವಾ ಸರಕು ಸರಿದೂಗಿಸುವುದು ನಿರಂತರ ವ್ಯಾಪಾರ.**

ಬ್ಯಾಲೆನ್ಸ್ ಆಫ್ ಪೇಮೆಂಟ್ಸ್ ಲೆಕ್ಕದಲ್ಲಿ ಬರುವ ಹಣವನ್ನು ಕರೆಂಟ್ ಅಕೌಂಟ್, ಅಂದರೆ ಸದ್ಯದ ಲೆಕ್ಕ ಮತ್ತು ಕ್ಯಾಪಿಟಲ್ ಅಕೌಂಟ್, ಅಂದರೆ ಹೂಡಿಕೆ ಲೆಕ್ಕ ಎಂದು ಎರಡು ಶಿರೋನಾಮೆಗಳಲ್ಲಿ ಪಟ್ಟಿ ಮಾಡುತ್ತಾರೆ. ಸದ್ಯದ್ದು, ಅಂದರೆ ತಕ್ಷಣವೇ ಲೆಕ್ಕ ಚುಕ್ತಿಯಾಗಬೇಕು. ಮಿಕ್ಕವಕ್ಕೆ ನಿರ್ದಿಷ್ಟ ಅವಧಿ ಇರುತ್ತದೆ. ಕರೆಂಟ್ ಅಕೌಂಟ್ ಲೆಕ್ಕದಲ್ಲಿ ಕೊರತೆ ಬಂದರೆ ಅದು ಚಿಂತೆಯುಂಟುಮಾಡುವಂಥದು.

ಈ ಲೆಕ್ಕದಲ್ಲಿ ಬರುವುದು ಕೇವಲ ಸರಕು ಸರಂಜಾಮುಗಳ ರಫ್ತು, ಆಮದು ಮಾತ್ರವಲ್ಲ. ವಿದೇಶೀ ಉದ್ಯಮಿಗಳು ನಮ್ಮ ದೇಶದ ವ್ಯವಹಾರದಲ್ಲಿ ಬಂಡವಾಳ ಹೂಡುತ್ತಾರೆ. ವಲಸೆ ಹೋದ ಜನ ಸಂಪಾದಿಸಿ ಮನೆಗೆ ಕಳುಹಿಸುವ ಹಣ, ಓದಲು ಹೋದವರು ವಿದೇಶದಲ್ಲಿ ಖರ್ಚು ಮಾಡುವ ಹಣ, ಇವೂ ಇದೇ ಲೆಕ್ಕದ್ದು. ಅಭಿವೃದ್ಧಿಯ ಹಾದಿಯಲ್ಲಿರುವ ದೇಶಗಳಿಗೆ ವಿದೇಶೀ ನೆರವಿನ ರೂಪದ ಹಣ ಬರುತ್ತದೆ. ಸರ್ಕಾರಗಳು ಬಂಡವಾಳ ಹೂಡುತ್ತವೆ. ಚಿನ್ನ, ಚಿನ್ನದ ಆಭರಣಗಳು ಈ ಲೆಕ್ಕಕ್ಕೆ ಬರುತ್ತವೆ. ಕೊರತೆ ಮತ್ತು ಹೆಚ್ಚಳಕ್ಕೆ ಅನ್ವಯಿಸಿ ದೇಶ-ವಿದೇಶಗಳ ರಿಸರ್ವ್ ಬ್ಯಾಂಕುಗಳೂ ಪರಸ್ಪರ ಹಣ ಬದಲಾಯಿಸಿಕೊಳ್ಳುತ್ತವೆ. ಐಎಂಎಫ್, ವಿಶ್ವ ಬ್ಯಾಂಕುಗಳೂ ಇದೇ ರೀತಿ ಸಾಂಸ್ಥಿಕವಾಗಿ ಹಣ ಬದಲಾಯಿಸುತ್ತಿರುತ್ತವೆ. ಮನಿ ಎಕ್ಸ್‌ಛೇಂಜ್‌ಗಳಲ್ಲಿ, ದೇಶ-ವಿದೇಶ ಕರೆನ್ಸಿಗಳನ್ನೇ ಸರಕಿನಂತೆ ವ್ಯಾಪಾರ ಮಾಡುವಾಗ ಈ ಚಲಾವಣೆಗಳಾಗುತ್ತವೆ. **ಈ ಎಲ್ಲ ಹಣದ ಜಮಾ-ಖರ್ಚು ಲೆಕ್ಕ** ಪ್ರತಿದಿನವಲ್ಲದಿದ್ದರೂ, **ವರ್ಷದ ಅಂತ್ಯದಲ್ಲಿ ಸರಿದೂಗಿಸುವ ಕೆಲಸವೇ ಬ್ಯಾಲೆನ್ಸ್ ಆಫ್ ಪೇಮೆಂಟ್ಸ್** ಎಂದೆನಿಸಿಕೊಳ್ಳುತ್ತದೆ. ವಿದೇಶೀ ವಿನಿಮಯದ ಒಳ-ಹೊರ ಹರಿವು ಆಂತರಿಕ ಅರ್ಥವ್ಯವಸ್ಥೆಯಲ್ಲಿ ಹೇಗೆ ಪರಿಣಾಮ ಬೀರುತ್ತದೆ, ಒಂದು ಡಾಲರಿಗೆ ಎಷ್ಟು ರೂಪಾಯಿ ಎಂಬ ವಿದೇಶಿ ವಿನಿಮಯ ದರದ ಮೇಲೆ ಇದರ ಪರಿಣಾಮವೇನು, ಇವುಗಳನ್ನು ಈ ಹಿಂದೆಯೆ ಚರ್ಚಿಸಿದೆ.

ಈ ಲೆಕ್ಕ ಸರಿದೂಗಿಸುವುದು ಅಗತ್ಯವೆ ? ರೂಪಾಯಿಗೆ ಇಷ್ಟು ಡಾಲರು ಎಂದು ಕೇವಲ ಮಾರುಕಟ್ಟೆಯೇ ನಿರ್ಧರಿಸಲು ಬಿಟ್ಟರೆ ಏನಾಗುತ್ತದೆ ? ಅದನ್ನು ನಿಗದಿ ಮಾಡಲು ದೇಶಗಳು ಎಷ್ಟು ಸ್ವತಂತ್ರ ಎಂಬುದು ಒಂದು ಸ್ವಾರಸ್ಯಕರ ವಿಷಯ. ಅನಾದಿಕಾಲದಿಂದಲೂ ಬೆಲೆಬಾಳುವ ವಸ್ತುಗಳು – ಲೋಹ, ಕಲ್ಲು, ಚಿನ್ನ ಬೆಳ್ಳಿ ಮುಂತಾದುವು ಹಣ ಎನಿಸಿಕೊಂಡು ಅವು ವಿನಿಮಯ ಮಾಧ್ಯಮಗಳಾಗಿದ್ದುವು. ಕಳೆದ ಶತಮಾನದ ಮೊದಲ ಭಾಗದಲ್ಲಿ ಪ್ರಥಮ ಮಹಾಯುದ್ಧದ ಅಂತ್ಯದ ವೇಳೆಗೆ, ಜಗತ್ತಿನ ಬಹುಭಾಗದ ಚಿನ್ನ ಅಮೆರಿಕದ ಫೆಡರಲ್ ಬ್ಯಾಂಕಿನ ನಿಕ್ಷೇಪವಾಗಿ ಸೇರಿತ್ತು. ಆಗ ಇದ್ದ ಜಾಗತಿಕ ಪರಸ್ಪರ ಹಣಕಾಸು ವ್ಯವಹಾರದ ವಿನಿಮಯ ಮಾಧ್ಯಮಕ್ಕೆ **ಗೋಲ್ಡ್ ಸ್ಟ್ಯಾಂಡರ್ಡ್** ಎಂದೇ ಹೇಳುತ್ತಿದ್ದುದು. ಪ್ರತಿಯೊಂದು ದೇಶವೂ ಒಂದು ಔನ್ಸ್ ಚಿನ್ನಕ್ಕೆ ನಮ್ಮದು ಇಷ್ಟು ರೂಪಾಯಿ, ಡಾಲರು ಅಥವಾ ಪೌಂಡು ಎಂದು ಮುಂತಾಗಿ ನಿಗದಿ ಮಾಡಿಕೊಳ್ಳುತ್ತಿದ್ದವು. ಅವರ ಕೇಂದ್ರ ಬ್ಯಾಂಕಿನಿಂದ ಅಷ್ಟು ಚಿನ್ನ ಕೊಟ್ಟು ಕರೆನ್ಸಿ ಅಥವಾ ಕರೆನ್ಸಿ ಕೊಟ್ಟು ಚಿನ್ನ ಪಡೆಯಬಹುದಿತ್ತು. ಅದೇ **ಗೋಲ್ಡ್ ಸ್ಟ್ಯಾಂಡರ್ಡ್**. ಅಷ್ಟೇಕೆ ೧೯೯೦ರಲ್ಲೂ ನಮ್ಮ ರಿಸರ್ವ್ ಬ್ಯಾಂಕ್ ವಿದೇಶೀ ವಿನಿಮಯ ಸಂಗ್ರಹವಿಲ್ಲದೆ ದಿವಾಳಿಯಾಗಿದ್ದು, ತನ್ನಲ್ಲಿದ್ದ ೧೫೦ ಟನ್ ಚಿನ್ನವನ್ನು ಇಂಗ್ಲೆಂಡಿನ ಮತ್ತು ಸ್ವಿಟ್ಜರ್‌ಲ್ಯಾಂಡ್‌ನ ರಿಸರ್ವ್ ಬ್ಯಾಂಕಿನಲ್ಲಿ ಅಡವಿಟ್ಟು ಡಾಲರ್ ಪಡೆದುಕೊಳ್ಳಬೇಕಾಯ್ತು. ಹಾಗೆ ಈ ವ್ಯವಹಾರದಲ್ಲಿ ಚಿನ್ನದ ಪಾತ್ರ ಇಂದಿಗೂ ತೆರೆಮರೆಯಲ್ಲೇ ಆದರೂ ಬಹಳ ಪ್ರಭಾವಯುತವಾದುದು. ಈಗಷ್ಟೆ ಅಂತರರಾಷ್ಟ್ರೀಯವಾಗಿ ಮುಂದುವರಿದ ಆರ್ಥಿಕ ವ್ಯವಸ್ಥೆಗಳ ಅರ್ಥವ್ಯವಸ್ಥೆ ಕುಸಿದು, ಡಾಲರ್ ಬೆಲೆ ತೀರ ಕುಸಿದು ಬಿಕ್ಕಟ್ಟು ಉಂಟಾಗಿರುವ ಹಿನ್ನೆಲೆಯಲ್ಲಿ ಜರ್ಮನಿ ಮತ್ತೊಮ್ಮೆ ಡಾಲರ್ ಕೈಬಿಟ್ಟು, ಚಿನ್ನದ ಸ್ಟಾಂಡರ್ಡ್‌ಗೆ ಹಿಂತಿರುಗುವುದು ಒಳ್ಳೆಯದು ಎಂದು ಹೇಳುತ್ತಿದೆ. ಚೀನಾ ಅಪಾರವಾಗಿ ಅಮೆರಿಕಾದ ಡಾಲರ್ ಗಳಿಸಿ, ಅದನ್ನು ಹೇಗೆ ಬಳಸುವುದು ಎಂದು ತಿಳಿಯದೆ ಚಿಂತಿಸುತ್ತಿರುವುದು ಒಂದೆಡೆಯಾದರೆ, ಅದು ತನ್ನ ನಾಣ್ಯಕ್ಕೆ ಎಷ್ಟು ಡಾಲರು ಎಂಬುದನ್ನು ವಾಸ್ತವಕ್ಕೆ ದೂರವಾಗಿ, ವಿಪರೀತ ತಗ್ಗಿಸಿ, ಕೃತಕವಾಗಿ ದರ ನಿರ್ಧರಿಸಿಕೊಂಡು, ಅಮೆರಿಕಕ್ಕೂ, ಡಾಲರ್ ಲೆಕ್ಕ ಇಟ್ಟ ಇತರರಿಗೂ ಆತಂಕ ಉಂಟುಮಾಡಿದೆ. ಅಂದರೆ ಅಂತರರಾಷ್ಟ್ರೀಯವಾಗಿ ಬ್ಯಾಲೆನ್ಸ್ ಆಫ್ ಪೇಮೆಂಟ್ಸ್ ಲೆಕ್ಕಗಳು ಸರಿದೂಗದೆ, ಕರೆನ್ಸಿ ಮತ್ತು ಹಣಕಾಸು ಮಾರುಕಟ್ಟೆಗಳಲ್ಲಿ ತೀವ್ರ ಬಿಕ್ಕಟ್ಟು ಉಂಟಾಗಿದೆ. ಅಂದರೆ ಇದರ ಅರ್ಥ ಏನು ?

ದೇಶ-ವಿದೇಶಗಳ ಬ್ಯಾಲೆನ್ಸ್ ಆಫ್ ಪೇಮೆಂಟ್ಸ್ ಅಸ್ತವ್ಯಸ್ತವಾಗಿದೆ. ಸರಿದೂಗಿಸಲು ಆಗುತ್ತಿಲ್ಲ. ಅದು ಕೆಲವರಿಗೆ ವಿಪರೀತ ಹಣದುಬ್ಬರ, ಬಡ್ಡಿ ದರದ ಏರಿಕೆ, ಉತ್ಪಾದನೆಯಲ್ಲಿ ಕುಸಿತ, ನಿರುದ್ಯೋಗ, ಹಣಕಾಸು ಮಾರುಕಟ್ಟೆಯ ಅಸ್ಥಿರತೆ ಮುಂತಾಗಿ ವ್ಯಕ್ತವಾಗಿದೆ. ಕೆಲವರಿಗೆ ಅಂದರೆ, ಮುಖ್ಯವಾಗಿ ಈ ಕ್ಷೇತ್ರದ ರಾಜರಾಗಿದ್ದ ಪಾಶ್ಚಿಮಾತ್ಯ ಬಂಡವಳಿಗ ವ್ಯವಸ್ಥೆಗಳಾದ, ಅಮೆರಿಕ, ಫ್ರಾನ್ಸ್, ಜಪಾನ್, ಇಂಗ್ಲೆಂಡ್ ಮುಂತಾಗಿ. ಹಾಗೆಯೆ ಹೊಸದಾಗಿ ವಿಕಾಸದ ಹಾದಿಯಲ್ಲಿರುವ ಭಾರತ, ಚೀನಾ,

ಬ್ರೆಜಿಲ್, ದಕ್ಷಿಣ ಆಫ್ರಿಕಾ ಮುಂತಾದುವು ಅವಕ್ಕಿಂತ ಉತ್ತಮ ಸ್ಥಿತಿಯಲ್ಲಿವೆ. ಜಿ-೩, ಜಿ-೫, ಜಿ ೭+೧, ಜಿ-೮... ಈಗ ಜಿ-೨೦ ಎಂದು ಹಿಗ್ಗಿರುವ ಶ್ರೀಮಂತ ರಾಷ್ಟ್ರಗಳ ಸಭೆಗಳಲ್ಲಿ ಇದನ್ನು ತೀವ್ರವಾಗಿ ಚರ್ಚಿಸುತ್ತಿದ್ದಾರೆ. ಇಲ್ಲಿಯವರೆಗಿನ ಗೋಲ್ಡ್ ಸ್ಟ್ಯಾಂಡರ್ಡ್, ಡಾಲರ್ ಸ್ಟ್ಯಾಂಡರ್ಡ್‌ಗಳು ಈಗ ಮಾಪನವಾಗುವ ಸಾಮರ್ಥ್ಯ ಕಳೆದುಕೊಂಡು, ಹೊಸದೇನಾದರೂ ಮಾಡಬೇಕೆಂಬ ತಡಕಾಟ ನಡೆಯುತ್ತಿದೆ. ಜಿ-೩ರಿಂದ ಜಿ-೨೦ ಎಂಬ ಬದಲಾವಣೆ ಕೇವಲ ಎರಡು-ಮೂರು ದಶಕಗಳಲ್ಲಿ ಆದ ಪರಿವರ್ತನೆ ಎಂದಾಗ ಜಾಗತಿಕ ಅರ್ಥವ್ಯವಸ್ಥೆ ಎಷ್ಟು ಬೇಗ ಗುರುತಿಲ್ಲದೆ ಬದಲಾಯಿಸಿದೆ ಎಂದು ತಿಳಿಯಬಹುದು. **ಬಂಡವಾಳ ವ್ಯವಸ್ಥೆಯ ಅರ್ಥಶಾಸ್ತ್ರ ಜಾಗತಿಕವಾಗಿ ಸಮಸ್ಯೆಗಳನ್ನು ನಿರ್ವಹಿಸಲು ಈಗ ಅಸಮರ್ಥವಾಗಿರುವುದು ಸ್ಪಷ್ಟ.**

**ಒಂದೆರಡು ಮಾಹಿತಿಗಳು :** ಎರಡನೆಯ ಮಹಾಯುದ್ಧ ಮುಗಿಯುತ್ತಿದ್ದಂತೆಯೆ ಅಮೆರಿಕದ ಅಧ್ಯಕ್ಷ ರೂಸ್‌ವೆಲ್ಟ್ ಅವರ ದೂರದೃಷ್ಟಿಯಿಂದಾಗಿ, ವಿಶ್ವಶಾಂತಿಯನ್ನು ಕಾಯ್ದುಕೊಳ್ಳಲು ಹಲವಾರು ಹೆಜ್ಜೆಗಳನ್ನು ತೆಗೆದುಕೊಳ್ಳಲಾಯ್ತು. ಮೊದಲನೆಯ ಮಹಾಯುದ್ಧದ ನಂತರವೂ ಅಮೆರಿಕದ ವುಡ್ರೋ ವಿಲ್ಸನ್ ಅವರ ಒತ್ತಾಯದಂತೆ ಹೀಗೆಯೇ ಹಲವು ತೀರ್ಮಾನಗಳನ್ನು ಕೈಗೊಂಡರೂ, ಅದನ್ನು ಪ್ರಾಮಾಣಿಕವಾಗಿ ಯಾರೂ ಪಾಲಿಸದೆ, ಅವರು ನಿರ್ಮಿಸಿದ ಲೀಗ್ ಆಫ್ ನೇಷನ್ಸ್ ಮೂಲೆಗುಂಪಾಗಿ, ಮತ್ತೊಂದು ಮಹಾಯುದ್ಧಕ್ಕೆ ದಾರಿಯಾಯ್ತು. ಮತ್ತೊಮ್ಮೆ ಹಾಗಾಗುವುದು ಬೇಡ ಎಂಬ ಪ್ರಯತ್ನ ನಡೆದದ್ದು ೧೯೪೪ರಲ್ಲಿ. **ಆಗಲೆ ವಿಶ್ವಸಂಸ್ಥೆಯ ಸ್ಥಾಪನೆಯಂತೆಯೇ, ಅಮೆರಿಕದ ಬ್ರೆಟನ್‌ವುಡ್ಸ್ ಎಂಬ ಸ್ಥಳದಲ್ಲಿ ಜಗತ್ತಿನ ೪೪ ರಾಷ್ಟ್ರಗಳ ಸುಮಾರು ೭೦೦ ಪ್ರತಿನಿಧಿಗಳು ಸಭೆ ಸೇರಿ ವಿಶ್ವ ಆರ್ಥಿಕ ವ್ಯವಸ್ಥೆಯನ್ನು ಸುವ್ಯವಸ್ಥಿತವಾಗಿಸುವ ಚಿಂತೆ ನಡೆಸಿದರು.** ಭಾರತವೂ ಅದರಲ್ಲಿತ್ತು. ನಮ್ಮ ಹೆಸರಾಂತ ಅರ್ಥಶಾಸ್ತ್ರಜ್ಞ **ಚೀತಾಮಣಿ ದೇಶಮುಖ್** ಇದ್ದರು ಅಲ್ಲಿ. ಅಲ್ಲಿಯ ತೀರ್ಮಾನದಂತೆ ನಮಗೆ ಪರಿಚಿತವಾದ **ವಿಶ್ವ ಬ್ಯಾಂಕು, ವಿಶ್ವ ಹಣಕಾಸು** ಸಂಸ್ಥೆಗಳ ಸ್ಥಾಪನೆಗೆ ದಾರಿಯಾಯ್ತು. **ಈ ಎರಡೂ ಸಂಸ್ಥೆಗಳನ್ನು ಬ್ರೆಟನ್‌ವುಡ್ಸ್ ಸೋದರಿಯರು ಎಂದು ಕರೆಯುತ್ತಾರೆ.** ಹಾಗೂ ರಾಜಕೀಯವಾಗಿ ಅತ್ಯಂತ ಬಲಶಾಲಿ ವ್ಯವಸ್ಥೆಯಾಗಿ ಎದ್ದುಬಂದ ಅಮೆರಿಕದ ಡಾಲರನ್ನು, ಅಲ್ಲಿಯವರೆಗೆ ಆ ಸ್ಥಾನ ಪಡೆದಿದ್ದ **ಪೌಂಡ್ ಸ್ಟರ್ಲಿಂಗ್** ಕೈಬಿಟ್ಟು, ಅಂತರರಾಷ್ಟ್ರೀಯ ಮಾಪನವಾಗಿ ಸ್ವೀಕರಿಸಿದರು. ಅಮೆರಿಕ ಸರ್ಕಾರ ಇಂತಿಷ್ಟು ಡಾಲರಿಗೆ ಇಂತಿಷ್ಟು ಚಿನ್ನವನ್ನು ಯಾರಿಗೆ ಯಾವಾಗ ಬೇಕಾದರೂ ನೀಡುವ ಆಶ್ವಾಸನೆ ನೀಡಲಾಗಿ, ಈ ಹೊಸ ಹಣಕಾಸು ವ್ಯವಸ್ಥೆ ಎಲ್ಲರ ವಿಶ್ವಾಸ ಪಡೆದು, ಸ್ವಲ್ಪಕಾಲ ಜಾಗತಿಕ ಅರ್ಥವ್ಯವಸ್ಥೆಯಲ್ಲಿ ಸ್ಥಿರತೆ ಉಂಟಾಯ್ತು. ಅಂದರೆ ರಫ್ತು, ಆಮದು, ಬ್ಯಾಲೆನ್ಸ್ ಆಫ್ ಪೇಮೆಂಟ್ಸ್ ಸಮಸ್ಯೆಗಳು ಅಸ್ಥಿರತೆಯನ್ನು ನಿವಾರಿಸಿಕೊಂಡವು. ವಿಶ್ವ ಹಣಕಾಸು ಸಂಸ್ಥೆ ಬ್ಯಾಲೆನ್ಸ್ ಆಫ್ ಪೇಮೆಂಟ್ಸ್ ಸಮಸ್ಯೆ ಇರುವ ದೇಶಗಳಿಗೆ ತಾತ್ಕಾಲಿಕ ನೆರವು ನೀಡುವುದು, ಹಿಂದುಳಿದ ವ್ಯವಸ್ಥೆಗಳಿಗೆ ಸಾಲ ನೀಡುವುದು ಮುಂತಾದ ಕೆಲಸ ಮಾಡುತ್ತದೆ. ವಿಶ್ವ ಬ್ಯಾಂಕ್ ವಾಣಿಜ್ಯ ಕ್ಷೇತ್ರದಲ್ಲಿ ಹೂಡಿಕೆಯ ಬಂಡವಾಳ ನೀಡುತ್ತದೆ. ಈ ಎರಡೂ ಸಂಸ್ಥೆಗಳಲ್ಲಿ ಸರ್ಕಾರಗಳು ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಪಾಲು ಪಡೆದಿವೆ. ಇಲ್ಲಿಯ ತೀರ್ಮಾನದಂತೆ **ಫ್ಲೋಟಿಂಗ್ ರೇಟ್ ಆಫ್ ಎಕ್ಸ್‌ಛೇಂಜ್** ಎಂಬ ವ್ಯವಸ್ಥೆ ಬಂತು. ಅಂದರೆ ಡಾಲರೊಂದಿಗೆ ಸಮೀಕರಿಸಿ ಪ್ರತಿಯೊಂದು ದೇಶವೂ ತನ್ನ ಕರೆನ್ಸಿಯ ಬೆಲೆಯನ್ನು ಇಷ್ಟು ಎಂದು ನಿಗದಿಮಾಡಿ, ಅದು ಮಾರುಕಟ್ಟೆಯ ನಿರಂತರ ಬದಲಾಗುವ ಪರಿಸ್ಥಿತಿಯಂತೆ ಮುಕ್ತವಾಗಿ ತೂಗಾಡಲು ಬಿಡುವುದು. ಆದರೆ ಆ ತೂಗಾಟ +/– ಶೇಕಡ ೧ ಎಂಬ ವಲಯದಲ್ಲಿರಬೇಕು; ಅದಕ್ಕೆ ಮೀರಿದಾಗ ಕೇಂದ್ರ ಬ್ಯಾಂಕುಗಳು ಮಾರುಕಟ್ಟೆ ಪ್ರವೇಶಿಸಿ ಡಾಲರುಗಳನ್ನು ಮಾರಿ ಅಥವಾ ಕೊಂಡು ಮತ್ತೆ ಈ ತಾರಾಟವನ್ನು ಮಿತಿಯೊಳಗೆ ತಹಬಂದಿಗೆ ತರುತ್ತಿರಬಹುದು. ಹಾಗೆ ಆದಾಗ ಜಾಗತಿಕ ವಾಣಿಜ್ಯ ವ್ಯವಹಾರದಲ್ಲೂ ಒಂದು ಮಟ್ಟದ ಸ್ಥಿರತೆಯನ್ನು ಕಾಪಾಡಿಕೊಳ್ಳಬಹುದು. ಹೀಗೆ ಈ ಮಿತಿಯಲ್ಲಿ ಹಿಡಿದಿಡಲಾಗದೆ ಸದ್ಯದಲ್ಲಿ ಇವು ಮಿತಿಮೀರುತ್ತಿರುವುದೇ ಇಂದಿನ ಬಿಕ್ಕಟ್ಟು.




ನವೆಂಬರ್ ೧ರಂದು ಮಂಡ್ಯದಲ್ಲಿ ನಡೆದ ನವಕರ್ನಾಟಕ ಪುಸ್ತಕ ಮೇಳವನ್ನು ಗಾಂಧಿ ಭವನದ ಅಧ್ಯಕ್ಷರೂ, ಮಾಜಿ ಸಂಸತ್ ಸದಸ್ಯರೂ ಆದ ಜಿ. ಮಾದೇಗೌಡ ಉದ್ಘಾಟಿಸಿದರು. ಡಾ|| ಎಚ್. ಎಸ್. ಮುದ್ದೇಗೌಡ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಸ್. ಶ್ರೀನಿವಾಸ ಶೆಟ್ಟಿ ಮತ್ತು ಶ್ರೀ ಡಿ. ಎನ್. ಶ್ರೀರಾಮು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ನಮ್ಮ ದೇಶದ ವ್ಯವಸ್ಥೆಯಲ್ಲಿ ಡಾಲರ್-ರೂಪಾಯಿ ಬೆಲೆ ೪೦ ರೂ.ನಿಂದ ೫೫ರೂ. ಮಧ್ಯೆ ಏಕೆ ತಾರಾಡುತ್ತಿರುತ್ತದೆ ಎಂಬುದಕ್ಕೆ ಈ ವ್ಯವಸ್ಥೆಯೇ ಕಾರಣ. ನಮ್ಮ ಆರ್ಥಿಕತೆಯಲ್ಲಿ ಆತ್ಮವಿಶ್ವಾಸ ಹೆಚ್ಚಿದಾಗ, ನಾವು ಇದು ತಾರಾಡಿದಾಗಲೂ ಮಧ್ಯ ಪ್ರವೇಶ ಮಾಡುವುದಿಲ್ಲ ಎಂಬ ತೀರ್ಮಾನಕ್ಕೆ ಬರಬಹುದು. ಅಮೆರಿಕ ಮುಂತಾದ ಬೃಹತ್ ವ್ಯವಸ್ಥೆಗಳು ಹಾಗೆಯೆ ಮಾಡಿವೆ. ಇಂದು ಡಾಲರಿನ ಬೆಲೆ ಅಲ್ಲಿಯ ಅರ್ಥವ್ಯವಸ್ಥೆ ಅತಂತ್ರವಾಗಿರುವುದರಿಂದ ತೀರ ಕುಸಿದಿದೆ. ಚೀನಾ ಈ ಯಾವ ಅಂತರರಾಷ್ಟ್ರೀಯ ಒಪ್ಪಂದಕ್ಕೂ ಕ್ಯಾರೆ ಎನ್ನದೆ ಈಗ ಡಾಲರ್ ಮತ್ತು ತನ್ನ ನಾಣ್ಯದ ಬೆಲೆಯನ್ನು ತೀರ ಕಡಿಮೆ ದರದಲ್ಲಿ ತಾರಾಡಲು ಬಿಡದೆ, ಮಾರುಕಟ್ಟೆಯ ವಾಸ್ತವಕ್ಕೆ ದೂರವಾಗಿ ನಿಗದಿ ಮಾಡಿದೆ. ಈಗ ಅದರ ಬಳಿ ೧.೭ ಬಿಲಿಯನ್ ಡಾಲರುಗಳಷ್ಟು ನಿವ್ವಳ ವಿದೇಶೀ ವಿನಿಮಯ ಶೇಖರವಾಗಿಬಿಟ್ಟಿದೆ. ಡಾಲರ್ ಸ್ಟ್ಯಾಂಡರ್ಡ್ ಒಪ್ಪಿಕೊಂಡವರಿಗೆಲ್ಲಾ ಇದು ಆತಂಕಕಾರಿಯಾಗಿದೆ. ಈಗ ಕೊರಿಯಾದಲ್ಲಿ ನಡೆದ ಜಿ-೨೦ರ ಶೃಂಗಸಭೆಯಲ್ಲಿ ಇದು ಮುಖ್ಯವಾದ ಚರ್ಚಾ ವಿಷಯ. ಚೀನಾವನ್ನು ಅಂತರರಾಷ್ಟ್ರೀಯ ಶಿಸ್ತಿಗೆ ಹೇಗೆ ಎಳೆದು ತರುವುದು ಎಂಬುದು ಅದು. ಒಬಾಮಾ ಯಾತ್ರೆಯ ರಹಸ್ಯದಲ್ಲಿ ಇದು ಮುಖ್ಯ ವಿಷಯ!

೧೯೭೧ರಲ್ಲಿ ನಿಕ್ಸನ್ ಅಮೆರಿಕ ಇನ್ನು ಮೇಲೆ ಡಾಲರಿಗೆ ಇಂತಿಷ್ಟು ಚಿನ್ನ ನೀಡಲು ಆಗುವುದಿಲ್ಲ ಎಂದು ಏಕಪಕ್ಷೀಯವಾಗಿ ನಿರ್ಧರಿಸಿದರು. ಅದನ್ನು **ನಿಕ್ಸನ್ ಷಾಕ್** ಎನ್ನುತ್ತಾರೆ. ಅಂದು ವಿಯಟ್ನಾಂ ಯುದ್ಧವೇ ಮೊದಲಾಗಿ ಹಲವಾರು ಕಾರಣಗಳಿಂದಾಗಿ ಅಮೆರಿಕದ ಅರ್ಥವ್ಯವಸ್ಥೆ ಕುಸಿದು ಆತಂಕ ಪರಿಸ್ಥಿತಿಯಿತ್ತು. ಚಿನ್ನದ ಬೆಲೆ ವಿಪರೀತ ಏರುಪೇರಾಗಿತ್ತು. ಆದರೂ ಅಮೆರಿಕ ಇಂತಿಷ್ಟು ಇತರ ನಾಣ್ಯಗಳಿಗೆ ಇಷ್ಟು ಡಾಲರ್ ನೀಡುವ ಆಶ್ವಾಸನೆಯನ್ನು ಇಲ್ಲಿಯವರೆಗೆ ಉಳಿಸಿಕೊಂಡಿರುವುದರಿಂದ ಈಗಲೂ ಡಾಲರ್ ಸ್ಟ್ಯಾಂಡರ್ಡ್ ಚಾಲ್ತಿಯಲ್ಲಿದೆ. ಬ್ಯಾಲೆನ್ಸ್ ಆಫ್ ಪೇಮೆಂಟ್ಸ್ ಆರೋಗ್ಯವಾಗಿರಬೇಕಾದರೆ ಈ ಮಾನದಂಡದ ಸ್ಥಿರತೆಯನ್ನು ಕಾಯ್ದುಕೊಳ್ಳುವುದು ಅಗತ್ಯ. ಚಿನ್ನದ ಬೆಲೆ ಏರುಪೇರಾಗಬಹುದು. ಹೊಸ ಚಿನ್ನದ ನಿಕ್ಷೇಪ ವಿಪರೀತ ಸಿಕ್ಕಿಬಿಡಬಹುದು. ಆದ್ದರಿಂದ ಸರ್ಕಾರಗಳ ಸಾರ್ವಭೌಮತೆಯ ಗ್ಯಾರಂಟಿ ಅಂದರೆ ಆಶ್ವಾಸನೆ ಪಡೆದ ವ್ಯವಸ್ಥೆ ಅದಕ್ಕಿಂತ ಉತ್ತಮ. ಅದಿದ್ದರೆ ಜಾಗತಿಕ ವಾಣಿಜ್ಯ ವ್ಯವಹಾರ ಸುಗಮವಾಗುತ್ತದೆ. ಇವೆಲ್ಲ ಬಂಡವಾಳ ವ್ಯವಸ್ಥೆ ಜಾಗತಿಕ ವ್ಯಾಪಕತೆ ಪಡೆಯುತ್ತಿರುವುದರ ಸೂಚನೆ. ಜಾಗತಿಕವಾಗಿ ಸಮಾಜವಾದೀಯ ವ್ಯವಸ್ಥೆಯಾದಾಗಲೂ ಇಂಥದೆ ವ್ಯವಸ್ಥೆಯ ಅಗತ್ಯ ಮುಂದುವರಿಯುತ್ತದೆ ಎಂದೂ ಗಮನಿಸಬಹುದು. ರಾಷ್ಟ್ರ-ರಾಷ್ಟ್ರಗಳ ಪರಸ್ಪರ ಅವಲಂಬನೆ ಇಂದಿನ ವಾಸ್ತವ.

ಕೆ. ಎಸ್. ಪಾರ್ಥಸಾರಥಿ
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ
ಬೆಂಗಳೂರು - ೫೬೨ ೧೫೭

# ವೈಜ್ಞಾನಿಕ ತಂತ್ರಗಳಿಗೆ ನೊಬೆಲ್ ಗೌರವ

ಅಡ್ಯನಡ್ಕ ಕೃಷ್ಣಭಟ್

**ಜ**ನರ ಉಪಯೋಗಕ್ಕೆ ನಿಲುಕಬಲ್ಲ ಮಹತ್ವದ ತಂತ್ರಗಳನ್ನು ರೂಪಿಸಿದ ಆರು ಮಂದಿಗೆ ಈ ಬಾರಿಯ(೨೦೧೦) ನೊಬೆಲ್ ಪ್ರಶಸ್ತಿಗಳು ಸಂದಿವೆ. ಪ್ರನಾಳದಲ್ಲಿ ಫಲೀಕರಣ (ವೈದ್ಯಕೀಯ), ಗ್ರಾಫೈಟ್‌ನಿಂದ ಗ್ರಾಫೀನ್ ತಯಾರಿ (ಭೌತ) ಮತ್ತು ಪಲೇಡಿಯಂ ಲೋಹದ ಹಾಜರಿಯಲ್ಲಿ ಅಣು ತಯಾರಿ (ರಸಾಯನ) ಎಂದು ಈ ತಂತ್ರಗಳನ್ನು ಒಟ್ಟಾರೆ ಕರೆಯಬಹುದು.

**ಪ್ರನಾಳದಲ್ಲಿ ಫಲೀಕರಣ - ಬಂಜೆತನಕ್ಕೊಂದು ಪರಿಹಾರ :** ಹೆಂಗಸರಲ್ಲಿ ಅಂಡಾಶಯದಿಂದ ಗರ್ಭಾಶಯಕ್ಕಿರುವ ನಾಳವೇ ಮಾನವ ಅಂಡ ಸಹಜವಾಗಿ ಸಾಗುವ ದಾರಿ. ಇದನ್ನು ಆವಿಷ್ಕರಿಸಿದವನು ಪ್ರಾಯಃ ಇಟಲಿಯ ಗೇಬ್ರೀಲ್ ಫೆಲೋಪಿಯೊ (೧೫೨೩-೧೫೬೨). ಆದ್ದರಿಂದಲೋ ಏನೋ ಅದಕ್ಕೆ 'ಫೆಲೋಪಿಯನ್ ನಾಳ' ಎಂಬ ಹೆಸರು ಬಂದಿದೆ. ಯಾವುದೇ ಕಾರಣದಿಂದ ಫೆಲೋಪಿಯನ್ ನಾಳಕ್ಕೆ ಘಾಸಿಯಾದರೆ ಅಂಡವು ವೀರ್ಯಾಣುವಿನ ಸಂಪರ್ಕಕ್ಕೆ ಬರಲಾರದು. ಅಂದರೆ ಸಂತಾನೋತ್ಪತ್ತಿಗೆ ಅಗತ್ಯವಾದ 'ಅಂಡದ ಫಲೀಕರಣ' ನಡೆಯದು. ಇದರಿಂದ ಬಂಜೆತನ ಉಂಟಾಗುತ್ತದೆ.

ವೀರ್ಯದ ಪ್ರಮಾಣದೋಷ ಮತ್ತು ಗುಣದೋಷಗಳಿಂದ ಗಂಡಸರಲ್ಲೂ ಬಂಜೆತನ ಉಂಟಾಗಬಹುದು. ಹೀಗೆ ಹೆಂಗಸರಿಗಾಗಲೀ ಗಂಡಸರಿಗಾಗಲೀ ಬಂಜೆತನ ಬಂದಾಗ ಅವರು ತಾಯಿ-ತಂದೆಯರಾಗುವ ಸ್ಥಿತಿಯಿಂದ ವಂಚಿತರಾಗುತ್ತಾರೆ. ಜಾಗತಿಕವಾಗಿ ಶೇಕಡ ೧೦ರಷ್ಟು ದಂಪತಿಗಳಿಗೆ ಈ ತೊಂದರೆ ಇದೆ ಎಂದು ಒಂದು ಅಂದಾಜು. ಇದರಿಂದ ಪಾರುಮಾಡುವ ಚಿಕಿತ್ಸೆಯನ್ನು೧೯೫೦ರ ದಶಕಗಳಲ್ಲಿ ಇಂಗ್ಲೆಂಡಿನ ಡಾ॥ ರಾಬರ್ಟ್ ಎಡ್ವರ್ಡ್ಸ್ ಹುಡುಕತೊಡಗಿದರು. ಅವರ ಸಂಶೋಧನೆ ಹೆಚ್ಚಾಗಿ ನಡೆದದ್ದು ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ.

ಆಗ ಅವರಿಗೆ ಹೊಳೆದದ್ದು ಮಾನವದೇಹದ ಹೊರಗೆ ಅಂಡವನ್ನು ಬಲಿಸಿ ಫಲೀಕರಿಸುವ ಸಾಧ್ಯತೆ. ಹಿಂದೆ ಜೀವಿದೇಹದ ಹೊರಗೆ ಗಾಜಿನ ಧಾರಕಗಳಲ್ಲಿ ಜೀವಕೋಶಗಳ ಗುಂಪುಗಳನ್ನು– ಟಿಸ್ಯುಗಳನ್ನು– ಪ್ರಯೋಗಗಳಿಗಾಗಿ ಬೆಳೆಸುವ ರೂಢಿ ಇತ್ತು. ಇದನ್ನೇ 'ಇನ್‌ವಿಟ್ರೋ' ಎಂದು ಕರೆಯುವುದು. ಟೆಸ್ಟ್‌ಟ್ಯೂಬ್, ಬೀಕರ್, ಪೆಟ್ರಿ ಡಿಶ್ –ಇವೆಲ್ಲವೂ ವಿವಿಧ ಆಕಾರಗಳ ಗಾಜಿನ ಧಾರಕಗಳೇ. ಅದೇಕೋ, ಟೆಸ್ಟ್‌ಟ್ಯೂಬ್- 'ಪ್ರನಾಳ' – ಪದ ಹೆಚ್ಚು ಜನಪ್ರಿಯವಾಯಿತು. ಒಟ್ಟಿನ ಮೇಲೆ ಜೀವಿದೇಹದ ಹೊರಗೆ ನಡೆಸುವ ಜೈವಿಕಕ್ರಿಯೆಗಳನ್ನು 'ಪ್ರನಾಳ' ಎಂಬ ವಿಶೇಷಣದೊಂದಿಗೆ ಕರೆಯತೊಡಗಿದರು.

ಮಾನವ ಅಂಡಕಗಳು – ಬಲಿತ ಮೇಲೆ ಅಂಡಗಳಾಗುವಂಥವು–ಜೀವಿದೇಹದ ಹೊರಗೆ ಬಲಿತು ಫಲೀಕರಣಗೊಳ್ಳಬಹುದೆಂದು ಮೊದಲು ತೋರಿಸಿದವರೇ ಡಾ॥ ಎಡ್ವರ್ಡ್ಸ್. ಫಲೀಕರಣಗೊಂಡ ಅಂಡ, ದೇಹದ ಹೊರಗೆ ಭ್ರೂಣದ ಪ್ರಾರಂಭಿಕ ಹಂತಕ್ಕೆ ಬರಬಲ್ಲುದೆಂಬುದನ್ನು ಮೊದಲಿಗೆ ತೋರಿಸಿದವರೂ ಅವರೇ. ಅಂಡಕವನ್ನು ಪಡೆಯುವ, ಬಲಿಸಿ ಫಲೀಕರಿಸುವ ಹಾಗೂ ಗರ್ಭಾಶಯದಲ್ಲಿ ಬೆಳೆಯಬಿಡುವ ಹಂತಗಳಲ್ಲಿ ಎಡ್ವರ್ಡ್ಸ್ ಆವಿಷ್ಕಾರಗಳನ್ನು ನಡೆಸುತ್ತಲೇ ಹೋದರು. ೧೯೭೮ನೇ ಜುಲೈ ೨೫ರಂದು ಲೂಯಿಸೆ ಜಾಯ್ ಬ್ರೌನ್ ಎಂದು ಹೆಸರಾದ ಮೊದಲ ಪ್ರನಾಳ ಶಿಶು ಜನಿಸಿದಾಗ ಅವರ ಸಾಧನೆಗಳನ್ನು ಇಡೀ ಜಗತ್ತು ತಿಳಿಯುವಂತಾಯಿತು. ಪ್ರನಾಳ ಫಲೀಕರಣ ತಂತ್ರವನ್ನು ಬಳಸಿ ಅನಂತರ ಸುಮಾರು ೪೦ ಲಕ್ಷ ಶಿಶುಗಳು ಜನಿಸಿರಬಹುದು. ಡಾ॥ ಎಡ್ವರ್ಡ್ಸ್ ರೂಪಿಸಿದ ತಂತ್ರ, ಬಂಜೆತನದಿಂದ ಬೇಗುದಿಗೊಂಡಿದ್ದ ಲಕ್ಷಾಂತರ ಜನರ ಜೀವನಕ್ಕೆ ನೆಮ್ಮದಿ ತಂದಿದೆ ಎಂದು ಭಾವಿಸಿದ ನೊಬೆಲ್ ಸಮಿತಿ ವೈದ್ಯಕೀಯ ಕ್ಷೇತ್ರದ ಪ್ರಶಸ್ತಿಗೆ ಅವರನ್ನು ಆರಿಸಿತು.

ಡಾ॥ ಎಡ್ವರ್ಡ್ಸ್ ಸಾಧಿಸಿದ್ದನ್ನು ನೆನಸುವಾಗ ಈ ಕ್ಷೇತ್ರದಲ್ಲಿ ನಮ್ಮವರೇ ಆದ ಸುಭಾಸ್ ಮುಖರ್ಜಿಯವರ ಕೊಡುಗೆಯನ್ನು ಮರೆಯುವಂತಿಲ್ಲ. ಜಗತ್ತಿನ ಎರಡನೇ ಪ್ರನಾಳ ಶಿಶು – ಭಾರತದ ಮೊದಲನೇ ಪ್ರನಾಳ ಶಿಶು – ಕೋಲ್ಕೊತ್ತದಲ್ಲಿ ಜನಿಸಿದ್ದು ಅವರು ರೂಪಿಸಿದ ಪ್ರನಾಳ ಫಲೀಕರಣ ವಿಧಾನದಿಂದ. ಮೊದಲ ಪ್ರನಾಳ ಶಿಶು ಜನಿಸಿದ ೬೭ ದಿನಗಳ ಬಳಿಕ– ೧೯೭೮ನೇ ಅಕ್ಟೋಬರ್ ೩ರಂದು - ಇದನ್ನು ಮುಖರ್ಜಿಯವರ ತಂಡ ಪ್ರಕಟಿಸಿತು. ಆದರೆ ಈ ಸಾಧನೆಯನ್ನು ಅಧ್ಯಯಿಸಿ ವರದಿ ಮಾಡಲು ಬಂದ

ಹಿಂದೆ ಜೀವಿದೇಹದ ಹೊರಗೆ ಗಾಜಿನ ಧಾರಕಗಳಲ್ಲಿ ಜೀವಕೋಶಗಳ ಗುಂಪುಗಳನ್ನು – ಟಿಸ್ಯುಗಳನ್ನು – ಪ್ರಯೋಗಗಳಿಗಾಗಿ ಬೆಳೆಸುವ ರೂಢಿ ಇತ್ತು. ಇದನ್ನೇ 'ಇನ್ ವಿಟ್ರೋ' ಎಂದು ಕರೆಯುವುದು. ಟೆಸ್ಟ್‌ಟ್ಯೂಬ್, ಬೀಕರ್, ಪೆಟ್ರಿ ಡಿಶ್ – ಇವೆಲ್ಲವೂ ವಿವಿಧ ಆಕಾರಗಳ ಗಾಜಿನ ಧಾರಕಗಳೇ. ಅದೇಕೋ , ಟೆಸ್ಟ್‌ಟ್ಯೂಬ್ – 'ಪ್ರನಾಳ' – ಪದ ಹೆಚ್ಚು ಜನಪ್ರಿಯವಾಯಿತು. ಒಟ್ಟಿನ ಮೇಲೆ ಜೀವಿದೇಹದ ಹೊರಗೆ ನಡೆಸುವ ಜೈವಿಕಕ್ರಿಯೆಗಳನ್ನು 'ಪ್ರನಾಳ' ಎಂಬ ವಿಶೇಷಣದೊಂದಿಗೆ ಕರೆಯತೊಡಗಿದರು.



ಗ್ರಾಫೀನ್

ಸರಕಾರೀ ತಂಡ ಮುಖರ್ಜಿಯವರನ್ನು ದೂಷಿಸಿತು. ಈ ಸಂಶೋಧನೆಯ ಬಗ್ಗೆ ಅವರು ಏನನ್ನೂ ಬರೆಯದಂತೆ ಸರಕಾರ ತಡೆಯಿತು. ನಿರಾಶೆಯಿಂದ ಮುಖರ್ಜಿ ಆತ್ಮಹತ್ಯೆ ಮಾಡಿಕೊಂಡರು (೧೯೮೧). ೨೧ ವರ್ಷಗಳ ಅನಂತರವಷ್ಟೇ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಲಿ ಮುಖರ್ಜಿಯವರ ವಿಧಾನವನ್ನು ಒಪ್ಪಿಕೊಂಡಿತು ! ಮಧ್ಯಕಾಲೀನ ಯೂರೋಪಿನಲ್ಲಿ ಗೆಲಿಲಿಯೊವನ್ನು ದಣಿಸಿದ್ದ ಅಧಿಕಾರೀ ಮನೋಭಾವ ಸ್ವಾತಂತ್ರ್ಯೋತ್ತರ ಭಾರತದಲ್ಲೂ ತಲೆ ಎತ್ತಿತ್ತು ಎಂಬುದೊಂದು ದೊಡ್ಡ ದುರಂತ.

**ಹಲವು ಅನ್ವಯಗಳ ಹೊಸ ಪದಾರ್ಥ-ಗ್ರಾಫೀನ್ :** ವಜ್ರ ಮತ್ತು ಗ್ರಾಫೈಟ್ - ಕಾರ್ಬನ್ ಧಾತುವಿನ ಎರಡು ರೂಪಗಳು. ಫುಲರೀನ್- ಕಾರ್ಬನಿನ ಮತ್ತೊಂದು ರೂಪ. ಫುಲರೀನ್ ಆವಿಷ್ಕಾರಕ್ಕೆ ೧೯೯೬ರಲ್ಲಿ ರಸಾಯನ ವಿಭಾಗದ ನೊಬೆಲ್ ಪ್ರಶಸ್ತಿ ಸಂದಿತು. ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯದ (ಇಂಗ್ಲೆಂಡ್) ಆಂಡ್ರೆ ಕೆ. ಜೀಮ್ ಮತ್ತು ಕಾನ್ಸ್ಟಾಂಟಿನ್ ಎಸ್. ನೊವೊಸೆಲಾವ್ ಕಾರ್ಬನ್‌ನ ಮತ್ತೊಂದು ರೂಪವನ್ನು ಉತ್ಪಾದಿಸಿ, ಪ್ರತ್ಯೇಕಿಸಿ, ಗುರುತಿಸಿ , ಅದರ ಲಕ್ಷಣಗಳನ್ನು ೨೦೦೪ರಲ್ಲಿ ವಿವರಿಸಿದರು. ಅವರಿಗೆ ಈ ವರ್ಷದ (೨೦೧೦) ರಸಾಯನ ವಿಭಾಗದ ನೊಬೆಲ್ ಪ್ರಶಸ್ತಿ ಸಂದಿದೆ. ಅವರು ಪ್ರತ್ಯೇಕಿಸಿದ ಕಾರ್ಬನ್‌ನ ಹೊಸ ರೂಪ – ಕಾರ್ಬನಿನ ಏಕ ಪರಮಾಣು ಪದರವಾಗಿ ಕಾಣಿಸಿಕೊಳ್ಳುವ ಹಾಗೂ ಎರಡು ಆಯಾಮಗಳಲ್ಲಿ ಹರಡುವ ಸ್ಫಟಿಕ ಪದಾರ್ಥ. ಆದನ್ನು ಗ್ರಾಫೀನ್ ಎಂದು ಕರೆದಿದ್ದಾರೆ.

ಸಾಮಾನ್ಯವಾಗಿ ನಾವು ಬಳಸುವ ಪೆನ್ಸಿಲ್‌ನಿಂದ ಬರೆಯುವಾಗಲೆಲ್ಲ ಕಾಗದದ ಮೇಲೆ ಗ್ರಾಫೈಟನ್ನು ಒರಸುತ್ತಿರುತ್ತೇವೆ. ಏಕೆಂದರೆ ಪೆನ್ಸಿಲ್‌ನಲ್ಲಿರುವ ಕಪ್ಪು ಕಡ್ಡಿ ಗ್ರಾಫೈಟ್‌ನದ್ದು. ಹೀಗೆ ಒರಸುವಾಗ ಗ್ರಾಫೈಟ್ ಪದರ - ಅದು ಕೆಲವು ಕಾರ್ಬನ್ ಪರಮಾಣುಗಳ ದಪ್ಪದ್ದಾಗಿರಬಹುದು – ಕಾಗದದ ಮೇಲೆ ಮೂಡುತ್ತದೆ. ಇಂಥದ್ದೇ ಪದರ ಒಂದು ಪರಮಾಣು ದಪ್ಪದ್ದಾದರೆ ಅದು ಗ್ರಾಫೀನ್. ಜೇನುಗೂಡಿನ ಕೋಶಗಳಂತೆ ಷಟ್ಕೋನಾಕೃತಿಯ ಜಾಲಕಗಳು ಗ್ರಾಫೀನ್ ಪದರದಲ್ಲಿವೆ. (ನೋಡಿ : ಚಿತ್ರ)

ಗ್ರಾಫೀನ್‌ನಂಥ ರಚನೆಗಳಿರುವುದು ಐವತ್ತು ವರ್ಷಗಳ ಹಿಂದೆಯೇ ತಿಳಿದಿತ್ತು. ಆದರೆ ಅಂಥ ಏಕಪರಮಾಣು ಪದರವನ್ನು ಪ್ರತ್ಯೇಕಿಸಿ ನೋಡಲು ಆಗಿರಲಿಲ್ಲ. ಸ್ಕಾಚ್ ಟೇಪಿನ (ಒಂದು ವಿಧದ ಅಂಟು ಟೇಪ್) ಸಹಾಯದಿಂದ ಗ್ರಾಫೈಟ್ ಸ್ಫಟಿಕದ ತೆಳು ಪದರವನ್ನು ಎಬ್ಬಿಸಿ ಸಿಲಿಕಾನ್ ಮೈಯಲ್ಲಿ ಸ್ಥಾಪಿಸಲು ಜೀಮ್ ಮತ್ತು ನೊವೊಸೊಲೊವ್ ಶಕ್ತರಾದರು. ಇದು ಜರುಗಿದ್ದು ೨೦೦೪ರಲ್ಲಿ. ಹೀಗೆ ಗ್ರಾಫೀನ್ ತಯಾರಿಯ ತಂತ್ರ ಕರಗತವಾದ ಮೇಲೆ ಅದರಲ್ಲಿ ವಿದ್ಯುದ್ವಾರಗಳನ್ನು ಕೂರಿಸಿದರು. ಇದರಿಂದ ಗ್ರಾಫೀನನ್ನು ಉಪಯೋಗಿಸಿ ಹಲವು ಹೊಸ ಪ್ರಯೋಗಗಳನ್ನು ನಡೆಸಲು ಸಾಧ್ಯವಾಯಿತು. ಇಂದು ಗ್ರಾಫೀನ್ ಹಲ್ಲೆಗಳನ್ನು ತಯಾರಿಸುವ ಬೇರೆ ವಿಧಾನಗಳೂ ರೂಢಿಗೆ ಬಂದಿವೆ.

ಗ್ರಾಫೀನ್ ಸ್ಫಟಿಕ ರಚನೆಯಲ್ಲಿ ಕಾರ್ಬನೇತರ ಪರಮಾಣುಗಳನ್ನು ಸೇರಿಸಿ ವಿದ್ಯುತ್‌ವಾಹಕತೆಯಂಥ ಕೆಲವು ಗುಣಗಳನ್ನು ಬದಲಾಯಿಸಬಹುದು. ಅದು ತನ್ನ ಮೇಲೆ ಬಿದ್ದ ಬೆಳಕಿನ ಶೇಕಡ ೨-೩ ಭಾಗವನ್ನಷ್ಟೇ ಹೀರುತ್ತದೆ. ಅಂದರೆ ಬೆಳಕಿಗೆ ಪಾರಕವಾಗಿದೆ. ಬಹಳ ತೆಳುವಾಗಿದ್ದರೂ ಯಾಂತ್ರಿಕವಾಗಿ ದೃಢ ಮತ್ತು ನಮ್ಯ. ಈಗ ಗ್ರಾಫೀನಿನ ದೊಡ್ಡ ಹಲ್ಲೆಗಳನ್ನು ತಯಾರಿಸಲು ಸಾಧ್ಯವಿದೆ.




ಗ್ರಾಫೀನಿನ ವಿಶಿಷ್ಟ ಗುಣಗಳಿಂದ ಹಲವು ಅನ್ವಯಗಳಿಗೆ ಅದು ಒದಗುತ್ತದೆ. ಟಚ್ ಸ್ಕ್ರೀನ್, ಅನಿಲ ಸಂವೇದಕ, ಹೊಸ ಕಂಪೊಸಿಟ್ ಪದಾರ್ಥ, ಟ್ರಾನ್ಸಿಸ್ಟರ್, ಸೌರ ಕೋಶಗಳ ತಯಾರಿಯಲ್ಲಿ ಗ್ರಾಫೀನ್ ಮುಂದಿನ ದಿನಗಳಲ್ಲಿ ಮುಖ್ಯ ಪಾತ್ರ ವಹಿಸಲಿದೆ.

**ಪಲೇಡಿಯಮ್ ಹಾಜರಿಯಲ್ಲಿ ಹೊಸ ಅಣುಗಳ ತಯಾರಿ :** ಸಾಮಾನ್ಯವಾಗಿ ಪ್ಲಾಟಿನಮ್ ಲೋಹದೊಂದಿಗೆ ಸಿಗುವ ಲೋಹ - ಪಲೇಡಿಯಮ್. ಪರಮಾಣುಗಳಲ್ಲಿರುವ ಇಲೆಕ್ಟ್ರಾನಿಕ್ ಹಂಚಿಕೆಯ ಆಧಾರದಿಂದ ಇದನ್ನು 'ಸಂಕ್ರಮಣ ಲೋಹ' ಎಂದು ಕರೆಯುತ್ತಾರೆ. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಸಾವಯವ ಅಣುಗಳ – ಅಂದರೆ ಕಾರ್ಬನ್ ಯುಕ್ತ ಅಣುಗಳ – ಸೃಷ್ಟಿಗಾಗಿ ಹಲವು ಸಂಕ್ರಮಣ ಲೋಹಗಳ ಬಳಕೆಯಾಯಿತು. ವಿವಿಧ ಸಾವಯವ ಸಂಯುಕ್ತಗಳು ಸಕ್ರಿಯವಾಗುವಂತೆ ಮಾಡಿ ಹೊಸ ರಾಸಾಯನಿಕ ಬಂಧಗಳನ್ನು ರೂಪಿಸುವ ಅನನ್ಯ ಗುಣ ಈ ಸಂಕ್ರಮಣ ಲೋಹಗಳಿಗಿವೆ. ಇಂಥ ಸಾವಯವ ಪರಿವರ್ತನೆಗಳಲ್ಲಿ ಪ್ರಾರಂಭದಿಂದಲೇ ಉಪಯೋಗಕ್ಕೆ ಬಂದ ಒಂದು ಲೋಹ - ಪಲೇಡಿಯಮ್. ಸಾವಯವ ರಸಾಯನದಲ್ಲಿ ಸಂಶೋಧನೆಯನ್ನು ಪ್ರೇರಿಸಿದ ಒಂದು ಘಟನೆ- ಪಲೇಡಿಯಮ್ ಹಾಜರಿಯಲ್ಲಿ ನಡೆದ ಒಂದು ರಾಸಾಯನಿಕ ಕ್ರಿಯೆ. ಅದರಲ್ಲಿ ಎಥಿಲೀನ್ ಸಂಯುಕ್ತವು ವಾಯುವಿನಿಂದ ಆಕ್ಸಿಜನ್ ಪಡೆದು ಅಸಿಟಾಲ್‌ಡಿಹೈಡ್ ಸಂಯುಕ್ತವಾಯಿತು. ಇದನ್ನೇ ಎಥಿಲೀನಿನ ಆಕ್ಸಿಡೀಕರಣ ಎನ್ನುವುದು.

ಕ್ರಿಯಾವರ್ಧಕವಾಗಿ ಪಲೇಡಿಯಮ್ ಪಾತ್ರ ವಹಿಸುವ ರಾಸಾಯನಿಕ ಕ್ರಿಯೆ ಹೇಗೆ ನಡೆಯುತ್ತದೆ ? ಸರಳವಾಗಿ ಅದನ್ನು ಹೀಗೆ ಹೇಳಬಹುದು : ಪಲೇಡಿಯಮ್ ಮತ್ತು ಕಾರ್ಬನ್ ಬಂಧಗಳ ಮೂಲಕ ಎರಡು ಅಣುಗಳು ಪಲೇಡಿಯಮ್ ಮೇಲೆ ನಿಲ್ಲುತ್ತವೆ. ಈ ಅವಸ್ಥೆಯಲ್ಲಿ ಪಲೇಡಿಯಮ್ ಬಂಧಕ್ಕೆ ಒಳಗಾದ ಕಾರ್ಬನ್ ಪರಮಾಣುಗಳು ನಿಕಟವಾಗುತ್ತವೆ. ಮುಂದೆ ಪರಮಾಣುಗಳು ಪರಸ್ಪರ ಜೋಡಿಕೊಳ್ಳುತ್ತವೆ. ಇದರಿಂದ ಕಾರ್ಬನ್-ಕಾರ್ಬನ್ ಏಕಬಂಧ ರೂಪುಗೊಳ್ಳುತ್ತದೆ. ಸಾವಯವ ರಸಾಯನದಲ್ಲಿ ಇಂಥ ಬಂಧ ಬಹಳ ಮಹತ್ವದ್ದು – ಭೂಮಿಯಲ್ಲಿನ ಜೀವಜಗತ್ತಿಗೆ ಮರ್ಮಪ್ರಾಯದ್ದು.

ಕಾರ್ಬನ್-ಕಾರ್ಬನ್ ಏಕಬಂಧಗಳನ್ನು ರೂಪಿಸುವುದಕ್ಕೆ ಅಗತ್ಯವಾದ ಅಭೂತ ಕ್ರಿಯೆಯನ್ನು ವಿಶ್ವವಿದ್ಯಾಲಯದಲ್ಲಿ (ಅಮೆರಿಕ) ಪ್ರಾಧ್ಯಾಪಕರಾದ ರಿಚರ್ಡ್ ಎಫ್. ಹೆಕ್ ಆವಿಷ್ಕರಿಸಿದರು(೧೯೬೮). ೧೯೭೦ರ ವರ್ಷಗಳಲ್ಲಿ ಆರ್ಗನೋ ಸತು ಹಾಗೂ ಆರ್ಗನೋ ಅಲ್ಯೂಮಿನಿಯಮ್ ಸಂಯುಕ್ತಗಳನ್ನು ಪರ್ಡ್ಯೂ ವಿಶ್ವವಿದ್ಯಾಲಯದ (ಅಮೆರಿಕ) ಪ್ರಾಧ್ಯಾಪಕ ಎಯಿಯಿಚಿ ನೆಗಿಷಿ ಅಣುಜೋಡಣೆಗಾಗಿ ಉಪಯೋಗಿಸಿದರು. ೧೯೭೯ರಲ್ಲಿ ರಾಸಾಯನಿಕ ಜೋಡಣೆಗೆ ಆರ್ಗನೋಬೋರಾನ್ ಸಂಯುಕ್ತಗಳ ಉಪಯೋಗವನ್ನು ಹೊಕಾಯಿಡೊ ವಿಶ್ವವಿದ್ಯಾಲಯದ (ಜಪಾನ್) ಪ್ರಾಧ್ಯಾಪಕ ಅಕಿರ ಸುಝುಕಿಯವರ ತಂಡ ವರದಿ ಮಾಡಿತು.

ಹೆಕ್, ನೆಗಿಷಿ ಮತ್ತು ಸುಝುಕಿ – ಮೂವರೂ ಈ ಬಾರಿಯ ರಸಾಯನ ವಿಭಾಗದ ನೊಬೆಲ್ ಗೌರವಕ್ಕೆ ಪಾತ್ರರಾಗಿದ್ದಾರೆ. ಇವರ ಸಂಶೋಧನೆಯಿಂದ ಸಂಶ್ಲೇಷಿತ ರಸಾಯನ ಕ್ಷೇತ್ರದ ಮೇಲೆ ಭಾರಿ ಪರಿಣಾಮವಾಗಿದೆ. ಜೈವಿಕವಾಗಿ ಕ್ರಿಯಾಶಾಲಿಯಾಗಿರುವ ಹಾಗೂ ಸಂಕೀರ್ಣ ಸಂರಚನೆಗಳಿರುವ ಸಂಯುಕ್ತಗಳ ಸಂಶ್ಲೇಷಣೆಗೆ ಅವರು ಅವಿಷ್ಕರಿಸಿದ ಪ್ರತಿಕ್ರಿಯೆಗಳು ವ್ಯಾಪಕವಾಗಿ ಬಳಕೆಯಾಗುತ್ತಿವೆ. ಟಾಕ್ಸಾಲ್, ಸ್ಟೀರಾಯ್ಡ್, ಸ್ಟ್ರೈಕ್ನೀನ್‌ನಂಥ ನೂರಕ್ಕೂ ಹೆಚ್ಚು ಪ್ರಾಕೃತಿಕ ಉತ್ಪನ್ನಗಳನ್ನು ಸಂಶ್ಲೇಷಿಸಲು ಹೆಕ್ ಪ್ರತಿಕ್ರಿಯೆಗಳು ಬೇಕಾಗುತ್ತವೆ. ವಿಶಿಷ್ಟ ಗುಂಪಿನ ಕಪ್ಪೆಗಳ ಚರ್ಮದಲ್ಲಿರುವ ಪ್ಯುಮಿಲಿಯೊಟಾಕ್ಸಿನ್ 'ಎ' ಎಂಬ ಆಲ್ಕಲೈಡ್ ಹಾಗೂ ಸಾಗರಜೀವಿಗಳಲ್ಲಿ ಸಿಗುವ ಹೆನಾಕ್ಸಜೋಲ್ ಎಂಬ ಉತ್ಪನ್ನಗಳ ಸಂಶ್ಲೇಷಣೆ ನೆಗಿಷಿ ಪ್ರತಿಕ್ರಿಯೆಯನ್ನು ಅವಲಂಬಿಸಿದೆ. ಡೈನೆಮಿಸಿನ್ ಎಂಬ ಗಂತಿವಿರೋಧೀ ಉತ್ಪನ್ನ ಸುಝುಕಿ ಪ್ರತಿಕ್ರಿಯೆಯಿಂದ ತಯಾರಾಗುತ್ತದೆ. ಇವು ಕೇವಲ ಕೆಲವು ದೃಷ್ಟಾಂತಗಳಷ್ಟೆ.

ವಿಜ್ಞಾನ ವಿಭಾಗಗಳಲ್ಲಿ ನೊಬೆಲ್ ಗೌರವಕ್ಕೆ ಒಳಗಾದ ವ್ಯಕ್ತಿಗಳು ಅದನ್ನು ಪಡೆದುದು ಮಾನವಕ್ಷೇಮವನ್ನು ಸಾಧಿಸಬಲ್ಲ ತಂತ್ರಗಳನ್ನು ಸೃಷ್ಟಿಸಿದ್ದಕ್ಕಾಗಿ ಎಂಬುದು ಇದರಿಂದ ಸ್ಪಷ್ಟ.

**ಅಡ್ಯನಡ್ಕ ಕೃಷ್ಣಭಟ್**
ನಂ. ೫೬.೧೧, 'ಸಾರಸ', ವಿಜಯನಗರ -೨
ಮೈಸೂರು - ೫೭೦ ೦೧೭

# ಅಸ್ಮಿತೆಗಾಗಿ



ದಾರ್ಶನಿಕರು ಪ್ರಮುಖವಾಗಿ ಭಾರತೀಯ ದರ್ಶನಗಳನ್ನು ಎರಡು ವರ್ಗಗಳನ್ನಾಗಿ ವಿಂಗಡಿಸುತ್ತಾರೆ – ಆಸ್ತಿಕ ಮತ್ತು ನಾಸ್ತಿಕ – ಎಂದು, ಬೌದ್ಧ, ಜೈನ ಮತ್ತು ಲೋಕಾಯತ ಅಥವಾ ಚಾರ್ವಾಕ ದರ್ಶನಗಳನ್ನು ನಾಸ್ತಿಕ ದರ್ಶನಗಳೆಂದು ಹೆಸರಿಸುತ್ತಾರೆ. ಆಸ್ತಿಕ ಎಂದರೆ ದೇವರ ಅಸ್ತಿತ್ವವನ್ನು ನಂಬುವವರು. ಅಂದರೆ ಮುಖ್ಯವಾಗಿ ವೇದಪ್ರಾಮಾಣ್ಯವನ್ನು ಒಪ್ಪುವವರು ಮತ್ತು ನಾಸ್ತಿಕರೆಂದರೆ ದೇವರ ಅಸ್ತಿತ್ವವನ್ನು ನಂಬದವರು. ಅಂದರೆ ವೇದಪ್ರಾಮಾಣ್ಯವನ್ನು ಒಪ್ಪದವರು ಎಂದು ವ್ಯಾಖ್ಯಾನಿಸಲಾಗುತ್ತದೆ. ಇವೇ ಅರ್ಥಗಳು ಈಗ ವಿದ್ವಾಂಸರ ಮನದಾಳದಲ್ಲಿ ಬೇರೂರಿ ನಿಂತಿವೆ. ಆದರೆ ದಾರ್ಶನಿಕ ಹಿನ್ನೆಲೆಯಲ್ಲಿ ನೋಡಿದಾಗ 'ಆಸ್ತಿಕ' ಮತ್ತು 'ನಾಸ್ತಿಕ'ದ ಸಂಕಲ್ಪನೆಗಳು ತೀರ ಭಿನ್ನವಾಗಿವೆ ಎಂಬುದು ತಿಳಿದುಬರುತ್ತದೆ. ಆಸ್ತಿಕ ಎಂದರೆ 'ರೂಢಿನಿಷ್ಠ'ನಾಗಿರುವುದು ಅಥವಾ ಪರಂಪರೆಗೆ 'ಬದ್ಧ'ನಾಗಿರುವುದು ಮತ್ತು ನಾಸ್ತಿಕನೆಂದರೆ 'ರೂಢಿ ವಿರೋಧಿ'ಯಾಗಿರುವುದು ಅಥವಾ ಪರಂಪರೆಗೆ 'ಬದ್ಧನಾಗದೇ' ಇರುವುದು ಎನ್ನಬಹುದು.

ಭಾಲಚಂದ್ರ ಜಯಶೆಟ್ಟಿ

**ಭಾ**ರತದ ವಿಚಾರವಾದಿಗಳ ಪರಂಪರೆಯಲ್ಲಿ ಒಂದೇ ಎತ್ತರದಲ್ಲಿ ನಿಲ್ಲುವ ವ್ಯಕ್ತಿಗಳೆಂದರೆ ತೀವ್ರ ಮಾನವತಾವಾದಿಗಳಾಗಿದ್ದ ಬುದ್ಧ, ಬಸವ ಮತ್ತು ಅಂಬೇಡ್ಕರ. ಈ ಮೂವರೂ ಸ್ವತಂತ್ರ ವಿಚಾರಪರರು, ಆಲೋಚನಾಪರರು ಆಗಿದ್ದರು. ಬುದ್ಧದೇವನು, ''ನೀನು ಕೇಳಿದುದನ್ನು, ಸಂಪ್ರದಾಯವನ್ನು, ಯಾರೋ ಒಬ್ಬ ಋಷಿಮುನಿಯು ಮಂಡಿಸಿರುವ ಸಿದ್ಧಾಂತವನ್ನು, ಹಿರಿಯರು ಹೇಳುವ ಪ್ರಮಾಣಗಳನ್ನು ನಂಬಬೇಡ. ಸ್ವತಃ ಪರಿಶೀಲಿಸಿ, ವಿಶ್ಲೇಷಿಸಿ, ಅದು ವಿವೇಕಯುತವಾಗಿದ್ದು, ಸರ್ವರಿಗೂ ಹಿತವನ್ನೂ ಮತ್ತು ಲಾಭವನ್ನೂ ಉಂಟುಮಾಡುವಂತಿದ್ದರೆ ಒಪ್ಪು ಮತ್ತು ಅದಕ್ಕಾಗಿ ನೀನು ಜೀವಿಸು'', ಎಂದು ಹೇಳಿದನು. ಇಲ್ಲಿ ಕೊನೆಯ ಮಾತುಗಳು ಸಾರ್ವತ್ರಿಕವಾಗಿ ಒಪ್ಪತಕ್ಕಂಥ ಮಾತುಗಳು. ಅಂತೆಯೇ ಅವು ವೈಜ್ಞಾನಿಕ ತಳಹದಿಯ ಮೇಲೆ ಕಂಡುಕೊಂಡ ವಿಚಾರಗಳಾಗಿವೆ. ಮೇಲಿನ ಮಾತುಗಳಲ್ಲಿ ಎಂಥ ತ್ರಿಕಾಲ ಸತ್ಯ ಅಡಗಿದೆ! ಇಂದಿನ ವಿಜ್ಞಾನವೂ ಕೂಡ ಅದನ್ನೇ ಸಮರ್ಥಿಸುತ್ತದೆ.

ಬಸವಣ್ಣನವರ ವಿಚಾರವಾಗಲೀ ಅಂಬೇಡ್ಕರರ ವಿಚಾರವಾಗಲೀ ಇದಕ್ಕೆ ಭಿನ್ನವಾಗಿರಲಿಲ್ಲ. ಬಸವಣ್ಣನವರು ವೇದ, ಶಾಸ್ತ್ರ, ಸ್ಮೃತಿ, ಪುರಾಣಗಳನ್ನು ಧಿಕ್ಕರಿಸಿದರು. ಅಂಬೇಡ್ಕರರು ಅವುಗಳನ್ನು ಎದುರಿಗಿಟ್ಟುಕೊಂಡೇ ಅವುಗಳ ಎಡಬಿಡಂಗಿತನವನ್ನು ವಿಶ್ಲೇಷಿಸಿ ಅವುಗಳನ್ನು ಸುಟ್ಟುಹಾಕುವ ಮಾತುಗಳನ್ನಾಡಿದರು. ಈ ಮೂವರ ವಿಚಾರಗಳು, ಆಲೋಚನೆಗಳು ತರ್ಕಸಮ್ಮತವೂ, ನೈತಿಕತೆಯಿಂದ ಕೂಡಿದವುಗಳೂ ಆಗಿದ್ದವು. ಈ ವಿಚಾರಗಳು ಯಾವುದೇ ಅಲೌಕಿಕವಾದ ದೇವರಲ್ಲಿ ಇಟ್ಟುಕೊಂಡಿದ್ದ ನಂಬಿಕೆಯಿಂದ ಸ್ಫುರಿಸಿರಲಿಲ್ಲ. ಬದುಕಿನಲ್ಲಿ ಕಂಡ, ಅನುಭವಿಸಿದ, ಮನಸ್ಸಿನಾಳದಲ್ಲಿ ಚುಚ್ಚಿ ನೋವನ್ನುಂಟುಮಾಡಿದ ವೇದನೆಯಿಂದ ಹುಟ್ಟಿಕೊಂಡಿದ್ದವು. ಆದ್ದರಿಂದಲೇ ಈ ಮೂವರೂ ಪರಂಪರಾಗತವಾದ ಯಾವ ವಿಚಾರಧಾರೆಗೂ ಜೋತು ಬೀಳದೆ ತಮ್ಮದೆ ಆದ ಸ್ವತಂತ್ರ ವಿಚಕ್ಷಣೆಯ ಸಂವೇದನೆಗೆ ಮಿಡಿದರು. ಇವರ ಗುರಿ ಸ್ವರ್ಗ ಪ್ರಾಪ್ತಿಯಾಗಲೀ, ದೇವರೊಂದಿಗೆ ಐಕ್ಯವಾಗುವುದಾಗಲೀ ಅಲ್ಲ. ಇಹದಲ್ಲಿ ಆತ್ಮಸಂಯಮದಿಂದ ಬೌದ್ಧಿಕವಾದ ಮತ್ತು ನೈತಿಕವಾದ ಸಮರಸ ಜೀವನ ನಡೆಸುವುದು, ದುಃಖ, ಸಂಕಟಗಳಿಂದ ರಕ್ಷಣೆಯನ್ನು ಕಂಡುಕೊಳ್ಳುವುದು ಇವರ ಗುರಿಯಾಗಿತ್ತು.

''ಸುಜ್ಞಾನದ ವಿವೇಚನೆಯಲ್ಲದೆ ಕುರುಡು ನಂಬಿಕೆಯು ಧರ್ಮದ ತಳಹದಿಯಲ್ಲ'' ಎಂದು ಬಸವಣ್ಣನವರು ಹೇಳಿದರು. ಮಿತಿಮೀರಿದ ಭಕ್ತಿ, ನಂಬಿಕೆ, ಜಾತಿಭೇದ, ಮೂರ್ತಿಪೂಜೆ, ಯಜ್ಞಯಾಗಾದಿಗಳೂ, ಅಲೌಕಿಕ ದೇವತೆಗಳ ಬಗ್ಗೆ ನಿಷ್ಠೆ ಮತ್ತು ಕ್ರೂರ ನಡತೆ, ಜಾತಿ ಮತ್ತು ಲಿಂಗ ತಾರತಮ್ಯದ ಭಾವ, ಧರ್ಮಶಾಸ್ತ್ರಗಳ ಬಗ್ಗೆ ಅಂಧಶ್ರದ್ಧೆ – ಇವು ಸಾಮಾಜಿಕ ಮತ್ತು ಧಾರ್ಮಿಕ ಅವನತಿಗೆ ಕಾರಣವೆಂದು ಬಸವಣ್ಣನವರು ಸಾರಿದರು. ಅಂಬೇಡ್ಕರರ ಕಾಣ್ಕೆಯು ಇದಕ್ಕಿಂತ ಭಿನ್ನವಾಗಿರಲಿಲ್ಲ. ಬುದ್ಧದೇವನೂ ಕೂಡ ಹೋರಾಡಿದ್ದು ಈ ದೋಷಗಳ ನಿವಾರಣೆಗಾಗಿಯೇ.

ಬುದ್ಧದೇವ ಬಸವಣ್ಣನಂತೆ ಏಕೇಶ್ವರವಾದ ಮತ್ತು ಒಬ್ಬ ಸರ್ವೋಚ್ಚ ದೇವರ ಕಲ್ಪನೆಯನ್ನು ಹೊಂದಿರಲಿಲ್ಲ ಎಂಬ ಮಾತು ನಿಜ. ಬಸವಣ್ಣನವರು ಯೋಗ್ಯವಾದ ಮತ್ತು ಪವಿತ್ರವಾದ ಒಂದು ಇಂದ್ರಿಯಾತೀತ ಶಕ್ತಿಯ ಬಗ್ಗೆ ನಂಬಿಕೆಯನ್ನು ಇಟ್ಟುಕೊಂಡಿದ್ದರು ಎಂಬುದನ್ನು ನಾವು ಕಾಣಬಹುದಾಗಿದೆ. ಬುದ್ಧದೇವನಂತೆ ಬಸವಣ್ಣನವರಾದರೂ ರೂಢಿಗ್ರಸ್ತವಾದ ನಂಬಿಕೆಗಳನ್ನು ಕೈಬಿಟ್ಟು ಹೊಸ ದರ್ಶನವನ್ನು ಸಮಾಜಕ್ಕೆ ನೀಡಿದರು. ಬುದ್ಧದೇವನು ಬೋಧಿಸಿದ ಜ್ಞಾನಪ್ರಾಪ್ತಿಯನ್ನೇ ಬಸವಣ್ಣನವರು 'ಅರಿವೇ ಗುರು' ಎಂದು ಪ್ರತಿಪಾದಿಸಿದರು. ಬುದ್ಧದೇವನು ಬೋಧಿಸಿದ್ದನ್ನು ಅಶೋಕನು ಅನುಷ್ಠಾನಕ್ಕೆ ತಂದು ಪ್ರಚುರಪಡಿಸಿದಂತೆ ಬಸವಣ್ಣನವರ ಬೋಧನೆಯನ್ನು ಮುಂದುವರಿಸಿಕೊಂಡು ಹೋಗುವ ಕ್ರಿಯಾಶಕ್ತಿ ಬಸವ ಧರ್ಮಕ್ಕೆ ಲಭಿಸಲಿಲ್ಲ. ಇನ್ನೊಂದು ವಿಚಾರವೆಂದರೆ ತಮ್ಮ ಕಾಲಮಾನಕ್ಕೆ ತಕ್ಕಂತೆ ದೇವರ ಕಲ್ಪನೆಯ ಕುರಿತು ಬಸವಣ್ಣನವರು ಬುದ್ಧದೇವನಂತೆ ಮೌನತಾಳುವುದು ಸಾಧ್ಯವಿರಲಿಲ್ಲ. ಅವರ ಉದ್ದೇಶಿತ ಜನಸಮುದಾಯವು ಬಹುಸಂಖ್ಯಾತವಾಗಿದ್ದರೂ ಕೂಡ ಅದು ನಗಣ್ಯವಾಗಿದ್ದ ಅಲ್ಪಸಂಖ್ಯಾತ ಪುರೋಹಿತಶಾಹಿಯ ಐಂದ್ರಜಾಲಿಕ ಮಾಯೆಯ ಸೆಳೆತದಿಂದ ಹೊರಬಂದಿರಲಿಲ್ಲ. ಪುರೋಹಿತಶಾಹಿಯು ಆ ಕೆಳವರ್ಗದ ಜನರ ನರನಾಡಿಗಳಲ್ಲಿ ದೈವಭಯದ ಅಳುಕನ್ನು ಎಷ್ಟರಮಟ್ಟಿಗೆ ತುಂಬಿತ್ತೆಂದರೆ ಅವರಿಗೆ ತಾವೂ ಮನುಷ್ಯ ಪ್ರಾಣಿಗಳು ಎಂಬ ಪರಿಜ್ಞಾನವೇ ಇರಲಿಲ್ಲ. ಅಂಥ ಜನರನ್ನು ಸಂಘಟಿಸಬೇಕಾದರೆ ಅವರ ನಂಬಿಕೆಯನ್ನು ಪೋಷಿಸಿಕೊಂಡೇ ಅವರಲ್ಲಿ ಹೊಸ ವಿವೇಚನಾತ್ಮಕ ವಿಚಾರವನ್ನು ತುಂಬಬೇಕಾಗಿತ್ತು. ಅದಕ್ಕಾಗಿಯೇ ಬಸವಣ್ಣನವರು ರೂಢಿಗತವಾದ ದೈವಗಳನ್ನು ಧಿಕ್ಕರಿಸಿ ಇಷ್ಟಲಿಂಗದ ಕಲ್ಪನೆಯನ್ನು ಆಚರಣೆಗೆ ತಂದರು. ಇಷ್ಟಲಿಂಗೋಪಾಸನೆಯು ಸ್ಥಾವರ ಪೂಜೆಯಲ್ಲ, ಮೂರ್ತಿ ಪೂಜೆಯಲ್ಲ, ಪೌರಾಣಿಕ ದೇವತೆಗಳ ಪೂಜೆಯಲ್ಲ ಎಂಬ ವಿಚಾರ ಕುರಿತು ಚರ್ಚಿಸುವುದು ಇಲ್ಲಿ ಅಪ್ರಸ್ತುತ. ಆದರೆ ಇಲ್ಲಿ ಒಂದು ಮಾತನ್ನು ಗಮನಿಸಬೇಕು. ಬುದ್ಧದೇವನು ಈ ಸೃಷ್ಟಿಯನ್ನು ಚಲನಶೀಲವೆಂದು ಸಾಧಿಸಿ ತೋರಿಸಿದನು. ಚಲನಶೀಲವಾಗಿರುವುದು ಸೃಷ್ಟಿಯ ಸ್ವಭಾವ. ಅದನ್ನೇ ಬಸವಣ್ಣನವರು ಜಂಗಮ ಎಂದು ಕರೆದರು. ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ ಎಂಬ ಬುದ್ಧದೇವನ ಆಶಯದ ಮಾತುಗಳನ್ನೇ ಬಸವಣ್ಣನವರು ಹೇಳಿದರು.

ಬುದ್ಧ, ಬಸವ ಮತ್ತು ಅಂಬೇಡ್ಕರ ಇವರಲ್ಲಿ ವೈಚಾರಿಕ ಜ್ಞಾತಿಸಂಬಂಧವಿದೆ ಎಂಬ ಅರ್ಥದ ಒಂದು ಮಾತನ್ನು ನಾವು ಮೇಲೆ ಉಲ್ಲೇಖಿಸಿದ್ದೇವೆ. ಬುದ್ಧದೇವನನ್ನು ಮತ್ತು ಬಸವಣ್ಣನವರನ್ನು ಸಾಮಾನ್ಯ ಬಳಕೆಯಲ್ಲಿ ಸಂತರೆಂದು ಹೇಳುವ ವಾಡಿಕೆ ಇದೆ. ಹಾಗೆ ಭಾವಿಸುವುದಾದರೆ ಬುದ್ಧದೇವನನ್ನು ಸಂತನೆಂದು ಗೌರವಿಸುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಬಸವಣ್ಣನವರು ಒಬ್ಬ ಉನ್ನತ ದರ್ಜೆಯ ಸಮಾಜ ವಿಜ್ಞಾನಿಯೂ, ರಾಜನೀತಿಜ್ಞರೂ ಆಗಿದ್ದರು ಎಂಬ

ಮಾತನ್ನು ನಾವು ಇಲ್ಲಿ ಗಮನಿಸಬೇಕು. ಅವರಿಗೆ ಬದುಕಿನ ಪ್ರಾಪಂಚಿಕ ಮುಖವನ್ನು ಕಂಡೂ ಕಾಣದಂತಿರಲು ಸಾಧ್ಯವಿರಲಿಲ್ಲ. ಆದ್ದರಿಂದ ಅವರು ಲೌಕಿಕ ಮತ್ತು ಆಧ್ಯಾತ್ಮವನ್ನು ತಿರಸ್ಕರಿಸಲಿಲ್ಲವಾದರೂ ಲೌಕಿಕ ಬದುಕನ್ನು ಹಸನು ಮಾಡುವುದರ ಕಡೆಗೆ ಅವರ ಕಾಳಜಿ ಹೆಚ್ಚಾಗಿತ್ತು. ಅವರು ಒಂದು ಕಡೆ ಹೀಗೆ ಹೇಳುತ್ತಾರೆ: ''ಸಮಾಜಕ್ಕೆ ಧರ್ಮದ ಅವಶ್ಯಕತೆ ಇಲ್ಲ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ನಾನು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಸಮಾಜದ ಜೀವಂತಿಕೆಗೆ ಮತ್ತು ವ್ಯವಹಾರಕ್ಕೆ ಧಾರ್ಮಿಕತೆಯ ಅಡಿಪಾಯ ಬೇಕು ಎಂದು ನಾನು ನಂಬುತ್ತೇನೆ.'' ಇನ್ನೊಂದು ಕಡೆ ಹೀಗೆ ಹೇಳುತ್ತಾರೆ: ''ಧರ್ಮದ ಬಗ್ಗೆ ಉದಾಸೀನತೆಯನ್ನು ತೋರುವ ತರುಣರನ್ನು ಕಂಡು ನನಗೆ ದುಃಖವಾಗುತ್ತದೆ. ಕೆಲವರು ಭಾವಿಸಿರುವಂತೆ ಧರ್ಮವೆಂಬುದು ಅಫೀಮು ಅಲ್ಲ. ನನ್ನಲ್ಲಿರುವ ಒಳ್ಳೆಯತನ, ನನ್ನ ಶಿಕ್ಷಣದಿಂದ ಸಮಾಜಕ್ಕೆ ಏನಾದರೂ ಒಳ್ಳೆಯದಾಗುತ್ತಿದ್ದರೆ ಅದಕ್ಕೆ ನನ್ನ ಧಾರ್ಮಿಕ ಪ್ರವೃತ್ತಿಯೇ ಕಾರಣವಾಗಿದೆ. ನನಗೆ ಧರ್ಮ ಬೇಕು, ಆದರೆ ಧರ್ಮದ ಹೆಸರಿನಲ್ಲಿ ವಂಚನೆ ಬೇಡ .''

ದಾರ್ಶನಿಕರು ಪ್ರಮುಖವಾಗಿ ಭಾರತೀಯ ದರ್ಶನಗಳನ್ನು ಎರಡು ವರ್ಗಗಳನ್ನಾಗಿ ವಿಂಗಡಿಸುತ್ತಾರೆ – ಆಸ್ತಿಕ ಮತ್ತು ನಾಸ್ತಿಕ – ಎಂದು, ಬೌದ್ಧ, ಜೈನ ಮತ್ತು ಲೋಕಾಯತ ಅಥವಾ ಚಾರ್ವಾಕ ದರ್ಶನಗಳನ್ನು ನಾಸ್ತಿಕ ದರ್ಶನಗಳೆಂದು ಹೆಸರಿಸುತ್ತಾರೆ. ಆಸ್ತಿಕ ಎಂದರೆ ದೇವರ ಅಸ್ತಿತ್ವವನ್ನು ನಂಬುವವರು. ಅಂದರೆ ಮುಖ್ಯವಾಗಿ ವೇದಪ್ರಾಮಾಣ್ಯವನ್ನು ಒಪ್ಪುವವರು ಮತ್ತು ನಾಸ್ತಿಕರೆಂದರೆ ದೇವರ ಅಸ್ತಿತ್ವವನ್ನು ನಂಬದವರು, ಅಂದರೆ ವೇದಪ್ರಾಮಾಣ್ಯವನ್ನು ಒಪ್ಪದವರು ಎಂದು ವ್ಯಾಖ್ಯಾನಿಸಲಾಗುತ್ತದೆ. ಇವೇ ಅರ್ಥಗಳು ಈಗ ವಿದ್ವಾಂಸರ ಮನದಾಳದಲ್ಲಿ ಬೇರೂರಿ ನಿಂತಿವೆ. ಆದರೆ ದಾರ್ಶನಿಕ ಹಿನ್ನೆಲೆಯಲ್ಲಿ ನೋಡಿದಾಗ 'ಆಸ್ತಿಕ' ಮತ್ತು 'ನಾಸ್ತಿಕ'ದ ಸಂಕಲ್ಪನೆಗಳು ತೀರ ಭಿನ್ನವಾಗಿವೆ ಎಂಬುದು ತಿಳಿದುಬರುತ್ತದೆ. ಆಸ್ತಿಕ ಎಂದರೆ 'ರೂಢಿನಿಷ್ಠ'ನಾಗಿರುವುದು ಅಥವಾ ಪರಂಪರೆಗೆ 'ಬದ್ಧ'ನಾಗಿರುವುದು ಮತ್ತು ನಾಸ್ತಿಕನೆಂದರೆ 'ರೂಢಿ ವಿರೋಧಿ'ಯಾಗಿರುವುದು ಅಥವಾ ಪರಂಪರೆಗೆ 'ಬದ್ಧನಾಗದೇ' ಇರುವುದು ಎನ್ನಬಹುದು. ಪರಂಪರೆ ಎಂದರೆ ಇಲ್ಲಿ ವೇದಗಳ ಪ್ರಾಮಾಣ್ಯಕ್ಕೆ ನಿಷ್ಠೆ ತೋರುವುದು ಅಥವಾ ಅವುಗಳಿಗೆ ಬದ್ಧನಾಗಿರುವುದು ಎಂದೇ ಅರ್ಥ. ಈ ಅರ್ಥದಲ್ಲಿ ನೋಡಿದಾಗ ಬುದ್ಧದೇವನಷ್ಟೇ ಅಲ್ಲ, ಬಸವಣ್ಣ, ಅಂಬೇಡ್ಕರ ಮುಂತಾದ ಎಲ್ಲ ವಿಚಾರವಾದಿಗಳೂ ನಾಸ್ತಿಕರ ಗುಂಪಿಗೆ ಸೇರುತ್ತಾರೆ. ಪುರೋಹಿತಶಾಹಿಯು ಎರಚಿದ ಮಂಕುಬೂದಿಯ ಮಬ್ಬನ್ನು ಕೊಡವಿಕೊಂಡು ಜಾಗ್ರತವಾದಾಗ ದೇಶದ ಪ್ರತಿಶತ ತೊಂಬತ್ತು ಭಾಗ ಇರುವ ದಲಿತ ಶೋಷಿತ ಜನತೆ ಕೂಡ ನಾಸ್ತಿಕರೆನಿಸಿಕೊಳ್ಳುತ್ತಾರೆ. ಅಜ್ಞಾತವಾದ ನೈಸರ್ಗಿಕ ನಿಯಂತ್ರಣ ಶಕ್ತಿಯನ್ನು ನಂಬುವುದು ಬೇರೆ, ವೇದ ಪ್ರಾಮಾಣ್ಯವನ್ನು ಕಣ್ಣುಮುಚ್ಚಿ ಒಪ್ಪಿಕೊಳ್ಳುವುದು ಬೇರೆ. ಬುದ್ಧ, ಬಸವ, ಕಬೀರ, ಫುಲೆ, ಅಂಬೇಡ್ಕರ ಮುಂತಾದವರನ್ನು ನಾವು ಈ ದೃಷ್ಟಿಯಿಂದ ನೋಡಬೇಕು.

ಬುದ್ಧದೇವನ ಒಂದು ಮೂಲ ಸಿದ್ಧಾಂತವನ್ನು ನಾವು ಸರಿಯಾಗಿ ಅರ್ಥಮಾಡಿಕೊಂಡಿದ್ದೇವೆಯೇ ಎಂಬುದರ ಬಗ್ಗೆ ನನಗೆ ಅನುಮಾನವಿದೆ. 'ನಮ್ಮ ಬದುಕು ದುಃಖದಿಂದ ಕೂಡಿದೆ' ಎಂಬ ಸತ್ಯವನ್ನು ಎಲ್ಲರೂ ನಂಬುತ್ತಾರೆ. 'ಆ ದುಃಖಕ್ಕೆ ಕಾರಣವುಂಟು' ಎಂಬ ಮಾತನ್ನು ಆಯಾ ಜನರು ತಮ್ಮ ತಮ್ಮ ಇತಿಮಿತಿಯೊಳಗೆ ಸಂದರ್ಭಕ್ಕೆ ತಕ್ಕಂತೆ ಒಪ್ಪಿಕೊಳ್ಳುತ್ತಾರೆ. 'ದುಃಖದ ನಿವಾರಣೆಯು ಸಾಧ್ಯ' ಎಂಬ ವಿಚಾರ ಅನೇಕರಲ್ಲಿ ಜಿಜ್ಞಾಸೆಯನ್ನು ಹುಟ್ಟಿಸಬಹುದು. 'ಆಸೆಯೇ ದುಃಖಕ್ಕೆ ಮೂಲ' ಎಂಬ ಮಾತು ಬಹುಶಃ ಭೌತಿಕವಾದಿಗಳಿಗೆ ರುಚಿಸಲಾರದು.

ದುಃಖದಿಂದ ಪಾರಾಗುವ ಮಾರ್ಗವೆಂದರೆ ಆಸೆಯನ್ನು ದೂರವಿಡುವುದು ಎಂದು ಬುದ್ಧದೇವನು ಹೇಳಿದನು. ಆದರೆ ಆಸೆ ಇರುವವರೆಗೆ ಮಾತ್ರ ಜೀವಿಸಿರಲು ಸಾಧ್ಯ ಎಂಬುದು ಭೌತವಾದಿಗಳ ತರ್ಕ. ಜೀವಿಸುವುದನ್ನು ನಿಲ್ಲಿಸಿದರೆ ಮಾತ್ರ ಆಸೆಗೆ ನಿಲುಗಡೆಯಾಗುತ್ತದೆ. ಅಂದರೆ ಅಸ್ತಿತ್ವವನ್ನೇ ನಿರ್ನಾಮ ಮಾಡಿಕೊಳ್ಳಬೇಕಾಗುತ್ತದೆ ಎಂದು ಅರ್ಥ. ಬುದ್ಧದೇವನ ಉಪದೇಶದ ಆಶಯ ಅದು ಅಲ್ಲ. 'ತನ್ನ' ಇಂದ್ರಿಯ ಗೋಚರವಾದ ವಿಷಯಗಳ ತೃಷೆಯಿಂದ ಜೀವನದ ಮೇಲೆ ಪ್ರಭಾವ ಉಂಟಾಗಿ ಅದರಿಂದ ಒಂದು ಸೋಪಾಧಿಕ ಅಸ್ತಿತ್ವ ರೂಪುಗೊಳ್ಳುತ್ತದೆ. ಆಸೆಯನ್ನು ನಿಲ್ಲಿಸುವುದೆಂದರೆ ಅಂಥ ಅಸ್ತಿತ್ವವನ್ನು ಬೆಳೆಯದಂತೆ ನಿಲ್ಲಿಸುವುದು ಎಂದು ಅರ್ಥ. ಈ ಅರ್ಥವನ್ನು ಗ್ರಹಿಸದೆ ಆಸೆಯನ್ನು ನಿಲ್ಲಿಸುವುದು ಎಂದರೆ ಜೀವಿಸುವುದನ್ನು ನಿಲ್ಲಿಸುವುದು ಎಂದು ಕುತರ್ಕ ಮಾಡಿದರೆ ಅದರಿಂದ 'ಬದುಕಿರಬಾರದು, ಆತ್ಮಹತ್ಯೆ ಮಾಡಿಕೊಳ್ಳಬೇಕು' ಎಂಬ ಅರ್ಥ ನಿಷ್ಪನ್ನವಾಗುತ್ತದೆ. ಯಾರಿಗಾದರೂ ಇದು ಎಂಥ ಮೂರ್ಖತನದ ತರ್ಕ ಎಂಬುದು ಮನವರಿಕೆಯಾಗದೇ ಇರದು. ಬುದ್ಧದೇವನ ಜ್ಞಾನೋದಯದ ಪ್ರಕಾರ ಎರಡು ಸ್ಥಿತಿಗಳೂ ಇರುತ್ತವೆ; ಒಂದು ಆಸೆ ಇರುವ ಸ್ಥಿತಿ, ಇನ್ನೊಂದು ಆಸೆಯಿಲ್ಲದ ಸ್ಥಿತಿ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಒಂದು ಅಹಂ ಸ್ಥಿತಿ, ಇನ್ನೊಂದು ಅಹಂ ರಹಿತ ಸ್ಥಿತಿ; ಎಲ್ಲಿಯವರೆಗೆ ಮನುಷ್ಯನು ಅಹಂಗಾಗಿ ಮತ್ತು ಅದರ ಆಸೆಗಳಿಗಾಗಿ ಬಾಳುತ್ತಾನೋ ಅಲ್ಲಿಯವರೆಗೆ ಅವನು ಉದ್ರಿಕ್ತನೂ, ಅವಿಶ್ರಾಂತನೂ ಮತ್ತು ದುಃಖಾರ್ತನೂ ಆಗಿರುತ್ತಾನೆ.

ನೈತಿಕ ಶಿಕ್ಷಣ.. ಪಠ್ಯದಲ್ಲಿ ಅಳವಡಿಕೆಗೆ ಚಿಂತನೆ..



ಅಗ್ಲೇ ಹೇಳಿದ್ದೆ.. ಅದೇನೋ "ನೈತಿಕ ಪಾಠ.."ದ ಬಗ್ಗೆ ಅಪ್ಪನ ಬಳಿ ಕೇಳ್ಬೇಡಾ.. ಕೋಪ ಬರುತ್ತೆ ಅಂತ ಗೊತ್ತಾಗ್ಲಿಲ್ವಾ..?!

ಬುದ್ಧದೇವನ ಈ ಮಾತಿನ ಸಾರಸರ್ವಸ್ವವೇ ಬಸವಣ್ಣನವರ 'ದಾಸೋಹ'ದಲ್ಲಿ ಅಳವಟ್ಟಿದೆ. ''ಕಾಯಕವೇ ಕೈಲಾಸ'' ಎಂದು ಹೇಳಿ ಶರಣರು ಬದುಕಿಗೆ ಕಾಯಕವನ್ನು ಕಡ್ಡಾಯಗೊಳಿಸಿದರು. ಕಾಯಕದ ಜೊತೆಗೆ ದಾಸೋಹವನ್ನೂ ಅನಿವಾರ್ಯಗೊಳಿಸಿದರು. ದಾಸೋಹವೆಂದರೆ ಪುರೋಹಿತಶಾಹಿಗಳು ಪರಲೋಕಕ್ಕೆ 'ಪಾಸ್‌ಪೋರ್ಟ್' ಎಂದು ಹೇಳುವ 'ದಾನ' ಪ್ರಕ್ರಿಯೆಯಲ್ಲ. ಸ್ವಂತ ಕಾಯಕದಿಂದ ದುಡಿದದ್ದನ್ನು ಜಂಗಮಕ್ಕೆ ಅಂದರೆ ಸಮಾಜಕ್ಕೆ, ಅರ್ಥಾತ್ ಸಂಘಕ್ಕೆ ಸಮರ್ಪಿಸುವುದೇ ದಾಸೋಹವಾಗಿದೆ. 'ದಾನ'ದಲ್ಲಿ ದಾನಿಯ ಕೈ ಮೇಲಿರುತ್ತದೆ. ದಾಸೋಹದಲ್ಲಿ ದಾಸೋಹಿಯ ಕೈ ಕೆಳಗಿರುತ್ತದೆ. ಕಾಯಕದಿಂದ ಬಂದದ್ದನ್ನು ದಾಸೋಹಿಯು ಕೈ ಚಾಚಿ ಸಮಾಜದ ಎದುರಿಗೆ ಹಿಡಿಯುತ್ತಾನೆ. ಸಮಾಜ ಅದನ್ನು ಲೋಕ ಕಲ್ಯಾಣಾರ್ಥವಾಗಿ ಎತ್ತಿಕೊಳ್ಳುತ್ತದೆ. ಮತ್ತು ದಾಸೋಹಿಯ ಬದುಕಿಗಾಗಿ ಅದೇ ಸಮಾಜ ಪ್ರಸಾದ ರೂಪವಾಗಿ ನೀಡುತ್ತದೆ. ಈ ರೀತಿಯಾಗಿ ದಾಸೋಹ ಮಾಡುವಾಗಲೂ ಶರಣನ ಕೈ ಮೇಲಿರುವುದಿಲ್ಲ, ಪ್ರಸಾದ ಸ್ವೀಕರಿಸುವಾಗಲೂ ಮೇಲಿರುವುದಿಲ್ಲ. ಹೀಗಾಗಿ ಬುದ್ಧದೇವನು ಹೇಳುವಂತೆ ಶರಣನು ಅಹಂ ರಹಿತವಾದ ಸ್ಥಿತಿಯಲ್ಲಿರುತ್ತಾನೆ. ಬುದ್ಧ-ಬಸವರ ವಿಚಾರಗಳಲ್ಲಿ ಎಷ್ಟೊಂದು ಸಮಾನತೆ ಇದೆ ಎಂಬುದನ್ನು ಈ ಹಿನ್ನೆಲೆಯಲ್ಲಿ ನಾವು ಕಾಣಬಹುದಾಗಿದೆ.

ಈ ಮಾತುಗಳನ್ನು ಅಂಬೇಡ್ಕರರ ಕಾಲಮಾನಕ್ಕೆ ಅನ್ವಯಿಸುವುದು ಸಾಧುವಲ್ಲ. ಆ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ವಾದಸರಣಿಯೆ ಭಿನ್ನವಾಗಿತ್ತು. ಇಡೀ ಸಮಾಜದ ಒಡೆತನವೇ ತನಗೆ ಸೇರಿದ್ದು ಎಂಬ ಮನುವಿನ ವ್ಯಾಖ್ಯಾನವನ್ನು ಪುರೋಹಿತ ವರ್ಗ ಅಳವಡಿಸಿಕೊಂಡಿತ್ತು. ಸಮಾಜದ ಉತ್ಪಾದನೆಗೆ ತಾವೇ ಒಡೆಯರು, ಅದನ್ನು ಉಪಭೋಗಿಸುವ ಹಕ್ಕುದಾರರು ತಾವು ಮಾತ್ರ, ಉಳಿದ ವರ್ಗದ ಜನರು ತಮ್ಮ ಕೃಪೆಯ ಆಶ್ರಯದಲ್ಲಿರಬೇಕು ಎಂದು ಆ ವರ್ಗ ದುಂಡಾವರ್ತನೆ ನಡೆಸುತ್ತಿತ್ತು. ಮನುನಿರ್ಮಿತ ಸಮಾಜದ ಹೊರಗಿರುವ ಪ್ರತಿಶತ ತೊಂಬತ್ತು ಭಾಗದ ಜನಾಂಗದ ಅಸ್ಮಿತೆಯನ್ನು, ಐಡೆಂಟಿಟಿಯನ್ನು ಸ್ಥಾಪಿಸುವುದು ಅಂಬೇಡ್ಕರರ ಕಾಳಜಿಯಾಗಿತ್ತು. ತಮ್ಮನ್ನು ಹಿಂದೂ ವರ್ಗದ ಭಾಗವೆಂದು ಭಾವಿಸುವುದಾದರೆ ತಮಗೂ ಧಾರ್ಮಿಕ ಸಮಾನತೆಯ ಅಧಿಕಾರ ಬೇಕು ಎಂದು ಅವರು ಆರಂಭದಲ್ಲಿ ಹೋರಾಡಿದರು. ಅದಕ್ಕಾಗಿ ಅವರು 'ಮಂದಿರ ಪ್ರವೇಶ'ದ ಚಳವಳಿಯನ್ನು ಆರಂಭಿಸಿದರು. ಕಲ್ಲುಕುಟಿಕರಿಂದ ಕುಟಿಸಿಕೊಂಡು ರೂಪುತಾಳಿದ ಗರ್ಭಗೃಹದ ಮೂರ್ತಿಯು ದೇವರಲ್ಲ

ಎಂದು ತಿಳಿದು ಆ ಚಳವಳಿಯನ್ನು ಕೈಬಿಟ್ಟರು. ಆಗ ದೇಶದಲ್ಲಿ ಕಾಂಗ್ರೆಸ್ ಒಂದೇ ಪ್ರಬಲವಾದ ರಾಜಕೀಯ ಪಕ್ಷವಾಗಿತ್ತು. ಗಾಂಧೀಜಿಯವರು ಆ ಪಕ್ಷದ ಮುಂದಾಳಾಗಿದ್ದರು. ಸಾಮಾಜಿಕ ಸಮಾನತೆಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಅಂಬೇಡ್ಕರರು ಗಾಂಧೀಜಿಯವರಲ್ಲಿ ಒಂದೇ ಒಂದು ಸಣ್ಣದಾದ ಬೇಡಿಕೆಯನ್ನಿಟ್ಟರು. ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಎಲ್ಲ ಸದಸ್ಯರು ಖಾದಿ ಬಟ್ಟೆಯನ್ನೇ ಧರಿಸಬೇಕು ಎಂದು ಕಡ್ಡಾಯಗೊಳಿಸಲಾಗಿತ್ತು. ಆಗ ಅಂಬೇಡ್ಕರರು ಕೇಳಿದ್ದು ಇಷ್ಟೇ: ಕಾಂಗ್ರೆಸ್ಸಿಗರಿಗೆ ಖಾದಿ ಧರಿಸುವುದು ಕಡ್ಡಾಯಗೊಳಿಸಿದಂತೆ ಕಾಂಗ್ರೆಸ್ ಸೇರುವ ಯಾವ ಸದಸ್ಯರೂ ಅಸ್ಪೃಶ್ಯತೆಯನ್ನು ಪಾಲಿಸಕೂಡದು ಎಂಬ ತತ್ತ್ವವನ್ನು ಕಡ್ಡಾಗೊಳಿಸಬೇಕು. ಅಂಬೇಡ್ಕರರ ಈ ಬೇಡಿಕೆ 'ಗಾಂಧೀವಾದ'ಕ್ಕೆ ವಿರುದ್ಧವಾಗಿತ್ತೆ, ಎಂಬುದನ್ನು ಗಾಂಧೀಭಕ್ತರು ಆಲೋಚಿಸಬೇಕು. ಇಂಥ ಸಂದರ್ಭಗಳು ಎದುರಾದಾಗ ಅಂಬೇಡ್ಕರರು ರಾಜಕೀಯ ಹಕ್ಕುಗಳಿಗಾಗಿ ತಮ್ಮ ಹೋರಾಟ ಆರಂಭಿಸಿದರು. ಈ ಎಲ್ಲ ಹೋರಾಟಗಳು ಒಂದರೊಳಗೊಂದು ತಳುಕುಹಾಕಿಕೊಂಡಿವೆ.

ಇಲ್ಲಿ ವಿವೇಕಾನಂದರ ಒಂದು ವಿಚಾರ ನೆನಪಿಗೆ ಬರುತ್ತದೆ: ''ಪ್ರಪಂಚದ ಯಾವ ಧರ್ಮವೂ ಹಿಂದೂ ಧರ್ಮದಂತೆ ಮನುಷ್ಯತ್ವದ ಮಹೋನ್ನತೆಯ ಬಗ್ಗೆ ಭವ್ಯವಾಣಿಯಲ್ಲಿ ಬೋಧಿಸುವುದಿಲ್ಲ. ಪ್ರಪಂಚದ ಯಾವ ಧರ್ಮವೂ ಹಿಂದೂ ಧರ್ಮದಂತೆ ಕ್ರೂರವಾಗಿ ದಲಿತರ ಕತ್ತು ಕೊಯ್ಯುವುದಿಲ್ಲ. ತಪ್ಪು ಹಿಂದೂ ಧರ್ಮದ್ದಲ್ಲ, ಇಲ್ಲಿರುವ ಸಂಪ್ರದಾಯ, ಪುರೋಹಿತಶಾಯಿಯದ್ದಾಗಿದೆ. ...ಪ್ರಗತಿಯ ವಿರೋಧಿಗಳಾಗಿರುವ ಪುರೋಹಿತರನ್ನು ಒದ್ದು ಓಡಿಸಿರಿ – ಶತಮಾನಗಳಿಂದ ನಡೆದುಕೊಂಡು ಬಂದಿರುವ ಅಂಧಶ್ರದ್ಧೆ ಮತ್ತು ನಿರಂಕುಶತನದ ಸಂತತಿಯಾಗಿವೆ ಇವು. ಭಾರತ ದೇಶದ ವಿನಾಶಕ್ಕೆ ಪುರೋಹಿತಶಾಹಿಯೇ ಕಾರಣೀಭೂತವಾಗಿದೆ,'' *(ವಿವೇಕಾನಂದರ ಕ್ರಾಂತಿಕಾರಕ ವಿಚಾರಗಳು: ಜ. ಹೋ. ನಾರಾಯಣಸ್ವಾಮಿ – 'ಬಸವೇಶ್ವರ-ಅಂಬೇಡ್ಕರ': ದೇಜಗೌ ಪುಸ್ತಕದ ಅಡಿಟಿಪ್ಪಣಿಯಿಂದ ಉದ್ಧೃತ).*

ಬುದ್ಧ ಮತ್ತು ಬಸವಣ್ಣ ಹುಟ್ಟಿನಿಂದ ಅಸ್ಪೃಶ್ಯರಾಗಿರಲಿಲ್ಲ. ಆದರೆ ಅಂಬೇಡ್ಕರರು ತಾನು ಅಸ್ಪೃಶ್ಯನಾಗಿ ಹುಟ್ಟಿದ್ದೇ ತನ್ನ ಸೌಭಾಗ್ಯವೆಂದು ಭಾವಿಸಿದ್ದರು. ತಾನು ಉತ್ತಮ ಕುಲದಲ್ಲಿ ಹುಟ್ಟಿದ್ದೇ ಆಗಿದ್ದರೆ ಸಾವಿರಾರು ವರ್ಷಗಳಿಂದ ನರಕಯಾತನೆಯಲ್ಲಿ ಬದುಕುತ್ತಿದ್ದ ಒಂದು ಪ್ರಬಲವಾದ ಜನಾಂಗದ ಮುಂದಾಳಾಗುತ್ತಿದ್ದೇನೇ ಎಂಬ ಪ್ರಶ್ನೆ ಅವರ ಮುಂದಿತ್ತು. ದಲಿತ ವರ್ಗದಲ್ಲಿ ಜನಿಸಿದ್ದರಿಂದಲೇ ದಲಿತರ ಬದುಕಿನ ಭೀಕರ ಸತ್ಯವನ್ನು ಅರಿಯಲು ಸಾಧ್ಯವಾಯಿತು. ಒಂದು ವೇಳೆ ಅಂಬೇಡ್ಕರರು ಸರಿಯಾದ ಕಾಲಕ್ಕೆ ಭಾರತದ ರಾಜಕೀಯ ರಂಗದ ಮೇಲೆ ಕಾಣಿಸಿಕೊಳ್ಳದೇ ಹೋಗಿದ್ದರೆ ಇಷ್ಟು ತೀವ್ರಗತಿಯಲ್ಲಿ ದಲಿತರು ಈ ಮಟ್ಟದಲ್ಲಾದರೂ ಉದ್ಧಾರವಾಗಲು ಸಾಧ್ಯವಿರಲಿಲ್ಲ. ಅಂಬೇಡ್ಕರರ ಆಂದೋಲನಕ್ಕೆ ಕಾಲ ಪಕ್ವವಾಗಿತ್ತೆಂದು ಹೇಳಬೇಕು. ಈ ಭಾಗ್ಯ ಬಸವಣ್ಣನವರಿಗೆ ಒದಗಿ ಬಂದಿರಲಿಲ್ಲ. ಬುದ್ಧನಂತೆ ಭಾರತದ ಚರಿತ್ರೆಯ ರಂಗದ ಮೇಲೆ ಬಸವ-ಚಳವಳಿಯು ಯಾವ ರೀತಿಯಾಗಿ ಬೆಳೆದು ಬರಬೇಕಾಗಿತ್ತೋ ಆ ರೀತಿ ಬೆಳೆಯಲು ಸಾಧ್ಯವಾಗಲಿಲ್ಲ.

ಸಮಾಜದ ಕೊನೆಯ ಅಂಚಿನಲ್ಲಿರುವ ಮನುಷ್ಯನ ಉದ್ಧಾರವು ಬುದ್ಧದೇವನ ಗುರಿಯಾಗಿತ್ತು. ಅದಕ್ಕಾಗಿ ಆತ ಒಂದು ಹೊಸ ದರ್ಶನವನ್ನು ಲೋಕಕ್ಕೆ ನೀಡಿದನು. ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವುದಕ್ಕಾಗಿ ಮತ್ತು ಸಮಾಜದಲ್ಲಿ ಸಮತೆಯನ್ನು ನಿರ್ಮಿಸುವುದಕ್ಕಾಗಿ ಬಸವಣ್ಣನವರು ಎರಡು ಮಾರ್ಗಗಳನ್ನು ಕಂಡುಕೊಂಡಿದ್ದರು. ಒಂದು ಇಷ್ಟಲಿಂಗ ಧಾರಣೆ, ಇನ್ನೊಂದು ಅಂತರ್ಜಾತೀಯ ವಿವಾಹ. ಜಾತ್ಯಂತರ, ವರ್ಣಾಂತರ ಮತ್ತು ಮತಾಂತರಗಳಿಗೆ ಲಿಂಗಧಾರಣೆಯು ಸಾಧನವಾದರೆ ಭಾವೈಕ್ಯ ಮತ್ತು ಸಮಾಜದ ಏಕತೆಗೆ ಅಂತರ್ಜಾತೀಯ ವಿವಾಹವು ಭದ್ರ ಬುನಾದಿಯಾಗುತ್ತದೆ; ಅದರಿಂದ ಏಕಕಾಲಕ್ಕೆ ಜಾತಿ ವಿನಾಶದ ಜೊತೆಗೆ ಅಸ್ಪೃಶ್ಯತೆಯ ನಿವಾರಣೆಯೂ ಆಗುತ್ತದೆ ಎಂದು ಬಸವಣ್ಣನವರು ನಂಬಿದ್ದರು.

ಹಳೆಯದನ್ನು ಕೆಡವದ ಹೊರತು ಆ ಜಾಗದಲ್ಲಿ ಹೊಸ ಸೌಧ ಕಟ್ಟಲು ಸಾಧ್ಯವಿಲ್ಲ. ಹಳೆಯದನ್ನೇ ಸುಧಾರಿಸುವುದೆಂದರೆ ತ್ಯಾಪೆ ಹಚ್ಚುವ ಕೆಲಸವಾಗುತ್ತದೆ. ಭಾರತದಲ್ಲಿ ಅಂಥ ಅನೇಕ ಸುಧಾರಕರು ಆಗಿ ಹೋಗಿದ್ದಾರೆ. ಅವರ ಪ್ರಯತ್ನಗಳು ಬುದ್ಧ, ಬಸವ, ಅಂಬೇಡ್ಕರರ ಪ್ರಯತ್ನದಂತೆ ಕಾರ್ಯಸಾಧುವಾಗಿವೆ ಎಂದು ಹೇಳಲು ಬರುವುದಿಲ್ಲ. ಅದಕ್ಕೆಂದೇ ಬುದ್ಧ, ಬಸವರು ಹೊಸ ದೃಷ್ಟಿಯ ಸೌಧವನ್ನು ನಿರ್ಮಿಸಿದರು. ಅಂಬೇಡ್ಕರರು ಹಾಗೆ ಮಾಡಲಿಲ್ಲ. ಅದಕ್ಕೆ ಕಾರಣ ಅವರೇ ಹೇಳಿಕೊಂಡಿದ್ದಾರೆ. ಮಹಾಡ ನಗರದ ಸುರಬಾ ಟಿಪಣೀಸ ಎಂಬ ಅವರ ಒಬ್ಬ ಆತ್ಮೀಯ ಗೆಳೆಯರು ಕೇಳಿದ್ದರು, ''ಮತಾಂತರ ಹೊಂದುವುದಕ್ಕಿಂತ ಒಂದು ಹೊಸ ಧರ್ಮವನ್ನು ಸ್ಥಾಪಿಸಬಹುದಿತ್ತಲ್ಲ!'' ಎಂದು. ಈ ಪ್ರಶ್ನೆಗೆ ಅಂಬೇಡ್ಕರರು ಕೊಟ್ಟ ಉತ್ತರ ಎಷ್ಟೊಂದು ವಾಸ್ತವಿಕವಾಗಿದೆ ಎಂದರೆ, ಅದು ನಮ್ಮ ಸನಾತನ ವ್ಯವಸ್ಥೆಯನ್ನೇ ಪ್ರತಿಬಿಂಬಿಸುತ್ತದೆ. ಅವರು ಕೇಳಿದ್ದರು, ''ನಾನೊಬ್ಬ ಹೊಲೆಯ, ಶಂಕರಾಚಾರ್ಯನಲ್ಲ. ಹೊಲೆಯನು ಸ್ಥಾಪಿಸಿದ ಧರ್ಮವನ್ನು ಯಾರು ತಾನೆ ಸ್ವೀಕರಿಸುತ್ತಾರೆ ?'' ಎಂದು. ಇನ್ನೊಂದು ಸಂದರ್ಭದಲ್ಲಿ, ''ನಾನು ಅಸ್ಪೃಶ್ಯನಾಗಿ ಹುಟ್ಟದೇ ಹೋಗಿದ್ದರೆ ಸಮಾಜಕ್ಕೆ ನನ್ನ ಪ್ರತಿಭೆಯ ಸಾಮರ್ಥ್ಯ ಇನ್ನೂ ಹೆಚ್ಚು ಉಪಯುಕ್ತವಾಗುತ್ತಿತ್ತು'' ಎಂದಿದ್ದರು. (ಡಾ|| ಅಂಬೇಡ್ಕರ್ - ಕ್ರಿಟಿಕಲ್ ಸ್ಟಡಿ; ಡಬ್ಲ್ಯೂ.ಎನ್. ಕುಬೇರ್, ಪುಟ ೮೯) ಈ ಮಾತುಗಳು ಸತ್ಯ. ಬುದ್ಧನ ವಿಚಾರಗಳು ಇಂದು ಜಾಗತಿಕ ಮಟ್ಟದಲ್ಲಿ ತನ್ನ ಭದ್ರ ಬುನಾದಿ ಹಾಕಿಕೊಂಡಿರುವುದರಿಂದ ಮತ್ತು ಅವು ದ್ವಂದ್ವಾತೀತವಾಗಿರುವುದರಿಂದ ಅವುಗಳಿಗೆ ಪರ್ಯಾಯವಾದ ವಿಚಾರ ಮಂಡಿಸುವುದು ಸಾಧ್ಯವಿಲ್ಲದ ಮಾತಾಗಿದೆ. ಆದರೆ ಬಸವಣ್ಣ ಹಾಗೂ ಅಂಬೇಡ್ಕರರ ವಿಚಾರ ಹಾಗಿಲ್ಲ. ಇವರಿಬ್ಬರನ್ನೂ ಜಾತಿಯ ಕನ್ನಡಕದ ಮೂಲಕವೇ ನೋಡಲಾಗುತ್ತದೆ. ಬಸವಣ್ಣನವರ ವಿಚಾರಗಳು ತೊಂಡವಾಡಿಯಲ್ಲಿ ಬಂಧಿಸಿಟ್ಟ ದನಗಳಂತಾದರೆ ಅಂಬೇಡ್ಕರರ ವಿಚಾರಗಳು ಅವರ ಜಾತಿಮೂಲದ ಅಸ್ಪೃಶ್ಯತೆಯ ಮೈಲಿಗೆಯನ್ನು ಹೊತ್ತುಕೊಂಡಿವೆ. ಬಸವಣ್ಣನವರ ಕಾಲಕ್ಕೆ ಅವರ ವಿಚಾರಗಳನ್ನು ಅರಗಿಸಿಕೊಳ್ಳಲು ಕಾಲ ಪಕ್ವವಾಗಿರಲಿಲ್ಲ. ಆದರೆ ಅಂಬೇಡ್ಕರರ ಕಾಲ ಪಕ್ವವಾಗಿದ್ದರೂ ಅವರ ಬದುಕಿನ ಕಾಲಮಾನ ಅವರೊಡನೆ ಸಹಕರಿಸಲಿಲ್ಲ.

೧೯೩೫ರಲ್ಲೇ ಮತಾಂತರದ ವಿಚಾರ ಅವರ ತಲೆಯಲ್ಲಿ ಸುಳಿಯುತ್ತಿತ್ತಾದರೂ ಕೊನೆಯ ನಿರ್ಣಯ ತೆಗೆದುಕೊಳ್ಳಲು ಸುಮಾರು ಇಪ್ಪತ್ತೈದು ವರ್ಷಗಳ ಕಾಲಾವಕಾಶ ಬೇಕಾಯಿತು. ಅದಕ್ಕೆ ಅಂಬೇಡ್ಕರರ ವ್ಯಾಪಕ ಚಿಂತನೆಯೇ ಕಾರಣವೆಂದು ಹೇಳಿದರೆ ಬಹುಶಃ ನಂಬಿಕೆಯಾಗಲಿಕ್ಕಿಲ್ಲ. ಮತಾಂತರಕ್ಕಾಗಿ ಅವರ ಎದುರಿಗೆ ಕ್ರಿಶ್ಚಿಯನ್, ಇಸ್ಲಾಮ್ ಮತ್ತು ಸಿಕ್ಖ ಧರ್ಮಗಳು ಪರ್ಯಾಯವಾಗಿದ್ದುವು. ಆದರೆ ದೇಶದ ಹಿತಚಿಂತನೆ ಅವರ ಮುಖ್ಯ ಗುರಿಯಾಗಿತ್ತು. ಸಿಕ್ಖ ಮತವು ಹಿಂದೂ ಸಂಸ್ಕೃತಿಯಿಂದ ಭಿನ್ನವಾಗಿಲ್ಲ ಎಂದು ಅವರು ಭಾವಿಸಿದರು. ಇನ್ನು ಇಸ್ಲಾಮದ ಒತ್ತಡ ಅವರ ಮೇಲೆ ಬಲವಾಗಿತ್ತು. ಆ ಸಂದರ್ಭದಲ್ಲಿ ಅಂಬೇಡ್ಕರರು ಹೇಳಿದ ಮಾತುಗಳೂ ಹೀಗಿವೆ: ''ಈ ದಿನ ದೇಶದ ಬಗ್ಗೆ ಅಭಿಮಾನದ ಘೋಷಣೆ ಕೂಗುವ ದೇಶಭಕ್ತರು ಆತ್ಮಾವಲೋಕನ ಮಾಡಿಕೊಂಡು ನಾಚಿಕೊಳ್ಳಬೇಕು. ನಾನು ಇಸ್ಲಾಂ ಧರ್ಮವನ್ನು ಸ್ವೀಕರಿಸಿದರೆ ಕೋಟ್ಯಂತರ ಹಣ ನನ್ನ ಕಾಲಡಿಯಲ್ಲಿ ಬಂದು ಬೀಳುತ್ತದೆ. ಅದರ ಪರಿಣಾಮವೆಂದರೆ ಐದು ವರ್ಷಗಳಲ್ಲಿ ದೇಶದ ಸರ್ವನಾಶವಾಗುತ್ತದೆ–ನಾನೊಬ್ಬ ಮೂರ್ತಿಭಂಜಕನೆಂದು ಇತಿಹಾಸದಲ್ಲಿ ದಾಖಲಾಗುತ್ತೇನೆ. ಹಾಗಾಗಲು ನಾನು ಬಯಸುವುದಿಲ್ಲ.'' (ಡಾ|| ಅಂಬೇಡ್ಕರ್ - ಕ್ರಿಟಿಕಲ್ ಸ್ಟಡಿ; ಡಬ್ಲ್ಯೂ.ಎನ್. ಕುಬೇರ್, ಪುಟ ೮೬) ಅಂಬೇಡ್ಕರರ ಈ ಮಾತಿನಲ್ಲಿ ಪ್ರಾಮಾಣಿಕತನವೂ ಇದೆ, ವಾಸ್ತವಿಕತೆಯೂ ಇದೆ. ತಮ್ಮ ಅನುಯಾಯಿಗಳೊಂದಿಗೆ ಒಂದು ವೇಳೆ ಅವರು ಇಸ್ಲಾಂ ಧರ್ಮವನ್ನು ಸ್ವೀಕರಿಸಿದ್ದರೆ ಅವರ ಉದ್ಧಾರವಾಗುತ್ತಿತ್ತೋ ಇಲ್ಲವೋ ಹೇಳಲು ಸಾಧ್ಯವಿಲ್ಲ. ಆದರೆ ಹಿಂದೂ ಧರ್ಮ ಮಾತ್ರ ಖಂಡಿತ ನಾಶವಾಗುತ್ತಿತ್ತು. ಹಾಗೆ ಮಾಡದೆ ಇರುವುದರಿಂದ ಅವರು ಹಿಂದೂ ಧರ್ಮವನ್ನು ಕಾಪಾಡಿದರು ಎಂದು ಹಿಂದೂ ಧರ್ಮದ ಬಗ್ಗೆ ಆಷಾಢಭೂತಿತನ ಹೊಂದಿದವರು ಚಿಂತನೆ ಮಾಡಬೇಕು. ದುರ್ದೈವದ ಸಂಗತಿಯೆಂದರೆ ಮತಾಂತರ ಹೊಂದಿದ ನಂತರ ಅವರು ಬಹಳ ದಿನ ಬಾಳಲಿಲ್ಲ. ಇನ್ನೂ ಹತ್ತಿಪ್ಪತ್ತು ವರ್ಷ ಅವರು ಬದುಕಿರಬೇಕಿತ್ತು.

ನನ್ನ ಅಧ್ಯಯನದ ಮಿತಿಯಲ್ಲಿ ಹೇಳುವುದಾದರೆ ಬುದ್ಧ, ಬಸವ, ಕಬೀರ, ಫುಲೆ, ಅಂಬೇಡ್ಕರ ಮುಂತಾದವರನ್ನು ಒಂದೇ ವೇದಿಕೆಯಲ್ಲಿ ಇಟ್ಟು ಚಿಂತನೆ ಮಾಡಬೇಕಾದ ಅವಶ್ಯಕತೆ ಈಗ ಇದೆ. ಇವರೆಲ್ಲ ಮಾನವತೆಗಾಗಿ ಹೋರಾಡಿದವರು. ತಮ್ಮ ಗುರುತನ್ನೇ, ಚೆಹರಾಪಟ್ಟಿಯನ್ನೇ, ಐಡೆಂಟಿಟಿಯನ್ನೇ ಕಳೆದುಕೊಂಡಿದ್ದ ಜನತೆಗೆ ಮತ್ತೆ ಅದೇ ಐಡೆಂಟಿಟಿಯನ್ನು ಒದಗಿಸಿಕೊಡಲು ಸೆಣಸಾಡಿದವರು. ಹೊಸ ಇತಿಹಾಸವನ್ನೇನಾದರೂ ರಚಿಸುವುದಾದರೆ, ಅದನ್ನು ಈ ವಿಚಾರವಂತರ, ಪ್ರಜ್ಞಾವಂತರ ದೃಷ್ಟಿಕೋನದಿಂದ ರಚಿಸಬೇಕಾದುದು ಅತ್ಯವಶ್ಯಕ.

**ಭಾಲಚಂದ್ರ ಜಯಶೆಟ್ಟಿ**
೧೩-೩೦೨, ಅಕ್ಮೆ ಹಾರ್ಮೊನಿ, ಔಟರ್ ರಿಂಗ್ ರೋಡ್, ಬೆಳ್ಳಂದೂರು
ಬೆಂಗಳೂರು - ೫೬೦ ೧೦೩

ವಿಶ್ವವೀಕ್ಷಣೆ

## ಮ್ಯೆನ್ಮಾರ್ : ಸರ್ವಾಧಿಕಾರ ಇನ್ನೆಷ್ಟು ಕಾಲ

**ಭಾ**ರತ ಉಪಖಂಡದಲ್ಲಿರುವ ದೇಶ ಮ್ಯೆನ್ಮಾರ್‌ನಲ್ಲಿ ಮಿಲಿಟರಿ ಸರ್ವಾಧಿಕಾರ ಆಡಳಿತ ಬಂದು ಅರ್ಧಶತಮಾನವಾಗುತ್ತ ಬಂದಿದೆ. ೧೯೬೨ರಲ್ಲಿ ಚುನಾಯಿತ ಸರಕಾರವನ್ನು ಪದಚ್ಯುತಗೊಳಿಸಿ ಮಿಲಿಟರಿ ಅಧಿಕಾರವಹಿಸಿಕೊಂಡಿತು. ಭಾರತ ಸ್ವತಂತ್ರಗೊಂಡ ಒಂದು ವರ್ಷದ ನಂತರ ಸ್ವಾತಂತ್ರ್ಯ ಪಡೆದುಕೊಂಡ ನಾಲ್ಕೂವರೆ ಕೋಟಿ ಜನಸಂಖ್ಯೆಯ ಬರ್ಮಾ ದೇಶ (೧೯೮೯ರಲ್ಲಿ ಮಿಲಿಟರಿ ಸರ್ವಾಧಿಕಾರ ಹೆಸರನ್ನು ಬದಲಿಸಿ 'ಮ್ಯೆನ್ಮಾರ್' ಎಂದು ನಾಮಕರಣ ಮಾಡಿತು) ಆಯ್ಕೆಮಾಡಿಕೊಂಡಿದ್ದು ಪ್ರಜಾತಂತ್ರ ವ್ಯವಸ್ಥೆ. ಸ್ವಾತಂತ್ರ್ಯಕ್ಕೆ ಮುನ್ನ ಬ್ರಿಟಿಷ್ ಆಡಳಿತೆ ಸ್ಥಾಪಿಸಿದ್ದ ರಾಷ್ಟ್ರೀಯ ನಾಯಕ ಆಂಗ್ ಸಾನ್ ನೇತೃತ್ವದ ಸರಕಾರ ದುರಂತದಲ್ಲಿ ಪರ್ಯವಸಾನಗೊಂಡಿತು. ಆಂಗ್ ಸಾನ್ ಮತ್ತು ಅವರ ಸಂಪುಟದ ಸಚಿವರು ಅಧಿಕಾರ ವಹಿಸಿಕೊಂಡ ಆರು ತಿಂಗಳಲ್ಲೇ ಕೊಲೆಯಾದರು. ಸ್ವಾತಂತ್ರ್ಯಾನಂತರ ಬರ್ಮಾ ಭಾರತದಂತೆಯೇ ಅಲಿಪ್ತನೀತಿಯನ್ನು ಅನುಸರಿಸುತ್ತಿತ್ತು ಮತ್ತು ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿತ್ತು. ಮಿಲಿಟರಿ ಸರ್ವಾಧಿಕಾರ ಅಧಿಕಾರ ವಹಿಸಿಕೊಂಡಮೇಲೆ ದೇಶದ ಹೆಸರನ್ನು ಬದಲಿಸಿದ್ದಲ್ಲದೆ ವಿಶ್ವಸಂಸ್ಥೆಯಿಂದ ಹಾಗೂ ಇತರ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ಹೊರಬಂದಿತು. ಈ ರೀತಿ ಪ್ರತ್ಯೇಕವಾಗಿ ಉಳಿದ ಮೊದಲ ದೇಶ ಇದು.

ಮಿಲಿಟರಿ ಸರ್ವಾಧಿಕಾರಿಗಳು ಇಪ್ಪತ್ತೆಂಟು ವರ್ಷಗಳ ನಂತರ ೧೯೯೦ರಲ್ಲಿ ಚುನಾವಣೆಗಳನ್ನು ನಡೆಸಿದರು. ಈ ಚುನಾವಣೆಯಲ್ಲಿ ಮಿಲಿಟರಿ ಸರ್ವಾಧಿಕಾರದ ವಿರುದ್ಧ ಪ್ರಜಾಪ್ರಭುತ್ವಕ್ಕಾಗಿ ಹೋರಾಟ ನಡೆಸುತ್ತಿದ್ದ 'ರಾಷ್ಟ್ರೀಯ ನಾಯಕ ಆಂಗ್ ಸಾನ್‌ರ ಪುತ್ರಿ ಆಂಗ್ ಸಾನ್ ಸೂಕಿ ನೇತೃತ್ವದಲ್ಲಿ ಸ್ಥಾಪಿತವಾಗಿರುವ ಪ್ರಜಾಪ್ರಭುತ್ವಕ್ಕಾಗಿ ರಾಷ್ಟ್ರೀಯ ಲೀಗ್' (ದಿ ನ್ಯಾಷನಲ್ ಲೀಗ್ ಆಫ್ ಡೆಮಾಕ್ರಸಿ) ಎಂಬ ಪಕ್ಷವು ಬಹುಮತವನ್ನು ಗಳಿಸಿತು. ಆದರೆ ಮಿಲಿಟರಿ ಸರ್ವಾಧಿಕಾರ ಅಧಿಕಾರ ಹಸ್ತಾಂತರ ಮಾಡಲಿಲ್ಲ. ಪಕ್ಷದ ನಾಯಕಿ ನೊಬೆಲ್ ಶಾಂತಿ ಪುರಸ್ಕಾರ ವಿಜೇತೆ ಆಂಗ್ ಸಾನ್ ಸೂಕಿಯನ್ನು ಬಂಧನದಿಂದ ಬಿಡುಗಡೆ ಮಾಡಲಿಲ್ಲ, ೧೯೮೯ರಲ್ಲಿಯೇ ಆಕೆಯನ್ನು ಬಂಧನದಲ್ಲಿರಿಸಿತ್ತು. ೧೯೯೫ರಲ್ಲಿ ಆಕೆಯನ್ನು ಕಾರಾಗೃಹದಿಂದ ಬಿಡುಗಡೆ ಮಾಡಿ ಮತ್ತೆ ಗೃಹಬಂಧನದಲ್ಲಿರಿಸಿತ್ತು. ಹದಿನೈದು ವರ್ಷಗಳಾದ ಮೇಲೆ ಈಗ ಆಕೆಯನ್ನು ಬಿಡುಗಡೆ ಮಾಡಲಾಗಿದೆ.

ಮೂವತ್ತು ವರ್ಷಗಳ ನಂತರ ಈ ವರ್ಷ ನವೆಂಬರ್ ೭ರಂದು ಮ್ಯೆನ್ಮಾರ್‌ನಲ್ಲಿ ಮಿಲಿಟರಿ ಸರ್ವಾಧಿಕಾರ ಚುನಾವಣೆಗಳನ್ನು ನಡೆಸಿದೆ ಹೊಸ ಸಂವಿಧಾನದ ಪ್ರಕಾರ. ಈ ಹೊಸ ಸಂವಿಧಾನ ಮಿಲಿಟರಿ ಸರ್ವಾಧಿಕಾರವನ್ನು ಮತ್ತಷ್ಟು ದೃಢಗೊಳಿಸುವ ಕುತಂತ್ರವಾಗಿದೆ. ಚುನಾವಣೆ ಫಲಿತಾಂಶ ಇನ್ನು ಹೊರಬೀಳದಿದ್ದರೂ ಮಿಲಿಟರಿ ಮತ್ತು ಅದರ ಬೆಂಬಲಿಗರೇ ಪಾರ್ಲಿಮೆಂಟಿನಲ್ಲಿ ತುಂಬಿರುವುದರಲ್ಲಿ ಸಂಶಯವಿಲ್ಲ. ಏಕೆಂದರೆ, ಹೊಸ ಸಂವಿಧಾನದ ಪ್ರಕಾರ ಆಂಗ್ ಸಾನ್ ಸೂಕಿಯ ನ್ಯಾಷನಲ್ ಡೆಮಾಕ್ರಟಿಕ್ ಲೀಗ್ ಚುನಾವಣೆಯಲ್ಲಿ ಭಾಗವಹಿಸುವಂತಿಲ್ಲ. ಮತ್ತೆ ಪಾರ್ಲಿಮೆಂಟಿನ ಕಾಲುಭಾಗ ಸ್ಥಾನಗಳನ್ನು ಮಿಲಿಟರಿಗೆ ಮೀಸಲು ಇರಿಸಲಾಗಿದೆ. ಉಳಿದ ಸ್ಥಾನಗಳಿಗೆ ಸ್ಪರ್ಧಿಸಿರುವ ಪಕ್ಷಗಳು ಯೂನಿಯನ್ ಸಾಲಿಡಾರಿಟಿ ಅಂಡ್ ಡೆವಲಪ್‌ಮೆಂಟ್ ಪಾರ್ಟಿ ಮತ್ತು ನ್ಯಾಷನಲ್ ಯೂನಿಟಿ ಪಾರ್ಟಿ ಎರಡೂ ಕೂಡ ಮಿಲಿಟರಿಯೊಂದಿಗೆ ನಿಕಟ ಸಂಬಂಧ ಹೊಂದಿವೆ. ಈ ಪಕ್ಷಗಳಲ್ಲಿರುವವರು ಹೆಚ್ಚಾಗಿ ಮಾಜಿ ಸೈನ್ಯಾಧಿಕಾರಿಗಳು. ಹಾಗಾಗಿ ಈ ಚುನಾವಣೆಗಳು ನಿರರ್ಥಕ. ಉಳಿದಂತೆ ಇರುವ ಪ್ರಾದೇಶಿಕ ಶಾಸನಸಭೆಗಳಲ್ಲೂ ಪರಿಸ್ಥಿತಿ ಭಿನ್ನವಾಗಿಲ್ಲ, ಚುನಾವಣೆಗಳನ್ನು ಬಹಿಷ್ಕರಿಸಲು ಆಂಗ್ ಸಾನ್ ಸೂಕಿ ಕರೆ ನೀಡಿದ್ದರು. ಅದರಿಂದಾಗಿಯೇ ಮತದಾನದ ಸಂಖ್ಯೆ ಶೇಕಡ ೫೦ನ್ನು ದಾಟಲಿಲ್ಲ. ಇದು ಜನತಂತ್ರದ ಲಕ್ಷಣ ಹೇಗಾದೀತು.



ಇಷ್ಟೆಲ್ಲಾ ಆದರೂ ನಾಗರಿಕ ಜಗತ್ತು ಮ್ಯೆನ್ಮಾರ್‌ನ ಮಿಲಿಟರಿ ಸರ್ವಾಧಿಕಾರದ ಬಗ್ಗೆ ಮೃದುಧೋರಣೆ ತಳೆದಿರುವುದು ಸೋಜಿಗದ ಸಂಗತಿ. ಮಿಲಿಟರಿ ಸರ್ವಾಧಿಕಾರ ಆ ದೇಶದ ಆಂತರಿಕ ವಿಚಾರ ಎಂಬ ವಿಚಾರ ಬೇರೆ. ಆದರೆ ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿಯುವ ದೇಶಗಳೂ ಕೂಡ ಸರ್ವಾಧಿಕಾರದ ಮೇಲೆ ಒತ್ತಡವನ್ನು ತರುತ್ತಿಲ್ಲ. ತೋರಿಕೆಗೆ ಅಮೆರಿಕಾ ಆರ್ಥಿಕ ದಿಗ್ಬಂಧನ ಹೇರಿದೆ. ನೆರೆ ರಾಷ್ಟ್ರಗಳಾದ ಭಾರತ ಮತ್ತು ಚೀಣಾ ಮಿಲಿಟರಿ ಅಧಿಕಾರದೊಂದಿಗೆ ವ್ಯವಹಾರಗಳನ್ನು ನಡೆಸುತ್ತಿವೆ. ಭಾರತದ ಮಟ್ಟಿಗೆ ಈಶಾನ್ಯ ಭಾರತದ ಬಂಡಾಯಗಾರರಿಗೆ ಮ್ಯೆನ್ಮಾರ್‌ನ ಮಿಲಿಟರಿ ಅಧಿಕಾರ ಆಶ್ರಯ ನೀಡದಿರುವುದು ವರದಾನವಾಗಿದೆ. ಹಾಗಾಗಿ ಭಾರತ ಸರಕಾರ ಮಿಲಿಟರಿ ಸರ್ವಾಧಿಕಾರದ ಮೇಲೆ ಯಾವುದೇ ಒತ್ತಡ ತಾರದೆ ಇದೆ. ಇದು ಇಂದಿನ ಶೋಚನೀಯ ಪರಿಸ್ಥಿತಿ. ಇದರಿಂದ ಮ್ಯೆನ್ಮಾರ್‌ನಲ್ಲಿ ನ್ಯಾಷನಲ್ ಡೆಮಾಕ್ರಟಿಕ್ ಲೀಗ್ ಪಕ್ಷ ಏಕಾಂಗಿಯಾಗಿ ಪ್ರಜಾತಂತ್ರಕ್ಕಾಗಿ ಹೋರಾಟ ಮುಂದುವರಿಸಬೇಕಾಗಿ ಬಂದಿದೆ. ಸದ್ಯಕ್ಕಂತೂ ಮ್ಯೆನ್ಮಾರ್ ಜನತೆಗೆ ಮಿಲಿಟರಿ ಆಡಳಿತೆಯಿಂದ ಮುಕ್ತಿ ಇದ್ದಂತೆ ಕಾಣುವುದಿಲ್ಲ. ಚುನಾವಣೆ ನಡೆಸಿ ಕೈಗೊಂಬೆ ಸರಕಾರ ಸ್ಥಾಪಿಸಿದೆ ಅಲ್ಲವೆ.

## ಅಮೆರಿಕಾದ ಹೀನಕೃತ್ಯ ಇನ್ನಷ್ಟು ಬಹಿರಂಗ

**ಇ**ರಾಕಿನಲ್ಲಿ ಅಮೆರಿಕಾ ನಡೆಸಿರುವ, ನಡೆಸುತ್ತಿರುವ ಹೀನಕೃತ್ಯಗಳಿಗೆ ಕೊನೆಯೇ ಇಲ್ಲ. ಇದರಲ್ಲಿ ಬಲಿಪಶುಗಳಾಗುತ್ತಿರುವವರು ನಾಗರಿಕರು. ಸುಮಾರು ಒಂದೂವರೆ ಲಕ್ಷಕ್ಕೂ ಮೀರಿ ನಾಗರಿಕರು ಯುದ್ಧದಲ್ಲಿ ಮಡಿದಿದ್ದಾರೆ ಎಂದು ಲೆಕ್ಕಹಾಕಲಾಗಿದೆ. ವರ್ಷಗಳು ಉರುಳಿದರೂ ಜನರ ಮೇಲೆ ನಡೆಯುತ್ತಿರುವ ಹಿಂಸಾಚಾರ ಮಾತ್ರ ನಿಂತಿಲ್ಲ, ಈ ಹಿಂಸಾ ಪ್ರಕರಣಗಳಲ್ಲಿ ನೇರವಾಗಿ ಅಮೆರಿಕಾದ ಸೈನಿಕರು ಮತ್ತು ಅವರು ತರಬೇತಿಗೊಳಿಸಿ ಸ್ಥಾಪಿಸಿರುವ ಇರಾಕಿ ಮಿಲಿಟರಿ ಪಾಲ್ಗೊಳ್ಳುತ್ತಿವೆ. ಇದರ ಖಾಸಗಿಯಾಗಿ ನೇಮಕಗೊಂಡಿರುವ ಕೂಲಿ ಸಿಪಾಯಿಗಳ ಉಪಟಳ ಬೇರೆ. ಅಮೆರಿಕಾದ ಸೈನಿಕರು ಇರಾಕಿ ಯುದ್ಧ ಕೈದಿಗಳ ಮೇಲೆ ನಡೆಸಿದ ಅತ್ಯಾಚಾರ, ನೀಡಿದ ಚಿತ್ರಹಿಂಸೆ ಹಿಂದೆಯೇ ಜಗಜ್ಜಾಹೀರವಾಗಿದೆ. ನಾಗರಿಕರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳು ಮುಂದುವರಿಯುತ್ತಿವೆ.

ವಿಕಿಲೀಕ್ಸ್ ವೆಬ್‌ಸೈಟ್ ಬಹಿರಂಗಗೊಳಿಸಿರುವ ಎರಡು ಕಂತುಗಳ ದಸ್ತಾವೇಜುಗಳು ಇರಾಕಿನಲ್ಲಿ ನಾಗರಿಕರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳನ್ನು ವಿವರಿಸುವುದಲ್ಲದೆ, ಇದರಲ್ಲಿ ಅಮೆರಿಕಾದ ಸೈನಿಕ ಕೈವಾಡವನ್ನು ಎತ್ತಿತೋರಿಸುತ್ತದೆ. ಜೂಲಿಯನ್ ಅಸ್ಸಾಂಜ್ ಸಂಸ್ಥಾಪಿಸಿರುವ ಈ ವಿಕಿಲೀಕ್ಸ್ ವೆಬ್‌ಸೈಟ್ ಅಮೆರಿಕಾದ ಯುದ್ಧಾಪರಾಧಗಳನ್ನು ಬಹಿರಂಗಗೊಳಿಸುವ ೪,೦೦,೦೦೦ ದಸ್ತಾವೇಜುಗಳನ್ನು ಪ್ರಕಟಿಸಿದೆ. ಇವು ಇರಾಕಿನ ಅಮಾಯಕ ನಾಗರಿಕರ ಮೇಲೆ ನಡೆಯುತ್ತಿರುವ ಹಿಂಸಾಚಾರಗಳಿಗೆ ಸಾಕ್ಷ್ಯ ಒದಗಿಸುತ್ತವೆ. ಅಮೆರಿಕಾದ ಆಡಳಿತೆಗೆ ಇದು ತಿಳಿದಿದ್ದರೂ ಅದು ಯಾವುದೇ ಕ್ರಮಕೈಗೊಂಡಿಲ್ಲ, ಬದಲಾಗಿ ಅದು ಈ ಸಾಕ್ಷ್ಯಾಧಾರಗಳನ್ನು ನಿರಾಕರಿಸುತ್ತಿದೆ. ಈ ಬಗೆಯಲ್ಲಿ ದಾಖಲೆಗಳನ್ನು ಬಹಿರಂಗಗೊಳಿಸಿ ಇರಾಕ್ ಮತ್ತು ಆಫ್ಘಾನಿಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಮೆರಿಕನ್ ಸೈನಿಕರ ಜೀವಕ್ಕೆ ಅಪಾಯವಾಗುತ್ತಿದೆ ಎಂಬುದು ಅಮೆರಿಕಾದ ರಕ್ಷಣಾ ಇಲಾಖೆಯ ಅಂಬೋಣ. ವಿಕಿಲೀಕ್ಸ್ ವೆಬ್‌ಸೈಟ್ ಮತ್ತು ಅದರ ಸ್ಥಾಪಕ ಜೂಲಿಯನ್ ಅಸ್ಸಾಂಜ್ ಈಗ ಅಮೆರಿಕಾ ಸರಕಾರದ ಕೆಂಗಣ್ಣಿಗೆ ಗುರಿಯಾಗಿದ್ದಾರೆ. ಸ್ವೀಡನ್‌ನಿಂದ ಕಾರ್ಯ ನಿರ್ವಹಿಸುತ್ತಿರುವ ಈ ಸಂಸ್ಥೆಯ ಕಾರ್ಯಕ್ಕೆ ಈಗ ಆಪತ್ತು ಬಂದಿದೆ. ಅಮೆರಿಕಾ ಸರಕಾರದ ಒತ್ತಾಯದಿಂದ ಸ್ವೀಡನ್ ಸರಕಾರ ಕಿರುಕುಳ ನೀಡಲಾರಂಭಿಸಿದೆ. ಅಮೆರಿಕಾದ ಸಿಐಎ ಈ ವೆಬ್‌ಸೈಟ್ ಮೇಲೆ ನಿಗಾ ಇರಿಸಿದೆ. ಅಮೆರಿಕಾದ ಮಿಲಿಟರಿಯ ಇತಿಹಾಸದಲ್ಲಿ ಈಗ ಬಹಿರಂಗಗೊಳಿಸಿರುವ ದೌರ್ಜನ್ಯಗಳ ದಸ್ತಾವೇಜುಗಳು ಅತಿ ಬೃಹತ್ತಾದುದು ಎಂದು ಬಣ್ಣಿಸಲಾಗಿದೆ. ಈ ದಾಖಲೆಗಳು ಪ್ರತ್ಯಕ್ಷದರ್ಶಿಗಳು ನೀಡಿರುವ ವರದಿಗಳಾಗಿವೆ. ಅಮೆರಿಕಾದ ಸೈನಿಕರ ಸಮ್ಮುಖದಲ್ಲಿ ಇರಾಕಿ ಸೈನಿಕರು ಸಾವಿರಾರು ಇರಾಕಿ ನಾಗರಿಕರ ಮೇಲೆ ದೌರ್ಜನ್ಯ ಎಸಗಿದ್ದಾರೆ. ೨೦೦೪ರಿಂದ ೨೦೦೮ರ ವರೆಗೆ ೧೫,೦೦೦ ಇರಾಕಿ ನಾಗರಿಕರು ಹಿಂಸಾಚಾರಕ್ಕೆ ಬಲಿಯಾಗಿ ಅಸುನೀಗಿದ್ದಾರೆ. ಈ ದೌರ್ಜನ್ಯಗಳನ್ನು ಸಾಕ್ಷೀಕರಿಸುವ ಚಿತ್ರಗಳೂ ಪ್ರಕಟವಾಗಿವೆ. ಪ್ರಜಾಪ್ರಭುತ್ವ ಮತ್ತು ಮಾನವ ಹಕ್ಕುಗಳ ಪಾಲಕನೆಂದು ಕರೆದುಕೊಳ್ಳುವ ಅಮೆರಿಕಾ ಸರಕಾರ ನಡವಳಿಕೆ ಇಂಥದ್ದು.

ಸೀಯಾರ್ಕೆ
'ಚೌಬೀನ', ೮೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# "ಗಂಗವ್ವ-ಗೌರವ್ವ ಜೂಜನಾಡ್ಯಾರೆ..." ನೇಪಥ್ಯಕ್ಕೆ ಸರಿದ ಕಲಾವಿದರು

ಡಾ|| ಮಲ್ಲಿಕಾರ್ಜುನ ಕುಂಬಾರ

ಅವತ್ತು ಬೆಳಗಿನ ಹೊತ್ತು ನಮ್ಮ ಮನೆ ಮುಂದೆ ಓರ್ವ ಮಹಿಳೆ ಕೊರಳಲ್ಲಿ ಏನೋ ಇಳಿಬಿಟ್ಟುಕೊಂಡು ''ಗಂಗಿ ಗೌರಿ ಜ್ಯೂಜನಾಡ್ಯಾರೆ, ಗೌರವ್ವ ಕುಂತಾಳ, ಗಂಗವ್ವ ನಿಂತಾಳ...'' ಹೀಗೆ ಸುಂದರವಾದ ಹಾಡನ್ನು ಹಾಡುತ್ತಾ ತನ್ನ ಕೊರಳಲ್ಲಿ ಇಳಿಬಿಟ್ಟ ಗೊಂಬೆಗಳ ಮಧ್ಯದಲ್ಲಿರುವ ಬೀಸುಕಲ್ಲನ್ನು ಈ ಗೊಂಬೆಗಳಿಂದ ತಿರುಗಿಸುತ್ತಾ, ಹಾಡು ಹಾಡುತ್ತಾ, ನಂತರ ''ಯವ್ವಾ-ತಾಯಿ ನೀಡ್ರಿ'' ಎಂದು ಹೇಳಿದಾಗ, ನನ್ನ ಗಮನ ಸೆಳೆದು ಒಳಗಿನಿಂದ ಹೊರಗೆ ಬಂದು ನೋಡಿದರೆ, ಹರಿದು ತುಂಡಾಗಿ ಮಾಸಿದ ಸೀರೆ, ಅದು ಅಲ್ಲಲ್ಲಿ ತೂತು ಬಿದ್ದು ಆ ಸೀರೆ ಆಕೆಯ ಸ್ಥಿತಿಯನ್ನು ಪ್ರತಿಬಿಂಬಿಸುತ್ತಿತ್ತು. ಸುಕ್ಕುಗಟ್ಟಿದ ಮುಖ, ಬಗಲಲ್ಲಿ ಹಸಿವೆ ಹಿಂಗಿಸಲು ಇಳಿಬಿಟ್ಟ ಜೋಳಿಗೆ, ಬಡತನವೇ ಸಾಕಾರವಾಗಿ ನಿಂತಂತೆ ಈಕೆ ನಿಂತಿದ್ದಳು. ನಾವು ನೀಡುವದನ್ನು ಆಸೆಗಣ್ಣಿನಿಂದ ನೋಡುವ, ಆ ನೋಟ ನನ್ನ ಮನಕಲುಕಿತು. ಈಕೆಯನ್ನು ಕೂಡ್ರಲು ಹೇಳಿ, ಹಾಡು ಹಾಡಲು ಹೇಳಿದರೂ ಆಕೆ ಕೂಡ್ರದೇ ನಿಂತೇ ಹಾಡು ಹಾಡಿದಳು. ಅದು ಗಂಗೆ-ಗೌರಿಯರ ಜಗಳದ ಕಥನ ಗೀತೆಯಾಗಿತ್ತು.

ವೇಷಗಾರರಾಗಿ ಅಲೆಮಾರಿಯಾದ ಈ ಜನರು ಗಂಗೆ-ಗೌರಿಯವರ ಸಂವಾದವನ್ನು ಸುಂದರವಾಗಿ ಹಾಡುತ್ತಾ ಊರೂರು ಅಲೆದು ಹೊಟ್ಟೆಹೊರೆದು ಕೊಳ್ಳುತ್ತಿದ್ದಾರೆ. ಜನರ ದೃಷ್ಟಿಯಲ್ಲಿ ಇಂಥವರು ಭಿಕ್ಷುಕರಾಗಿ, ಕೀಳಾಗಿ ಕಾಣಲ್ಪಡುತ್ತಾರೆ. ಇದರಿಂದ ಇಂತಹ ಹಲವಾರು ಜನಪದ ಕಲಾವಿದರು ನಾಗರಿಕ ಸಮಾಜದಿಂದ ನೇಪಥ್ಯಕ್ಕೆ ಸರಿಯುತ್ತಿದ್ದಾರೆ. ಅಕ್ಷರಸ್ಥರೆಂಬ ರಾಕ್ಷಸರ ಕಣ್ಣಲ್ಲಿ ಇಂಥವರು ತೀರಾ ಕೀಳಾಗಿ, ಹೀನರಾಗಿ ನೋಡಲ್ಪಡುತ್ತಾರೆ. ಕುರಿತೋದದಿದ್ದರೂ ಕಾವ್ಯ ಹೇಳುವಂತಹ ಇಂತಹ ವೃತ್ತಿಗಾರರು ಇಂದು ಶಾಶ್ವತವಾಗಿ ಕಣ್ಮರೆಯಾಗುತ್ತಿದ್ದಾರೆ. ನಾಗರಿಕ ಜನರ, ನಾಗರಿಕತೆಯ ಗಾಳಿಗೆ ತಿರಸ್ಕೃತರಾದ ಕಾರಣ ಈ ಜನರು ತಮ್ಮ ಬದುಕಿನ ದಾರಿಯನ್ನು ಬದಲಾಯಿಸಿಕೊಂಡಿದ್ದಾರೆ.

ಕರ್ನಾಟಕದ ಜನಪದರ ನಿತ್ಯ ಜೀವನದಲ್ಲಿ ಕಲೆಗಳಿಗೆ ವಿಶಿಷ್ಟ ಸ್ಥಾನವಿದೆ. ಇಂತಹ ಕಲಾವಿದರಿಗೆ ಕಲೆಯ ಬೆಲೆಗಿಂತ ಅನ್ನ ಬಟ್ಟೆಯ ಚಿಂತೆ ಮುಖ್ಯ ವಾಗಿರುತ್ತದೆ. ಈ ಬದುಕಿನ ಹೋರಾಟದ ನಡುವೆಯೂ ಅವರು ಕಲೆಯನ್ನು ಕಡೆಗಣಿಸಿಲ್ಲ. ಈ ವರ್ಗವನ್ನು ಕೀಳಾಗಿ ಕಾಣುವದು ಒಂದೆಡೆ ಇದ್ದರೆ, ಈ ಕಲೆಯನ್ನು ಮೆಚ್ಚಿ ಅದನ್ನು ಜೀವಂತವಾಗಿರಿಸಿ ಪ್ರೋತ್ಸಾಹಿಸುವ ವರ್ಗ ಇಲ್ಲವೇ ಇಲ್ಲ ಎನ್ನುವಂತಿಲ್ಲ. ಎಲ್ಲಾ ಕಾಲಗಳಲ್ಲಿ ಹಳ್ಳಿಹಳ್ಳಿ ಗಳಿಗೆ ಅಲೆದು ಹಾಡು ಹಾಡುತ್ತಾ ಇವರು ತಿರುಗುತ್ತಾರೆ. ಮನೆಯ ಮುಂದೆ ನಿಂತು ಯಾವುದಾದರೂ ಕಥನ ಗೀತೆಯ ನಾಲ್ಕಾರು ಸಾಲುಗಳನ್ನು ಹಾಡುತ್ತಾರೆ. ಕಥೋಪಜೀವಿ ಗಳಾದ ಇವರಿಗೆ ನೀಡುವದು, ಅವರು ಬೇಡುವದು ಇದು ನಡೆದು ಬಂದ ಪದ್ಧತಿಯಾಗಿದೆ. ಆದರೆ ಇಂದು ಇಂತಹ ಹಲವಾರು ಕಲಾವಿದರು ಕೇವಲ ಭಾವಚಿತ್ರಗಳಲ್ಲಿ ಕೂಡ ಉಳಿಯುವದು ಅಸಾಧ್ಯವಾಗುತ್ತಿದೆ.

ಅಲೆಮಾರಿ ವೇಷಗಾರರಾದ ಈ ಜನರಲ್ಲಿ ಹೆಣ್ಣುಮಕ್ಕಳು ಗಂಗೆ-ಗೌರಿ ಸಂವಾದವನ್ನು ಹೇಳುತ್ತ ಹೊಟ್ಟೆ ಹೊರೆದುಕೊಳ್ಳುತ್ತಾರೆ. ಗಂಡಸರು ಬೇರೆ ವೇಷಹಾಕಿ ಊರೂರು ಅಲೆಯುತ್ತಾರೆ. ಈ ಹೆಣ್ಣುಮಕ್ಕಳು ಕುತ್ತಿಗೆಗೆ ತೂಗುಬಿಟ್ಟ ಮಣಿಯ ಮೇಲೆ ಒಂದೆಡೆ ಗಂಗೆ, ಅದರ ಎದುರು ಗೌರಿ, ಮಧ್ಯೆ ಬೀಸುವ ಕಲ್ಲು, ಮತ್ತೊಂದೆಡೆ ಶಿವನ ಮೂರ್ತಿ ಇರುತ್ತವೆ. ಚಿಕ್ಕದಾದ ಈ ಮೂರ್ತಿಗಳನ್ನು ಕಿಟ್ಟದಿಂದ ಮಾಡಿರುತ್ತಾರೆ. ಇಲ್ಲವೇ ಬಟ್ಟೆತುಂಡು ಸೆಗಣಿಯನ್ನು ಸೇರಿಸಿ ರೂಪ ನೀಡಿ ಬಣ್ಣ ಹಚ್ಚಿರುತ್ತಾರೆ. ಸಮೀಪದಿಂದ ನೋಡಿದಾಗ ಮಾತ್ರ ಇವುಗಳು ಕಾಣುತ್ತವೆ. ಶಿವನ ಹೆಂಡಂದಿರಾದ ಗಂಗೆ-ಗೌರಿಯರ ಜಗಳವನ್ನು ಹಾಡುಗಳ ಮೂಲಕ ಹಾಡುತ್ತಾ ಎದುರು ಮೂರ್ತಿಗಳ ಕೆಳಗಿನ ಗಗ್ಗರಿಯಂತಹ ಬಟ್ಟೆಯಲ್ಲಿ ಕೈ ಹಾಕಿ ಈ ಮೂರ್ತಿಗಳ ಕೆಳಗಿರುವ ಕೀಲನ್ನು ತಿರುವಿದಾಗ ಗಂಗೆ-ಗೌರಿಯರೇ ಬೀಸುವ ಕಲ್ಲು ತಿರುಗಿಸಿದಂತೆ ಕಾಣುತ್ತದೆ.

*ಶಿವ ಶಿವದಲ್ಲಿ ಶಿವ ಮಠದಲ್ಲಿ*
*ಶಿವರಾಯ, ಗಂಗವ್ವ ಗೌರವ್ವ*
*ಜೂಜನಾಡ್ಯಾರೆ।*
*ಗಂಗೆಗೆ ಗೌರಿಗೆ ಜಗಳ ಹಚ್ಚಿದಿ*
*ವಾದವ ಹಚ್ಚಿದಿ ಮಾದೇವ*
*ಸುಮ್ಮನೆ ಕುಂತೆಲ್ಲ।*
*ಜಗಳ ಇಲ್ಲದ ಮನಿಗೆ ಜಗಳ ಹಚ್ಚಿದಿ*
*ವಾದ ಇಲ್ಲದ ಮನಿಗೆ ವಾದ ಹಚ್ಚಿದಿ*
*ಕಲ್ಲು ಕುಂತಂಗ ಕುಂತೆಲ್ಲೊ ಶಿವನೆ*
*ಬಂಡಿ ಬಿದ್ದಂಗ ಬಿದ್ದೆಲ್ಲೊ ಶಿವನೆ...*
*ಗಂಗೆ ಗೌರಿ ಜೂಜನಾಡ್ಯಾರೊ...*

– ಎಂಬ ಸ್ವಾರಸ್ಯಕರವಾದ ಹಾಡನ್ನು ಹಾಡುತ್ತಾರೆ. ಇದು ಅನಕ್ಷರಸ್ಥರ ಅಲಿಖಿತ ಸಾಹಿತ್ಯ. ಇಂತಹ ಹಾಡಿನ ಮೂಲಕ ಶುದ್ಧಾಂಗ ಜನಪದ ಸವತಿಯರಾದ ಈ ಗರತಿಯರು ಹಳ್ಳಿಯ ಸವತಿಯರಾಗಿ ಗಂಗೆ-ಗೌರಿಯರ ರೂಪ ತಾಳಿದ್ದಾರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಈ ಜನಪದ ಸಾಹಿತ್ಯದ ಗಂಗೆ-ಗೌರಿ ಸಂವಾದವು ಮುಂದೆ ಹಲವಾರು ರೂಪಗಳಲ್ಲಿ ರೂಪುಗೊಂಡು ತ್ರಿಪದಿ, ಕೋಲಾಟ, ದುಂದುಮೆ, ಡೊಳ್ಳಿನ ಪದಗಳಂತಹ ವಿವಿಧ ಸ್ವರೂಪಗಳಲ್ಲಿ ರೂಪುತಾಳಿ ಲಿಖಿತ ಸಾಹಿತ್ಯವಾಗಿಯೂ ಕೂಡ ಬೆಳೆದುಬಂದಿತು. ಹಾಡುಗಬ್ಬವಾಗಿ ಶಿವನ ಪುರಾಣದ ಉಪಕಥೆಯಲ್ಲಿ ಈ ಸಂವಾದವು ತನ್ನ ಸಾಮಾಜಿಕ ಪರಿಸರಕ್ಕೆ, ತನ್ನ ಸಂಸ್ಕೃತಿಗೆ ಹೊಂದಿಸಿ ಕೊಂಡು ಗಂಗೆ-ಗೌರಿ ಸಂವಾದವು ಪ್ರಚಲಿತವಾಯಿತು. ಇಬ್ಬರು ಹೆಂಡರುಳ್ಳ ಶಿವನಿಗೂ ಈ ಪರದಾಟ ತಪ್ಪಿದ್ದಲ್ಲವೆಂದು ಕವಿಯು ಬಿಂಬಿಸುತ್ತಾನೆ. ಈ ಕಥೆಯನ್ನು



ಸೊಂಬಿದಾಸರು ಕಥನಗೀತೆಯಾಗಿ ಹಾಡುತ್ತಾರೆ.

ಈ ಕಥೆ ಹೀಗಿದೆ – ಒಮ್ಮೆ ಗೌರಿ ಮುಟ್ಟಾಗಿರುತ್ತಾಳೆ. ಗಂಗೆ ಗೌರಿಯ ಜೊತೆ ಜಗಳವಾಡಿ ತವರಿಗೆ ಹೋಗಿರುತ್ತಾಳೆ. ಗೌರಿಗೆ ಸ್ನಾನವಿಲ್ಲ, ಹೇಸಿಕೆ, ಬೇಸರಿಕೆ ಬಂದು ಗಂಗೆಗೆ ಮರಳಿಬರಲು ಹೇಳಿ ಕಳಿಸುತ್ತಾಳೆ. ಗಂಗೆ ಬಿಂಕದಿಂದ ಬಂದು ಗೌರಿಗೆ ನೀರು ಹಾಕದೇ ಸವತಿ ಮತ್ಸರದಿಂದ ಚುಚ್ಚುಮಾತನ್ನಾಡುತ್ತಾಳೆ. ಕೊನೆಗೆ ಗೌರಿಯು ಗಂಗೆಗೆ ಶರಣಾದಾಗ, ಗಂಗೆಯ ಮನ ಕರಗಿ ಗೌರಿಯ ಹತ್ತಿರ ಹರಿದುಹೋಗದೇ ಹಳ್ಳ ಕೊಳ್ಳದಲ್ಲಿ ನೀರಾಗಿ ನಿಲ್ಲುತ್ತಾಳೆ. ಗೌರಿ ಈ ನೀರಿನಲ್ಲಿ ಜಳಕಮಾಡಿ ತನ್ನ ಮಲಿನತೆಯನ್ನು ಕಳೆದುಕೊಳ್ಳುತ್ತಾಳೆ. ಗಂಗೆ-ಗೌರಿಯರ ಸಂವಾದ ಇಲ್ಲಿ ಹಾಡಿನ ರೂಪದಲ್ಲಿ ಹರಿದುಬರುತ್ತದೆ. ಇಲ್ಲಿರುವ ಸರಸದ, ಬಿರುಸಿನ ಬಯ್ಗಳ ಒಂದೆರಡು ಸಾಲುಗಳು ಹೀಗಿವೆ :

*ನನಕೂಟ ಸರಿ ಏನೇ ? ಬೆಸ್ತರ ಮಗಳೆ ?*
*ಬೆಸ್ತರ ಮಗಳಾದರೆ ಕುಂದೇನು ? ತೊರೆ,*
*ಓಡಿ ಬಂದೆಲ್ಲಾ ನನ್ನ ಸವತಿ ಗಂಗೆ,*
*ನಾ ಓಡಿ ಬರಲಿಲ್ಲ ; ಶಿವನಾಗೆ ತಂದ...*

– ಹೀಗೆ ಕೈ ಕೈ ಹಿಡಿದು ಕೆಣಕಾಡಿ, ಜಡೆಯನೆಳೆದಾಡಿ ಜಗಳವಾಡುತ್ತಾರೆ. ಇದು ಸವತಿಮತ್ಸರದ ನಮ್ಮ ಸಮಾಜದ ಬೀದಿ ಜಗಳವಾಡುವ ದೃಶ್ಯವನ್ನು ಕಣ್ಣಿಗೆ ಕಟ್ಟುತ್ತದೆ. ನಂತರ ಅವರು ಸವತಿಯ ಮತ್ಸರ ಮರೆತು ಒಂದಾಗಿ ಬಾಳುತ್ತಾರೆ. ಇವರ ಜಗಳ ಸುಖಾಂತ್ಯದಲ್ಲಿ ಮುಗಿದಾಗ ಶಿವನು ಗೌರಿಗೆ, ''ನೀನು ಬ್ರಾಹ್ಮಣರ ಮನೆ ಸೇರಿ ಗೌರಿ ಹಬ್ಬಕ್ಕೆ ಬಾ'', ಎಂದರೆ ಗಂಗೆಗೆ ''ನೀನು ಬೆಸ್ತರ ಮನೆ ಸೇರಿ ಮಾರಿ ಹಬ್ಬಕ್ಕೆ ಬಾ'' ಎಂದು ಹೇಳಿಕಳಿಸುತ್ತಾನೆ. ಇದು ಈ ಕಥೆಯ ಸಾರ.

ಇದೇ ರೀತಿ ಶಿವಗಂಗೆಯ ತರಳ ಚರಪತಿ ಎಂಬ ಕವಿಯು ಇದೇ ಸಂವಾದವನ್ನು ಹಾಡುಗಬ್ಬವಾಗಿ ರಚಿಸಿದ್ದಾನೆ. ಅದರ ಸಾರ ಹೀಗಿದೆ – ಕೈಲಾಸವಾಸಿ ಶಿವನಿಗೆ ಗೌರಿಯಿಂದ ಮಕ್ಕಳಾಗಲಿಲ್ಲ. ಬಲ್ಲಿದನಾದ ನಾರದ ಮತ್ತು ಶಿವನು ಮಲೆಯಾಳಿ ವೇಷದ ಜೋಗಿಗಳಾಗಿ ೧೪ ಲೋಕಗಳನ್ನು ಸುತ್ತುತ್ತಾರೆ. ಒಂದು ಬನದಲ್ಲಿ ಶಿವಪೂಜೆಗಾಗಿ ಕುಸುಮ ಕೊಯ್ಯುವ 'ಕುಸುಮಬಾಲೆ ಗಂಗೆ'ಯನ್ನು ಕಂಡ ಶಿವನು ಆಕೆಗೆ ಮರುಳಾಗುತ್ತಾನೆ. ನಾರದನು ಅವಳು, ''ಸುಟ್ಟ ಸುಣ್ಣವನ್ನು ಮಾರುವವನ ಮಗಳು, ತಣ್ಣೀರಲ್ಲಿ ಹುಟ್ಟಿ ಬೆಳೆದವಳು'' ಎಂದು ಪರಿಪರಿಯಾಗಿ ಹೇಳಿ, ಆಕೆಯ ಮೇಲೆ ಮೋಹ ಬೇಡವೆನ್ನುತ್ತಾನೆ. ಆದರೆ ಶಿವನು ಆಕೆಗೆ ಮನಸೋತು, ಗಂಗೆಯ ಜೊತೆಗೆ ಸಂವಾದಕ್ಕಿಳಿಯುತ್ತಾನೆ. ಗಂಗೆಯೂ ಸಹ ಶಿವನಿಗಾಗಿಯೇ ಹಂಬಲಿಸುತ್ತಿರುತ್ತಾಳೆ. ಆಕೆಗೆ ಶಿವನೇ ಈತನೆಂದು ತಿಳಿಯದು. ನಂತರ ಈತನೇ ಶಿವನೆಂದು ತಿಳಿದಾಗ ಗಂಗೆ ಶಿವನನ್ನು ವರಿಸುತ್ತಾಳೆ. ಈ ವಿಷಯ ಗೌರಿಗೆ ತಿಳಿಯಬಾರದೆಂದು, ಗಂಗೆಯನ್ನು ತನ್ನ ಜಡೆಯಲ್ಲಿ ಅಡಗಿಸಿಕೊಂಡು ಶಿವನು ಕೈಲಾಸಕ್ಕೆ ಬಂದಾಗ, ಗೌರಿ ಶಿವನ ಈ ಪರಿಯ ಸುಳಿವು ತಿಳಿದು ಶಿವನಿಗೆ ಉಪಚಾರವನ್ನು ಮಾಡುವ ನೆಪದಲ್ಲಿ ತಲೆಗೆ 'ಸುಡು ಸುಡು'ವ ನೀರು ಹಾಕಿದರೆ ತಲೆಗೆ ತಂಪು ಎಂದು ಶಿವನಿಗೆ ಹೇಳಿ ಆತನ ತಲೆಯಲ್ಲಿ ಕುಳಿತ ಗಂಗೆಗೆ ಕಟುಕಿ ಮಾಡುತ್ತಾಳೆ. ಶಿವನು ಗೌರಿಗೆ ಇದೆಲ್ಲಾ ಗೊತ್ತಾಗಬಾರದು ಎಂದು ಯತ್ನಿಸಿದರೂ, ಅದು ನಾರದನಿಂದ ಈ ಮೊದಲೇ ತಿಳಿದಿರುತ್ತದೆ. ಇದರಿಂದ ಗಂಗೆ-ಗೌರಿ ಕಲಹ ಆರಂಭವಾಗುತ್ತದೆ. ತಲೆಯಲ್ಲಿ ಗಂಗೆ, ತೊಡೆಯಲ್ಲಿ ಗೌರಿಯನ್ನು ಇಟ್ಟುಕೊಂಡ ಶಿವ ಈರ್ವರಿಗೂ ಜಗಳ ಹಚ್ಚಿ ಸಂತಸಪಡುತ್ತಾನೆ. ಈರ್ವರೂ ಪರಸ್ಪರ ಕಿತ್ತಾಡುತ್ತಾರೆ. ಗಂಗೆ ಕಬ್ಬೇರ ಕುಲದವಳು, ಗೌರಿ ಬ್ರಾಹ್ಮಣಳು. ಗಂಗೆಯನ್ನು ಜಾಗ ಬಿಡಿಸಬೇಕೆಂದು ಗೌರಿ ನೇರವಾಗಿ :

*ತಲೆಯೊಳಗಿದ್ದು ನೋಡುವವಳೂ ಇವಳ್ಯಾರೆ,*
*ಕುಲನವ ಹೇಳಿ ಎನ್ನಕೂಡ ದನಿದೋರೆ,*
*ಹೊಲೆಮಾದಿಗರ ಮಗಳೆ ಎಲೆ ಹೇಳೆ,*
*ನಿನಗೆ ಬಲಿಯ ಕೊಟ್ಟು ಉಣ್ಣಿಸುವೆನು ಇಳಿ ಬಾರೆ...*

ಎನ್ನುತ್ತಾಳೆ.

ಗಂಗೆ ಅಳುತ್ತಾ ಮರಳಿ ತನ್ನ ಮನೆಗೆ ತೆರಳುವ ಸನ್ನಾಹದಲ್ಲಿದ್ದಾಗ, ಶಿವ ಅವಳನ್ನು ರಮಿಸುತ್ತಾನೆ. ಹೂಂ ಆಗದು; ಈ ಗಂಗೆ ಗೌರಿ ಕಲಹ ಹೆಚ್ಚಿದಾಗ ಗಣಪತಿ ಮಧ್ಯೆ ಬಂದು, ''ಒಣ ಹೆಮ್ಮೆ ಅಹಂಭಾವ ತರವಲ್ಲ, ಶಿವನೇ ಸರ್ವೋತ್ತಮ'', ಎಂದು ವಿನಂತಿಸುತ್ತಾನೆ. ಶಿವನೆದುರು ತಾವೆಷ್ಟು ಸಣ್ಣವರೆಂದು ತಿಳಿದು ಜಗಳವನ್ನು ನಿಲ್ಲಿಸುತ್ತಾರೆ. ನಂತರ ಒಂದಾಗುತ್ತಾರೆ. ಇಲ್ಲಿ ಗೌರಿ ಶಿವನ ಕ್ರಿಯಾಶಕ್ತಿಯಾದರೆ, ಗಂಗೆ ಜ್ಞಾನಶಕ್ತಿಯಾಗಿ ರೂಪಗೊಳ್ಳುತ್ತಾಳೆ. ಈ ಕಥೆಯು ಶೃಂಗಾರದ ಮಡುವಾಗಿದೆ. ಇದೇ ರೀತಿ ಗಂಗೆ-ಗೌರಿ ಸಂವಾದವು ಬ್ರಹ್ಮಾಂಡ ಪುರಾಣದಲ್ಲಿ ಕೂಡ ಪ್ರಸ್ತಾಪಿತವಾಗಿದೆ. ಮತ್ತೊಂದು ಪುರಾಣದ ಪ್ರಕಾರ ಹಿಮಾಲಯದ ಗಂಗೆ-ಗೌರಿಯರು ತಂದೆ ತಾಯಿಯರು ಸಹೋದರ- ಸಹೋದರಿಯರಾಗಿದ್ದಾರೆ.

ಗೋಕಾಕದ ಅನಂತಾಚಾರ್ಯರು, 'ಕೃಷ್ಣಪಾರಿಜಾತ'ದಿಂದ ಪ್ರಭಾವಿತರಾಗಿ 'ವೆಂಕಟೇಶ ಪಾರಿಜಾತ'ವನ್ನು ರಚಿಸಿದರು. ಅದರಲ್ಲಿ ಮೂಲ 'ಪಾರಿಜಾತ'ದ ಸೊಗಸು ಇರಲಿಲ್ಲ. ನಂತರ ಆತನು 'ಶಿವಪಾರಿಜಾತ'ವನ್ನು ರಚಿಸಿದರು. ಇದರಲ್ಲಿ ಗಂಗೆ-ಗೌರಿ ಸಂವಾದವು ಪ್ರಮುಖವಾಗಿದ್ದರೂ ಅದು ಜನಪ್ರಿಯವಾಗಲಿಲ್ಲ. ಹೀಗೆ ಹಲವಾರು ಬಗೆಯಲ್ಲಿರುವ ಗಂಗೆ-ಗೌರಿಯರ ಸಂವಾದಕ್ಕೆ ಮೂಲ ಇಂತಹ ಜನಪದ ವೃತ್ತಿ ಕಲಾವಿದರು ಶಿಷ್ಟಸಾಹಿತ್ಯಕ್ಕೆ ಪ್ರೇರಣೆ ನೀಡಿ ಜನಮಾನಸದಿಂದ ನೇಪಥ್ಯಕ್ಕೆ ಸರಿಯುತ್ತಿದ್ದಾರೆ. ಅವರೂ ಕೂಡ ಕಾಲನ ಕೈವಶವರ್ತಿಗಳಲ್ಲವೆ ? ಈಗೀಗ ಇಂತಹ ಕಲಾವಿದರು ಎಲ್ಲಿ ಹುಡುಕಿದರೂ ಸಿಗುವುದಿಲ್ಲ. ಈಗ ಅವರು ಬರಿ ನೆನಪಾಗಿ ಉಳಿಯುತ್ತಿದ್ದಾರೆ, ಅಷ್ಟೆ!


**ಡಾ|| ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ - ೫೮೨ ೨೩೦, ರೋಣ ತಾಲ್ಲೂಕು, ಗದಗ ಜಿಲ್ಲೆ


## ಮಾಜಿ – ಹಾಲಿ

ಎಷ್ಟು ಬೇಗ
ಸುಂದರಿಯರು
'ಮಾಜಿ' ಯಾಗುತ್ತಾರೆ;
ಅಧಿಕಾರಿಗಳು,
ರಾಜಕಾರಣಿಗಳು
'ಮಾಜಿ' ಯಾಗುತ್ತಾರೆ !
ಆದರೆ ಕವಿಯೊಬ್ಬ
ಉಳಿಯುತ್ತಾನೆ,
'ಹಾಲಿ' ಯಾಗಿ !


ಸಿ.ಪಿ.ಕೆ.





**ನೆ**ನಪು ಪುಟದಿ ಈಗ ನಾನು ಬಾಡಿದಂಥ ಹೂವು
ಸಹಬಾಳ್ವೆಯ ಕನಸು ಕಣ್ಣಲಿ ಕಂಡಂಥ ಹೂವು

ಒಣಗಿದರು ಇದೆ ಜೊತೆಯೆ ಮುಳ್ಳು ನೋಡು ಇನ್ನು ಇದರಾ
ಘಾಯ ಕೊಟ್ಟು ಕ್ರೂರತನದಿ ಕಾಡಿದಂಥ ಹೂವು

ಬಣ್ಣ ಗಂಧ ರೂಪವಿತ್ತು ಮನಸು ಮೆಚ್ಚುವಂಥ
ಜಗಕ್ಕೆ ಎಂದೊ ಗತದಿ ಮೋಡಿ ಮಾಡಿದಂಥ ಹೂವು

ಹರುಷದಾ ನಗೆ ಚೆಲ್ಲಿ ಇಲ್ಲಿ ಮನಸು ಗೆದ್ದಿತಲ್ಲ
ಕ್ಷಣಿಕ ಸರಿ ಪ್ರಿಯೆ ಬಾಳಗೀತೆ ಹಾಡಿದಂಥ ಹೂವು

ಇನ್ನು ಇದೆ ನನ್ನ ಜೊತೆಯೆ ನಿನ್ನ ಆ ಸಹಜವಾದ ಸ್ಪರ್ಶ
ನೆನಿಸು ನಿನಕರಿಕುಂತಲಲಿ ನಾ ಕಂಡಂಥ ಹೂವು

ನಿನಗೆ ಗೊತ್ತು ನನಗೆ ಗೊತ್ತು ಗತಿಸಿದ ಇತಿಹಾಸ
ಕಾಲಚಕ್ರದ ಕಾಲದಿ ಓಡಾಡಿದಂಥ ಹೂವು


**ಪ್ರಕಾಶಸಿಂಗ್ ರಜಪೂತ**
ಬಹುಭಾಷಾ ಕವಿ, ಶಶಿ ವಿಹಾರ ಕಾಂಪ್ಲೆಕ್ಸ್, ಡಾ|| ಮುಳವಾಡ ದವಾಖಾನೆ ಎದುರಿಗೆ
ಇಂಡಿ ರಸ್ತೆ, ವಿಜಾಪುರ - ೫೮೬ ೧೦೧



# ದಮನಿತ ದನಿಗಳ ಚಿಂತನ

ದುಡಿಮೆಯ ಮೇಲೆ ಬದುಕುವವರು ತಮ್ಮ ಹಕ್ಕು ಸ್ಥಾಪಿಸುವವರೆಗೂ ಸರಕುಗಳಾಗಿಯೇ ಉಳಿದು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಾರೆ. ದನಿ ಕಳೆದುಕೊಂಡ ಇಂಥವರು ತಮ್ಮ ದಮನಿತ ಸ್ಥಿತಿಯ ಬಗ್ಗೆ ಮಾತನಾಡಿದಲ್ಲಿ ಅದು ಸುಳ್ಳು ಹಾಗೂ ಅವಾಸ್ತವವೆಂದು ದಮನಿತರನ್ನು ಪ್ರತಿನಿಧಿಸುವ ದಣಿವರ್ಗದವರು ನಂಬಿಸುತ್ತಾರೆ. ಏನೂ ಇಲ್ಲದ ಇಂಥವರು ತಮ್ಮ ಹಸಿವಿಗಾಗಿ ತಮ್ಮ ಶ್ರಮವನ್ನಷ್ಟೇ ಆಸ್ತಿಯನ್ನಾಗಿ ಹೊಂದಿರುವುದರಿಂದ ಅದನ್ನು ಉಳ್ಳವರು ಖರೀದಿಸುತ್ತಾರೆ. ಶ್ರಮಕ್ಕಷ್ಟೆ ಒಡೆಯರಾದ ಹಾಗೂ ಅಸಂಘಟಿತರಾದ ಇವರು ಶ್ರಮದ ಮಾರುಕಟ್ಟೆಯನ್ನು ನಿಯಂತ್ರಿಸಬಹುದೆನ್ನುವ ಆಲೋಚನೆಯನ್ನು ಮಾಡುವುದಿಲ್ಲ. ಕಾರಣ, ಈ ಶ್ರಮದ ದನಿಯು ಶಕ್ತಿಹೀನವಾಗಿರುತ್ತದೆ. ದಮನಿತರ ದನಿ ಭಾಷೆಯಾಗುವುದಿಲ್ಲ.

ಡಾ|| ಡಿ. ಡೊಮಿನಿಕ್ ಅವರ 'ದಮನಿತ ದನಿಗಳ ಚಿಂತನ' ಎನ್ನುವ ಪುಸ್ತಕವು ಸೂಕ್ಷ್ಮ ತಿಳುವಳಿಕೆಗಳಿಂದ ಕೂಡಿದೆ. ಹುಸಿ ಸೆಕ್ಯುಲರ್ ಚಿಂತನೆಗಳು ಸಾಮಾಜಿಕ ವಾಸ್ತವವನ್ನು ಕಡೆಗಣಿಸಿ ಭ್ರಮೆಯನ್ನೇ ವಾಸ್ತವವೆಂದು ಮಂಡಿಸುತ್ತ ದುಡಿವ ಸಮುದಾಯಗಳನ್ನು ಸದಾ ತನ್ನ ಕಣ್ಗಾವಲಿನಲ್ಲಿಯೇ ಇಟ್ಟುಕೊಳ್ಳುವ ವ್ಯವಸ್ಥೆಯ ಹುನ್ನಾರಗಳನ್ನು ಇಲ್ಲಿನ ಹದಿಮೂರು ಲೇಖನಗಳು ತುಂಬಾ ತೀಕ್ಷ್ಣವಾಗಿ ಮಂಡಿಸುತ್ತವೆ. ದುಡಿವ ಮನಸ್ಸುಗಳು ಜೀತಗಾರಿಕೆಯಿಂದ ಅಥವಾ ಶೋಷಣೆಯಿಂದ ಬಿಡುಗಡೆ ಪಡೆಯಲು ಹವಣಿಸಿದರೂ ಕೊನೆಗೆ ಜೀತಗಾರರೇ ಅದನ್ನು ಒಪ್ಪಿ ಮುಂದುವರಿಸುತ್ತಾರೆ. ಭೌತಿಕ ಹಸಿವು ಹಾಗೂ ಅದನ್ನು ನಿಭಾಯಿಸಿಕೊಳ್ಳುವ ಆತುರದಲ್ಲಿಯೇ ಅವರ ಬದುಕು ಹಣ್ಣಾಗಿಬಿಡುತ್ತದೆ. ದುಡಿಮೆಯನ್ನು 'ಸರಕಾಗಿಸಿ' ಹಣವನ್ನು 'ಮೌಲ್ಯ'ವಾಗಿಸಿರುವ ವ್ಯವಸ್ಥೆಯಲ್ಲಿ ಜ್ಞಾನ-ವಿಜ್ಞಾನಗಳು ಸಾಮಾಜಿಕ ಬಂಡವಾಳ ಮತ್ತು ರಾಷ್ಟ್ರ ಪ್ರಭುತ್ವಗಳು ಹುಟ್ಟು ಹಾಕುವ ಲೋಕ ಒಪ್ಪಿತ ರಾಜಮಾರ್ಗಗಳಾಗಿರುತ್ತವೆ. ಇಂಥಲ್ಲಿ ದುಡಿಮೆ ಹಿಂದೆ ಸರಿದು ಹಣವಿಲ್ಲದವನಿಗೆ ಬೆಲೆಯಿಲ್ಲವಾಗಿ ಉಪೇಕ್ಷೆಗೆ ಒಳಗಾಗುತ್ತಿರುವ ಸಂಗತಿಗಳನ್ನು ಲೇಖಕರು ತುಂಬಾ ಪ್ರಾಯೋಗಿಕವಾಗಿ ವಿಶ್ಲೇಷಿಸಿದ್ದಾರೆ.

ದಮನಿತ ದನಿಗಳಿಗೆ ವ್ಯವಸ್ಥಿತ ಮರೆಗುಳಿತನವನ್ನು ಹೊದಿಸಿ ಅವರನ್ನು ಚರಿತ್ರೆಹೀನರನ್ನಾಗಿಯೂ, ಜ್ಞಾನಶೂನ್ಯರನ್ನಾಗಿಯೂ ಅಸ್ತಿತ್ವಹೀನರನ್ನಾಗಿಯೂ ಮಾಡುತ್ತಿರುವ ವ್ಯವಸ್ಥೆಯ ವಿರುದ್ಧ ಕಳೆದುಕೊಳ್ಳುವ ಭಯಬಿಟ್ಟು ಪಡೆದುಕೊಳ್ಳುವ ಛಲದಿಂದ ಸಮುದಾಯಗಳು ಹೋರಾಡಲು ಸಜ್ಜಾಗಬೇಕೆಂದು ಕರೆ ಕೊಡುತ್ತಾರೆ. ಇಂದು ಮೇಲ್ಮುಖ ಚಲನೆಗೆ, ಅಂತಸ್ತಿಗೆ, ಅಧಿಕಾರಕ್ಕೆ ಹಣವೇ ಪ್ರಮುಖವಾಗಿದೆ. ದುಡಿಮೆಯೇ ದಾರಿಯಾಗಿರುವಾಗ ಹಾಗೂ ದುಡಿಮೆಯಲ್ಲಿಯೇ ತಮ್ಮನ್ನು ಕಂಡುಕೊಳ್ಳುವ ಜನ ಏನು ಮಾಡಬೇಕೆಂದು ತಿಳಿಯದೆ ಹತಾಶರಾಗಿದ್ದಾರೆ. ಅಂದರೆ ಶೋಷಣೆಯ ಬಿಸಿ ತಟ್ಟಿದ್ದರೂ ಸಹ ಆಲೋಚನೆಯ ದಾರಿದ್ರ್ಯದಿಂದ ಬಳಲುತ್ತಿದ್ದಾರೆ. ಅದೇ ತಮ್ಮ ಕರ್ಮದ ವಿಧಿ ಎಂದು ಅನುಸರಿಸುತ್ತಾರೆ. ಇದಕ್ಕೆ ವಿಮೋಚನೆಯೆಂದರೆ ಚಿಂತನೆಗೆ ತೊಡಗುವುದು. ಕರ್ಮದ ಮರ್ಮವರಿತು ಬೌದ್ಧಿಕ ಹಾಗೂ ಭೌತಿಕ ಸಂಕೋಲೆಯಿಂದ ಹೊರಬಂದು ಅರ್ಥಭರಿತ ಕ್ರಿಯೆಯಲ್ಲಿ ತೊಡಗಿ ಬದುಕನ್ನು ಹಸನಾಗಿಸಿಕೊಳ್ಳಬೇಕೆನ್ನುವ ಪರ್ಯಾಯವನ್ನು ಲೇಖಕರು ಸೂಚಿಸುತ್ತಾರೆ.

ಈ ಲೇಖನಗಳಲ್ಲಿ ಡೊಮಿನಿಕ್ ಅವರು ಎತ್ತುವ ಮತ್ತೊಂದು ಮುಖ್ಯ ಪ್ರಶ್ನೆ ಎಂದರೆ ತತ್ವ ಹಾಗೂ ಚಿಂತನೆಗಳಲ್ಲಿನ ಬಿರುಕು ಕುರಿತಾದದ್ದು. ವ್ಯಕ್ತಿಯ ತತ್ವ ಹಾಗೂ ಚಿಂತನೆಗಳಲ್ಲಿನ ಬಿರುಕು ವಾಸ್ತವವನ್ನು ಮರೆಮಾಚಿ ಇತರೆ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುತ್ತಾ ಪ್ರತಿಗಾಮಿಯಾಗಿ ಪ್ರಗತಿಗೆ ವಿರುದ್ಧವಾಗಿ ಬೆಳೆಯುವ ರೀತಿಯನ್ನು ತುಂಬಾ ಸೂಕ್ಷ್ಮವಾಗಿ ತೆರೆದಿಡುತ್ತಾರೆ.

ಇಂಥವರು ಬಾಹ್ಯ ಭೌತಿಕ ಪ್ರಪಂಚದ ವ್ಯವಸ್ಥೆಯನ್ನು ಬದಲಾಯಿಸುವ ಬದಲು ಅದನ್ನು ಹಾಗೇ ಮುಂದುವರಿಸುತ್ತಾರೆ. ಅದಕ್ಕೊಂದು ಒಳ್ಳೆಯ ನಿದರ್ಶನವನ್ನು ಡೊಮಿನಿಕ್ ನೀಡುತ್ತಾರೆ. ಕೊಳಚೆಗೇರಿಗಳ ನಿರ್ಮೂಲನ ಮಾಡಬೇಕೆಂದು ಭಾಷಣ ಬಿಗಿಯುವವರು ಆಳದಲ್ಲಿ ಅಂಥ ಯಾವ ನಿಜವಾದ ಕಾಳಜಿಯನ್ನೂ ಹೊಂದಿರುವುದಿಲ್ಲ. ಕೊಳಚೆ ನಿರ್ಮೂಲನಕ್ಕಿಂತ ಮುಖ್ಯವಾಗಿ ತಮ್ಮ ಮನದ ಕೊಳಗೇರಿಯನ್ನು ನಿರ್ಮೂಲನ ಮಾಡಿಕೊಳ್ಳಬೇಕೆಂದು ಯಾರೂ ಯೋಚಿಸುವುದಿಲ್ಲ ಎನ್ನುವ ಮೂಲಕ ವ್ಯವಸ್ಥೆಯ ಯಥಾಸ್ಥಿತಿವಾದಿ ನಿಲುವಿಗೆ ಕನ್ನಡಿ ಹಿಡಿಯುತ್ತಾರೆ. ಹಾಗೇ ಬಡತನ, ನಿರುದ್ಯೋಗ, ದಲಿತೋದ್ಧಾರದ ಬಗ್ಗೆ ಮಾತನಾಡುವ ಪ್ರವೃತ್ತಿಗಳು ಹೆಚ್ಚಾದಷ್ಟು ಅವುಗಳಿಗಿದ್ದ ಪ್ರಖರತೆ ಕುಗ್ಗುತ್ತಾ ಒಂದು ಸೀಮಿತ ಪರಿಧಿಗೆ ಅಳವಟ್ಟವು. ಬಡತನವನ್ನು ಹಸಿವಿನೊಂದಿಗೆ ತಳಕುಹಾಕಿದಷ್ಟೂ ಬಡವರ ಉಳಿದ ಆಯಾಮಗಳು ಕುಗ್ಗುತ್ತಾಹೋದವು. ಅಂದರೆ ಸಮಸ್ಯೆ ಪರಿಹಾರವಾಗದೆ, ಅದು ಮತ್ತಷ್ಟು ಸಂಕೀರ್ಣವಾಗುತ್ತಾ ಬಂದಿರುವುದನ್ನು ಈವರೆಗೆ ಕಾಣುತ್ತೇವೆ. ಹಾಗೆ ನೋಡಿದರೆ ಕೇವಲ ಹಸಿವು ನೀಗುವ ಕ್ರಿಯೆಯೇ ದುಡಿಮೆಯಾಗಿ ಉಳಿದಿಲ್ಲ. ದುಡಿಮೆಗೆ ಮತ್ತೊಂದು ಸ್ವರೂಪವೂ ಇದೆ ಎನ್ನುವುದನ್ನು ಡೊಮಿನಿಕ್ ಪ್ರಭಾವಪೂರ್ಣವಾಗಿ ಇಲ್ಲಿ ಎತ್ತಿತೋರಿಸಿದ್ದಾರೆ. ದುಡಿಮೆ ಕೇವಲ ಭೌತಿಕ ಕ್ರಿಯೆಯಲ್ಲಿ ಉಳಿಯದೆ ಅದು ಬೌದ್ಧಿಕ ಪರಿಕಲ್ಪನೆಯಾಗಿ ಅವರ ಚಿಂತನದ ಸಾರಥ್ಯವನ್ನು ವಹಿಸುತ್ತದೆ. ಆದ್ದರಿಂದಲೇ ದುಡಿವ ಜನ ಹಾಡು ಕಟ್ಟುವುದು, ಆ ಮೂಲಕ ಬದುಕನ್ನು ಹಸನಾಗಿಸಿ ಕೊಂಡಿರುವುದು. ಬಡತನವನ್ನು ಇಕ್ಕಿ ಮೆಟ್ಟುವ ಸಾಮರ್ಥ್ಯ ಹಾಗೂ ಸಂಸ್ಕೃತಿಯನ್ನು ರೂಪಿಸುವ ಶಕ್ತಿ ಇಂಥ ಚಿಂತನೆಗಳಿಗಿರುತ್ತದೆ. ಅಂದರೆ ದುಡಿಮೆಯನ್ನು ಸಂಸ್ಕೃತಿಯ ಮೂಲ ಮೌಲ್ಯವಾಗಿಸುತ್ತದೆ. ದುಡಿಮೆ-ಉತ್ಪಾದನೆ-ಚಿಂತನೆಗಳ ನಡುವೆ ಒಂದು ಸಾಹಚರ್ಯ ಸಂಬಂಧವಿರುತ್ತದೆ. ಆದರೆ ಬಂಡವಾಳಶಾಹಿ ಸಮಾಜದಲ್ಲಿ ದುಡಿಮೆ ಖಾಸಗಿಯಾಗಿ ದುಡಿವ ವ್ಯಕ್ತಿ ತನ್ನ ಉತ್ಪಾದನೆಯಿಂದ ಬೇರ್ಪಟ್ಟು ಪರಕೀಯ ನಾಗುತ್ತಾನೆ. ಹಣ ಮೌಲ್ಯವಾಗಿ, ದುಡಿಮೆ ಸರಕಾಗಿ ಬಹುಸಂಖ್ಯಾತ ದಮನಿತರು ಮೂಕ ಸರಕುಗಳಾಗಿ ನೋವು ಹಾಗೂ ಶೋಷಣೆಗೆ ಮೂಲವಾಗುತ್ತಾರೆ.

ದುಡಿಮೆಯ ಮೇಲೆ ಬದುಕುವವರು ತಮ್ಮ ಹಕ್ಕು ಸ್ಥಾಪಿಸುವವರೆಗೂ ಸರಕುಗಳಾಗಿಯೇ ಉಳಿದು ತಮ್ಮ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಾರೆ. ದನಿ ಕಳೆದುಕೊಂಡ ಇಂಥವರು ತಮ್ಮ ದಮನಿತ ಸ್ಥಿತಿಯ ಬಗ್ಗೆ ಮಾತನಾಡಿದಲ್ಲಿ ಅದು ಸುಳ್ಳು ಹಾಗೂ ಅವಾಸ್ತವವೆಂದು ದಮನಿತರನ್ನು ಪ್ರತಿನಿಧಿಸುವ ದಣಿವರ್ಗದವರು ನಂಬಿಸುತ್ತಾರೆ. ಏನೂ ಇಲ್ಲದ ಇಂಥವರು ತಮ್ಮ ಹಸಿವಿಗಾಗಿ ತಮ್ಮ ಶ್ರಮವನ್ನಷ್ಟೇ ಆಸ್ತಿಯನ್ನಾಗಿ ಹೊಂದಿರುವುದರಿಂದ ಅದನ್ನು ಉಳ್ಳವರು ಖರೀದಿಸುತ್ತಾರೆ. ಶ್ರಮಕ್ಕಷ್ಟೆ ಒಡೆಯರಾದ ಹಾಗೂ



ಲೇಖಕರು : ಡಾ|| ಡಿ. ಡೊಮಿನಿಕ್
ಪ್ರಕಾಶನ : ಸಖಿ ಪ್ರಕಾಶನ, ಹೊಸಪೇಟೆ
ಪುಟ : ೯೨ ಬೆಲೆ : ರೂ. ೧೦೦

ಡಾ|| ವೀರೇಶ ಬಡಿಗೇರ

ಅಸಂಘಟಿತರಾದ ಇವರು ಶ್ರಮದ ಮಾರುಕಟ್ಟೆಯನ್ನು ನಿಯಂತ್ರಿಸಬಹುದೆನ್ನುವ ಆಲೋಚನೆಯನ್ನು ಮಾಡುವುದಿಲ್ಲ, ಕಾರಣ, ಈ ಶ್ರಮದ ದನಿಯು ಶಕ್ತಿಹೀನವಾಗಿರುತ್ತದೆ. ದಮನಿತರ ದನಿ ಭಾಷೆಯಾಗುವುದಿಲ್ಲ. ಇಂಥ ಶಕ್ತಿಹೀನ ಸ್ಥಿತಿಯನ್ನು ಸಾಮಾಜಿಕ ವ್ಯವಸ್ಥೆಯು ಆರ್ಥಿಕ ಸ್ಥಿತಿಗೆ ಮಾತ್ರ ಸೀಮಿತಗೊಳಿಸಿ ಉಳಿದ ಕ್ರಿಯೆಗಳಾದ ಭಾಷೆ, ಮೌಲ್ಯಗಳು ಮತ್ತು ವ್ಯಕ್ತಿ ಸಮುದಾಯಗಳ ಸಾಂಸ್ಕೃತಿಕ ಪ್ರತಿಭೆಗಳನ್ನು ನುಂಗಿಬಿಟ್ಟಿರುತ್ತದೆ. ಉಳ್ಳವರ ಅಧಿಕ ಸಂಪತ್ತಿನ ಬಲ ಅದರ ಭಾಷೆ ಹಾಗೂ ಮೌಲ್ಯ ಅಧಿಕಾರಗಳು ಶಕ್ತಿಯುತವಾಗಿ ಅಧಿಕಾರ ಸ್ಥಾಪಿಸುತ್ತವೆ. ಆವಾಗ ಆರ್ಥಿಕ ಸಂಪತ್ತು ಇಲ್ಲದ ಜನ ಕೀಳರಿಮೆ ಹಾಗೂ ಅಪನಂಬಿಕೆಗಳಿಗೆ ಒಳಗಾಗಿ ದುಡಿತವಷ್ಟೆ ತಮ್ಮ ಕರ್ಮವೆಂದು ಭಾವಿಸಿ ಬದುಕುತ್ತಾರೆ. ಹೀಗೆ ಬಡವನನ್ನು ಶ್ರೀಮಂತ, ದಮನಿತ-ಧಣಿ, ಬಡವ-ಬಡತನ, ಅಮಾಯಕತೆ-ಮುಗ್ಧತೆ ಇವುಗಳೊಳಗೆ ಅಡಗಿರುವ ಸಾಚಾತನ ಗುರುತಿಸುತ್ತ ಇಂಥ ಪರಿಕಲ್ಪನೆಗಳ ಒಳಗೆ ಹಾಗೂ ಹೊರಗೆ ಅಡಗಿರುವ ಕ್ರೌರ್ಯ, ವಂಚನೆ, ಬಡತನ ಹಾಗೂ ಧರ್ಮಸಂಕಟದ ನೆಲೆಗಳನ್ನೂ ತುಂಬಾ ಸೂಕ್ಷ್ಮವಾಗಿ ಡೊಮಿನಿಕ್ ಪತ್ತೆ ಮಾಡುತ್ತಾರೆ. ಆ ಮೂಲಕ 'ಸ್ವಾಧೀನ' ಹಾಗೂ 'ಸ್ವೀಕರಿಸುವಿಕೆ'ಯಿಂದಾಗಿ ದಮನಿತ ವರ್ಗಗಳು ಶೋಷಣೆಯನ್ನೇ ಸಹಜವೆಂದು ಒಪ್ಪಿಕೊಂಡು ಬದುಕುವ ವಿಪರ್ಯಾಸಗಳನ್ನು, ದೀನ ಸ್ಥಿತಿಗಳನ್ನು ಮರುವಿಶ್ಲೇಷಣೆಗೆ ಒಳಪಡಿಸುತ್ತಾರೆ.




ಸ್ವಾಧೀನ ಹಾಗೂ ಸ್ವೀಕರಿಸುವಿಕೆಯಿಂದಾಗಿ ದಮನಿತ ವರ್ಗಗಳು ಹೇಗೆ ತಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳುತ್ತವೆ ಎನ್ನುವ ಸಂಗತಿಗಳನ್ನು ತುಂಬಾ ನಿಷ್ಠುರವಾಗಿ ಹಾಗೂ ಶೋಧನಾತ್ಮಕವಾಗಿ ಚರ್ಚಿಸುತ್ತಾರೆ. ಇಂಥ ಅಪಾಯಕಾರಿ ನೆಲೆಗಳಿಂದ ಹೊರಬರಲು ಸಹನೆಯನ್ನು ತಿರಸ್ಕರಿಸುವ ಧೈರ್ಯ ಹಾಗೂ ಚಿಂತನಾ ಪರಿಕಲ್ಪನೆಯನ್ನು ರೂಪಿಸಿಕೊಡುತ್ತಾರೆ. ಅದಕ್ಕಾಗಿ ಡೊಮಿನಿಕ್ ಅವರು ವರ್ಣಾಶ್ರಮ ಪ್ರಣೀತ ಅನುಭವದ ನೆಲೆಗಳನ್ನು, ವಸಾಹತುಶಾಹಿ ಪ್ರಣೀತ ಆಲೋಚನಾ ಧಾಟಿಗಳನ್ನು ಹಾಗೂ ಅವು ಹೆಣೆದಿರುವ ಬೌದ್ಧಿಕ ಸಂಕೇತಗಳನ್ನು ಬುಡಮೇಲು ಮಾಡಿ ದಮನಿತ ವರ್ಗಗಳ ಅಸ್ಮಿತೆಯ ಕಾರಣವಾಗಿ ಬದುಕನ್ನು ನೋಡುವ ನಿಷ್ಠುರ ತಾತ್ವಿಕ ಭಿತ್ತಿಯೊಂದನ್ನು ರೂಪಿಸಿಕೊಳ್ಳುತ್ತಾರೆ. ಆ ಮೂಲಕ ಸಾಮಾಜೀಕರಣದ ಹಾದಿಯಲ್ಲಿ ಅಸ್ತಿತ್ವ ಹಾಗೂ ಶಕ್ತಿತ್ವಗಳನ್ನು ಕಳೆದುಕೊಳ್ಳುತ್ತಿರುವ ದಮನಿತ ನೆಲೆಗಳನ್ನು ಸಶಕ್ತೀಕರಣಕ್ಕೆ ಒಳಪಡಿಸಲು ಪ್ರಯತ್ನಿಸುವ ಅವರ ಹಠ ಬರೀ ಪರಿಕಲ್ಪನೆಗಳ ಮಟ್ಟದಲ್ಲಿ ಮಾತ್ರ ಉಳಿಯುವುದಿಲ್ಲ ಎನ್ನುವುದು ಗಮನಾರ್ಹವಾದುದು. ದಮನಿತ ದನಿಗಳ ಚಿಂತನ ಹೊರ ಪ್ರಪಂಚದ ವಿದ್ಯಮಾನಗಳನ್ನು ಪ್ರಶ್ನಿಸುತ್ತಲೇ ಕೆಳಸ್ತರದೊಳಗಿನ ವೈರುಧ್ಯಗಳನ್ನು ಬೆತ್ತಲೆ ಮಾಡುತ್ತದೆ.

**ಡಾ|| ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ

## 'ಲಾಬಿ – ಲಾಬಿ'



ವೈಟ್ - ಹೌಸ್ ಖುಶಿಯಾಗಬೇಕೆ
ಸೆನೆಟ್ನಲ್ಲಿ ದುಗಿಸು ದೊಡ್ಡ ಲಾಬಿ
ಭಾರಿ ಕಾಂಟ್ರ್ಯಾಕ್ಟ್ ಜೋಬಿಗಿಳಿಸಬೇಕೆ
ಪುಢಾರಿ ಬೆನ್ನತ್ತುಕದೀಮರ ಲಾಬಿ
ಲಾಬಿ... ಲಾಬಿ... ಏನಿದು ಲಾಬಿ ?

ಸರ್ಕಾರ ಉಳಿಸಬೇಕಾದ್ರೇ...
ಕರೋಡಪತಿಗಳ ಹಿಂದೆ ಲಾಬಿ
ಅದನ್ನ ಉರಳಿಸಬೇಕಾದ್ರೇ...
ಜಿಗಿದಾಡೋ ಕಪ್ಪೆಗಳ ಹಿಂದೆ ಲಾಬಿ
ಲಾಬಿ... ಲಾಬಿ... ಏನಿದು ಲಾಬಿ ?

ವಿವಾಹ ರಚಿಸಬೇಕೆಂದ್ರೇ...
ಮದುವೆ - ದಲ್ಲಾಳಿಗಳ ಲಾಬಿ

ಕಸ್ಟಮರುಗಳ ಬೆನ್ನ ಹಿಂದೆ
ಸೇಲ್ಸಮೆನ್ನರ ಬೆಂಬಿಡದ ಲಾಬಿ
ಲಾಬಿ... ಲಾಬಿ... ಏನಿದು ಲಾಬಿ ?

ಎಲೆಕ್ಷನ್ ಟಿಕೆಟಗೆ ಮೈಲುದ್ದ ಲಾಬಿ...
ಕಟ್ಟೆಯಿಂದ ಅಟ್ಟಕ್ಕೇರಿಸಲು ಲಾಬಿ...
ಅಟ್ಟದಿಂದ ದೊಡ್ಡಿಗೆಸೆಯಲು ಲಾಬಿ...
ಚೆಲ್ರೆ - ಅವಾರ್ಡಿಗೂ ಬುದ್ಧಿವಂತರ್ಲಾಬಿ...
ಅಬ್ಬಾ... ಲಾಬಿಲಾಬಿ... ಏನಿದು ಲಾಬಿ ?

ಸ್ವಾಮೀ... ಈ ಲಾಬಿ ಮಹಾ ಬಲಶಾಲಿ
ಇದರ ಏಟಿಗೆ ಹುಲಿಯಾಗತ್ತೆ ಇಲಿ
ಸುತ್ತೋ ಪೃಥ್ವಿಯ ದಿಕ್ತಪ್ಪತ್ತೆ ಈ ಲಾಬಿ
ಜ್ವಲಿಸೋ ಸೂರ್ಯನ್ನ ಹಿಮವಾಗ್ಸತ್ತೆ ಈ ಲಾಬಿ
ಅಯ್ಯೋ ಮಾರಾಯ... ಏನಿದು ಲಾಬಿ... ಲಾಬಿ ?

ಕರುನಾಡಲ್ಲಿ ಬೆಣ್ಣೆ - ತಿಕ್ಕೋದು;
ಹಿಂದುಸ್ಥಾನದಲ್ಲಿ ಮಸ್ಕಾ - ಮಸಾಜ್;
ಜಗತ್ತಿನಲ್ಲಿ ಬೂಟ್ - ಪಾಲಿಶ್;
ಆಗತ್ತೆ ಇಂಗ್ಲಿಸ್ಥಾನದಲ್ಲಿ ಮೆತ್ತಗೇ ''ಲಾಬಿ'';
ಅಲ್ವೇನ್ರಿ... ಈ ಲಾಬಿ ಮಹಾ ಬಲಶಾಲಿ ?

**ಡಾ|| ವಿರುಪಾಕ್ಷ ಕೆ. ಬಣಕಾರ್**
ಸೈಂಟಿಸ್ಟ್, ಇನ್‌ಚಾರ್ಜ್ ಹೆಚ್‌ಆರ್, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಓಶಿಯಾನೊಗ್ರಫಿ
ಡೋನಾ - ಪಾಲ್, ಗೋವಾ - ೪೦೩ ೦೦೪

# ಕನ್ನಡ ಪೌರಾಣಿಕ ಕಾದಂಬರಿಗಳು – ಒಂದು ಅಧ್ಯಯನ

ಡಾ|| ರಾಜೇಂದ್ರ ಬುರಡಿಕಟ್ಟಿ

ಕನ್ನಡದ ಮೊದಲ ಪೂರ್ಣಪ್ರಮಾಣದ ಪೌರಾಣಿಕ ಕಾದಂಬರಿ ದೇವುಡು ನರಸಿಂಹಶಾಸ್ತ್ರಿಗಳ 'ಮಹಾಬ್ರಾಹ್ಮಣ'. ಆನಂತರ ಅವರು ರಚಿಸಿದ್ದು, 'ಮಹಾಕ್ಷತ್ರಿಯ' ಮತ್ತು 'ಮಹಾದರ್ಶನ' ಕಾದಂಬರಿಗಳು. ಇವು ವ್ಯಾಪಕವಾಗಿ ಚರ್ಚೆಗೊಳಗಾಗಿವೆ. ಇಲ್ಲಿಯವರೆಗೆ ಕನ್ನಡದಲ್ಲಿ ಐವತ್ತಕ್ಕಿಂತ ಹೆಚ್ಚು ಪೌರಾಣಿಕ ಕಾದಂಬರಿಗಳು ರಚನೆಯಾಗಿವೆ. ಈ ಎಲ್ಲ ಕಾದಂಬರಿಗಳನ್ನು ಒಂದು ಅಧ್ಯಯನಕ್ಕೆ ಒಳಪಡಿಸಿ ಅವುಗಳ ನಿಲುವನ್ನು ದಾಖಲಿಸುವ ಒಂದು ಪ್ರಯತ್ನ ಇದುವರೆಗೂ ಆಗಿರಲಿಲ್ಲ. ಈ ನಿಟ್ಟಿನಲ್ಲಿ ನಡೆದ ಒಂದು ಪ್ರಯತ್ನದ ಫಲವಾಗಿ ಮೂಡಿಬಂದಿರುವ ಒಂದು ಬಹುಮುಖ್ಯ ಕೃತಿ ಈಚೆಗೆ ಪ್ರಕಟವಾಗಿರುವ ಡಾ|| ಜೆ. ಕೆ. ರಮೇಶ್ ಅವರ 'ಸಮಕಾಲೀನ ಪ್ರಜ್ಞೆ ಮತ್ತು ಕನ್ನಡ ಪೌರಾಣಿಕ ಕಾದಂಬರಿಗಳು'. ಕುವೆಂಪು ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಲ್ಲಿಸಲಾದ ಪ್ರಬಂಧದ ಪರಿಷ್ಕೃತ ರೂಪವಾಗಿರುವ ಕೃತಿ ಇದು.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಹಳ ದೊಡ್ಡ ಮತ್ತು ಅಷ್ಟೇ ಜನಪ್ರಿಯ ಪ್ರಕಾರವಾಗಿ ಒಂದು ಕಾಲಘಟ್ಟದಲ್ಲಿ 'ಯಜಮಾನಿ' ಸ್ಥಾನದಲ್ಲಿ ಮೆರೆದದ್ದು ಕಾದಂಬರಿ ಪ್ರಕಾರ. ಮಧ್ಯಮ ವರ್ಗದ ಅಕ್ಷರಸ್ಥ ಜನಸಮುದಾಯದ ಜ್ಞಾನ ಹಾಗೂ ಮನರಂಜನೆಯ ಮಾಧ್ಯಮವಾಗಿ ಈ ಪ್ರಕಾರ ಮಾಡಿದ ಕೆಲಸ ಚಿಕ್ಕದೇನಲ್ಲ. ಮನರಂಜನೆಗಾಗಿ ಕಾದಂಬರಿಯನ್ನು ಆಶ್ರಯಿಸಿದ್ದ 'ಓದುಗ'ರೆಲ್ಲ ಇಂದು ಟಿ.ವಿ. ಧಾರಾವಾಹಿ 'ನೋಡುಗ'ರಾಗಿ ವಲಸೆಹೋಗಿರುವ ಕಾರಣ ಕೇವಲ ವೈಚಾರಿಕ ನೆಲೆಗಟ್ಟಿನ ಮೇಲೆ ಜ್ಞಾನಕ್ಕಾಗಿ ಓದುವ ಕೆಲವೇ ಓದುಗರನ್ನು ಈ ಕಾದಂಬರಿ ಪ್ರಕಾರ ಉಳಿಸಿಕೊಂಡಿದೆ. ಉಳಿದೆಲ್ಲ ಸಾಹಿತ್ಯ ಪ್ರಕಾರಗಳಿಗಿಂತ ಬಹಳ ಹೆಚ್ಚಿನ ಪ್ರಮಾಣದಲ್ಲಿ ಬರುತ್ತಿದ್ದ ಕಾದಂಬರಿಗಳ ಸಂಖ್ಯೆ ಕೂಡ ಇದೇ ಕಾರಣದಿಂದ ಗಣನೀಯವಾಗಿ ಕ್ಷೀಣಿಸಿದೆ.

ಕನ್ನಡದ ಕಾದಂಬರಿಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಸಾಮಾಜಿಕ, ಐತಿಹಾಸಿಕ, ಪೌರಾಣಿಕ, ಪತ್ತೆದಾರಿ ಇತ್ಯಾದಿಯಾಗಿ ಗುಂಪೀಕರಿಸಿಕೊಳ್ಳುವ ಸರಳ ಕ್ರಮವೊಂದಿದೆ. ಈ ಕ್ರಮವನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಕನ್ನಡದಲ್ಲಿ ಸಂಖ್ಯೆಯ ದೃಷ್ಟಿಯಿಂದ ಅತೀ ಹೆಚ್ಚು ಪ್ರಕಟವಾಗಿದ್ದು ಸಾಮಾಜಿಕ ಕಾದಂಬರಿಗಳು. ಅನಂತರದ ಸ್ಥಾನ ಐತಿಹಾಸಿಕ ಮತ್ತು ಪೌರಾಣಿಕ ಕಾದಂಬರಿಗಳದ್ದು. ಇವುಗಳಲ್ಲಿ ಸಾಮಾಜಿಕ ಕಾದಂಬರಿಗಳನ್ನು ಕುರಿತ ಅನೇಕ ಬೆಲೆಯುಳ್ಳ ಅಧ್ಯಯನಗಳು ಕನ್ನಡದಲ್ಲಿ ಬಂದಿವೆ. ಒಬ್ಬೊಬ್ಬ ಲೇಖಕರನ್ನು ಕೇಂದ್ರೀಕರಿಸಿ ನಡೆಸಿದ ಅಧ್ಯಯನಗಳನ್ನು ಬಿಟ್ಟರೆ ಐತಿಹಾಸಿಕ ಕಾದಂಬರಿಗಳನ್ನು ಕುರಿತ ಅಧ್ಯಯನಗಳು ಬಂದದ್ದೂ ಅಷ್ಟಕ್ಕಷ್ಟೆ. ಪೌರಾಣಿಕ ಕಾದಂಬರಿಗಳನ್ನು ಕುರಿತ ಅಧ್ಯಯನವಂತೂ ಅದೇಕೋ ತೀರಾ ನಿರ್ಲಕ್ಷ್ಯಕ್ಕೊಳಗಾಗಿಬಿಟ್ಟಿದೆ.

ಕನ್ನಡದ ಮೊದಲ ಪೂರ್ಣಪ್ರಮಾಣದ ಪೌರಾಣಿಕ ಕಾದಂಬರಿ ದೇವುಡು ನರಸಿಂಹಶಾಸ್ತ್ರಿಗಳ 'ಮಹಾಬ್ರಾಹ್ಮಣ'. ಆನಂತರ ಅವರು ರಚಿಸಿದ್ದು, 'ಮಹಾಕ್ಷತ್ರಿಯ' ಮತ್ತು 'ಮಹಾದರ್ಶನ' ಕಾದಂಬರಿಗಳು. ಇವು ವ್ಯಾಪಕವಾಗಿ ಚರ್ಚೆಗೊಳಗಾಗಿವೆ. ಇಲ್ಲಿಯವರೆಗೆ ಕನ್ನಡದಲ್ಲಿ ಐವತ್ತಕ್ಕಿಂತ ಹೆಚ್ಚು ಪೌರಾಣಿಕ ಕಾದಂಬರಿಗಳು ರಚನೆಯಾಗಿವೆ. ಈ ಎಲ್ಲ ಕಾದಂಬರಿಗಳನ್ನು ಒಂದು ಅಧ್ಯಯನಕ್ಕೆ ಒಳಪಡಿಸಿ ಅವುಗಳ ನಿಲುವನ್ನು ದಾಖಲಿಸುವ ಒಂದು ಪ್ರಯತ್ನ ಇದುವರೆಗೂ ಆಗಿರಲಿಲ್ಲ. ಈ ನಿಟ್ಟಿನಲ್ಲಿ ನಡೆದ ಒಂದು ಪ್ರಯತ್ನದ ಫಲವಾಗಿ ಮೂಡಿಬಂದಿರುವ ಒಂದು ಬಹುಮುಖ್ಯ ಕೃತಿ ಈಚೆಗೆ ಪ್ರಕಟವಾಗಿರುವ ಡಾ|| ಜೆ. ಕೆ. ರಮೇಶ್ ಅವರ 'ಸಮಕಾಲೀನ ಪ್ರಜ್ಞೆ ಮತ್ತು ಕನ್ನಡ ಪೌರಾಣಿಕ ಕಾದಂಬರಿಗಳು'. ಕುವೆಂಪು ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಸಲ್ಲಿಸಲಾದ ಪ್ರಬಂಧದ ಪರಿಷ್ಕೃತ ರೂಪವಾಗಿರುವ ಕೃತಿ ಇದು.

ಕನ್ನಡದಲ್ಲಿ ಅತೀ ಹೆಚ್ಚು ಮತ್ತು ಅತೀ ಜನಪ್ರಿಯ ಪೌರಾಣಿಕ ಕಾದಂಬರಿಗಳನ್ನು ಬರೆದು ಹೆಸರು ಪಡೆದ ಸತ್ಯಕಾಮ ಅವರ ಬಹುಮುಖ್ಯ ಕೃತಿಗಳು ಸಹಜವಾಗಿಯೇ ಪ್ರಬಂಧದಲ್ಲಿ ಒತ್ತುಕೊಟ್ಟು ಚರ್ಚಿಸಲ್ಪಟ್ಟಿವೆ. ದ್ರೌಪದಿಯನ್ನು ಕುರಿತ, ಸ್ತ್ರೀಪರ ಕಾಳಜಿಯ ಅವರ 'ಬೆಂಕಿಯ ಮಗಳು' ಶೋಷಣೆಯ ಸಾರ್ವಕಾಲೀನತೆ ಮತ್ತು ಸಾರ್ವತ್ರಿಕತೆಗಳನ್ನು ಬಿಂಬಿಸಲು ಮಹಾಭಾರತದ ಕರ್ಣನನ್ನು ಕೇಂದ್ರೀಕರಿಸಿ ರಚಿತವಾದ 'ಆಹುತಿ', ಕೃಷ್ಣನನ್ನು ನಮ್ಮ ಕಾಲದ ಒಬ್ಬ ಚತುರ ರಾಜಕಾರಣಿಯನ್ನಾಗಿ ಚಿತ್ರಿಸಿದ 'ರಾಜಕ್ರೀಡೆ', ರಾಮಾಯಣದ ಸಾಂಪ್ರದಾಯಿಕ 'ಸೀತಾ ಪರಿತ್ಯಾಗ'ವನ್ನು ಹೊಸ ದೃಷ್ಟಿಯಿಂದ ನೋಡಿ ಅದನ್ನು ಪುರುಷ ರಾಜಕಾರಣಕ್ಕೆ ಬಲಿಯಾದ ಹೆಣ್ಣೊಬ್ಬಳ ಕಥೆಯಾಗಿ ರೂಪಿಸಿದ 'ರಾಜಬಲಿ'ಯೇ ಅಲ್ಲದೇ ಅವರ ಇತರ ಕಾದಂಬರಿಗಳಾದ 'ನಾಗರ ನಂಜು', 'ವಿ-ಪ್ರಯೋಗ', 'ವಿಚಿತ್ರ ವೀರ್ಯ' – ಹೀಗೆ ಚರ್ಚೆಗೊಳಗಾಗಿರುವ ಮುಖ್ಯ ಕೃತಿಗಳು.

ಪೌರಾಣಿಕ ಕಾದಂಬರಿಕಾರರೆಂದು ಹೆಸರು ಪಡೆಯದಿದ್ದರೂ ಅಂತಹ ಒಂದೋ ಎರಡೋ ಕಾದಂಬರಿಗಳನ್ನು ಬರೆದ ಕೆಲವು ಹಿರಿಯ ಲೇಖಕರ ಹಾಗೆ ಇತ್ತೀಚೆಗೆ ಬರೆಯುತ್ತಿರುವ ಯುವ ಪೀಳಿಗೆಯ ಲೇಖಕರ ಕಾದಂಬರಿಗಳೂ ಇಲ್ಲಿ ಚರ್ಚೆಗೊಳಪಟ್ಟಿವೆ. ಅವುಗಳಲ್ಲಿ ಸಾಮಾಜಿಕ ಕಾದಂಬರಿಕಾರರಾಗಿ ಪ್ರಸಿದ್ಧರಾಗಿರುವ ಎಸ್. ಎಲ್. ಭೈರಪ್ಪ ಅವರು ಮಹಾಭಾರತ ಕಥೆಯನ್ನು ಅಪೌರುಷ ನೆಲೆಯಿಂದ ಹೊರತಂದು ರಚಿಸಿದ ಕಾದಂಬರಿ 'ಪರ್ವ', ಖ್ಯಾತ ಐತಿಹಾಸಿಕ ಕಾದಂಬರಿಕಾರ ತರಾಸು ಅವರು



ಕಠೋಪನಿಷತ್ತಿನಲ್ಲಿ ಬರುವ ನಚಿಕೇತನನ್ನು ಕುರಿತು ರಚಿಸಿದ 'ಬೆಳಕು ತಂದ ಬಾಲಕ', ರಂ.ಶ್ರೀ ಮುಗಳಿ ಅವರು ಪುರಾಣಗಳಲ್ಲಿ ಅಷ್ಟೇನು ಪ್ರಸಿದ್ಧನಲ್ಲದ ವ್ಯಕ್ತಿಯೊಬ್ಬನನ್ನು ಕುರಿತು ರಚಿಸಿದ 'ಅಗ್ನಿವರ್ಣ', ಸಮೇತನಹಳ್ಳಿ ರಾಮರಾಯರ 'ಶ್ರೀಕೃಷ್ಣದರ್ಶನ' ಮತ್ತು 'ಶ್ರೀ ಪರಶುರಾಮ', ಶಂಕರ ಮೊಕಾಶಿ ಪುಣೇಕರ ಅವರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕೃತಿ 'ಅವಧೇಶ್ವರಿ', ಆದ್ಯ ರಾಮಾಚಾರ್ಯ ಅವರ 'ಆಚಾರ್ಯ ದ್ರೋಣ', 'ರಾಜಾ ವೃಕೋದರ' ಮತ್ತು 'ಪಾಂಚಾಲಿ', ಪ್ರವಚನಕಾರ ಕೆ. ಎಸ್. ನಾರಾಯಣಾಚಾರ್ಯ ಅವರ 'ಅಗಸ್ತ್ಯ' ಹಾಗೂ 'ಶ್ರೀಕೃಷ್ಣಾವತಾರದ ಕೊನೆಯ ಗಳಿಗೆಗಳು' ಇವುಗಳಲ್ಲಿ ಪ್ರಮುಖವಾದುವು.

ಇವುಗಳ ಜೊತೆಗೆ ಮಹಾಭಾರತದ ಕಥೆಯನ್ನು ಕೌರವ ದೃಷ್ಟಿಕೋನದಿಂದ ನೋಡಿ ಮುರಿದು ಕಟ್ಟಿರುವ ಕನ್ನಡದ ಅಪರೂಪದ ಕೃತಿ ಭೀಮಸೇನ ತೋರಗಲ್ಲ ಅವರ 'ಸಂಚು', ಪ್ರತಿ ಸಂಸ್ಕೃತಿಯ ನೆಲೆಯಲ್ಲಿ ರಚಿತವಾದ ಬಂಡಾಯ ಸಾಹಿತಿ ಜ. ಹೋ. ನಾರಾಯಣಸ್ವಾಮಿ ಅವರ ಕಿರು ಕಾದಂಬರಿ 'ಅದಮ್ಯ', ಮಹಾಭಾರತ ಹಾಗೂ ರಾಮಾಯಣದ ಕಥೆಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ನೋಡಿ ರಚಿಸಲ್ಪಟ್ಟಿರುವ ಲೇಖಕಿ ಎಸ್. ವಿ. ಪ್ರಭಾವತಿ ಅವರ 'ದ್ರೌಪದಿ', 'ಕುಂತಿ' ಮತ್ತು 'ಅಹಲ್ಯೆ', ಹಾಗೇ ಎಚ್. ವಿ. ಸಾವಿತ್ರಮ್ಮ ಅವರ 'ಸೀತೆ-ರಾಮ-ರಾವಣ' ಮತ್ತು 'ವಿಮುಕ್ತಿ', ವೈದ್ಯ ಸಾಹಿತಿಯಾಗಿ ಮನೆಮಾತಾಗಿರುವ ಅನುಪಮಾ ನಿರಂಜನ ಅವರ 'ಮಾಧವಿ', ಶಕುಂತಲಾ ಭಟ್ ಅವರ 'ಅಹಲ್ಯೆ', ದೇವಕಿಮೂರ್ತಿ ಅವರ 'ನಿರೀಕ್ಷೆ', ನಳಿನಿ ಮೂರ್ತಿ ಅವರ 'ಊರ್ಮಿಳಾ' ಹಾಗೂ 'ಪ್ರತಿಜ್ಞೆ' ಕೂಡ ಪ್ರಬಂಧದಲ್ಲಿ ಸ್ಥಾನ ಪಡೆದಿವೆ.

ಪುರಾಣ ಕಥೆಗಳ ಆಧಾರದಿಂದ ರಚಿತವಾಗಿರುವ ಕನ್ನಡ ಕಾದಂಬರಿಗಳಲ್ಲಿ ಸಹಜವಾಗಿಯೇ ಹೆಚ್ಚು ಕಾದಂಬರಿಗಳು ತಮ್ಮ ಆಧಾರವಾಗಿ ಹೊಂದಿರುವುದು ರಾಮಾಯಣ, ಮಹಾಭಾರತ ಹಾಗೂ ಭಾಗವತಗಳನ್ನು. ಕನ್ನಡ ಲೇಖಕರು ಪುರಾಣ ಕಥೆಗಳ ರಂಜಕ, ಅಥವಾ ವಿಸ್ಮಯಕಾರಕ ಸನ್ನಿವೇಶಗಳಿಗೆ ಮಾರುಹೋಗದೆ ತಮ್ಮ ದೃಷ್ಟಿ-ಧೋರಣೆಗಳಿಗೆ ಹೊಂದುವ ಅರ್ಥಪೂರ್ಣ ಸಂದಿಗ್ಧ ಕಥಾವಳಿಗಳನ್ನೂ ಪಾತ್ರಗಳನ್ನೂ ಆಯ್ಕೆಮಾಡಿ ಪ್ರಬುದ್ಧತೆಯನ್ನು ಮೆರೆದಿದ್ದಾರೆ. ಅಂದ ಮಾತ್ರಕ್ಕೆ ಎಲ್ಲ ಲೇಖಕರೂ ಪ್ರಗತಿಪರವಾಗಿ ಯೋಚಿಸಿ ಸಮಕಾಲೀನ ಪ್ರಜ್ಞೆಯ ಬಹುಮುಖ್ಯ ಅಂಶವಾದ ವೈಚಾರಿಕತೆಯನ್ನು ಬೆಳೆಸಲು ಪ್ರಯತ್ನಿಸಿದ್ದಾರೆ ಎಂದೇನಲ್ಲ, ಎಂಬುದು ಡಾ॥ ಜೆ. ಕೆ. ರಮೇಶ್ ಅವರ ಅಭಿಪ್ರಾಯ.

ಪುರಾಣ ಕಥೆಗಳನ್ನು ತಮ್ಮ ಕಾದಂಬರಿಗಳಿಗಾಗಿ ದುಡಿಸಿಕೊಂಡ ರೀತಿ ಮತ್ತು ಉದ್ದೇಶಗಳ ಆಧಾರದಿಂದ ಕನ್ನಡದ ಈ ಎಲ್ಲ ಲೇಖಕರನ್ನು ಒಟ್ಟಾರೆಯಾಗಿ ಮೂರು ಗುಂಪುಗಳಾಗಿ ಡಾ॥ ರಮೇಶ್ ವರ್ಗೀಕರಿಸಿದ್ದಾರೆ. ಒಂದನೇ ಗುಂಪು ಮೂಲ ಕಥೆಯನ್ನು ತದ್ವತ್ ಅನುಸರಿಸುತ್ತಾ, ಪುರಾಣಗಳ ಧ್ಯೇಯ ಧೋರಣೆಗಳನ್ನು ಪ್ರತಿಪಾದಿಸುತ್ತಾ ಸನಾತನ ಧರ್ಮ, ಪುರಾತನ ಸಂಸ್ಕೃತಿಗಳನ್ನು ವೈಭವೀಕರಿಸುವವರದು. ವೈಚಾರಿಕತೆಯನ್ನು, ವೈಚಾರಿಕ ಆಲೋಚನೆಯುಳ್ಳವರನ್ನು ಸಹಿಸದ ಮತ್ತು ವೈಚಾರಿಕ ದೃಷ್ಟಿಯಿಂದ ಪುರಾಣ ಮತ್ತಿತರ ಧರ್ಮಗ್ರಂಥಗಳನ್ನು ನೋಡುವುದು ಪರಂಪರೆಗೆ ಎಸಗುವ ಅಪಚಾರ ಎಂದು ಬಗೆಯುವ, ಕಾದಂಬರಿ ಪ್ರಕಾರವನ್ನು ಹೀಗೆ ಸನಾತನ ಧರ್ಮ ಪ್ರತಿಪಾದನೆಯ ಅಸ್ತ್ರವನ್ನಾಗಿ ಬಳಸಿಕೊಂಡ ಇಂತಹ ಮೂಲಭೂತವಾದಿ ಕಾದಂಬರಿಕಾರರ ಗುಂಪಿನ ನಾಯಕರನ್ನಾಗಿ ಅಧ್ಯಯನಕಾರರು ಗುರ್ತಿಸುವುದು ಪ್ರವಚನವನ್ನು ಕಸುಬನ್ನಾಗಿ ಉಳ್ಳ ಕೆ. ಎಸ್. ನಾರಾಯಣಾಚಾರ್ಯ ಮತ್ತು ಸಂಪ್ರದಾಯಶರಣ ಲೇಖಕ ಆದ್ಯ ರಾಮಾಚಾರ್ಯ ಅವರನ್ನು.

ಒಂದು ಕಾಲಕ್ಕೆ ಒಳ್ಳೆಯದಾಗಿದ್ದದ್ದು ಎಲ್ಲ ಕಾಲಕ್ಕೂ ಒಳ್ಳೆಯದಾಗಿ ಮುಂದುವರಿಯಲು ಸಾಧ್ಯವಿಲ್ಲ ಎಂಬುದನ್ನು ಅರ್ಥಮಾಡಿಕೊಂಡು ಕಾಲಕ್ಕೆ ತಕ್ಕಂತೆ ಮೂಲಕಥೆಯನ್ನು ಅಲ್ಪ ಸ್ವಲ್ಪ ಪರಿವರ್ತಿಸಿ ಕಾದಂಬರಿ ರಚಿಸಿದವರದ್ದು ಎರಡನೇ ಗುಂಪು. 'ಬೇಡವಾದುದನ್ನೆಲ್ಲ ತಲೆಯ ಮೇಲೆ ಹೇರಿಕೊಳ್ಳಲು ಪುರಾಣ ಹೇಳುವುದಿಲ್ಲ, ಬೇಕಾದುದನ್ನು ಕಾಲಕೆಳಗೆ ಹಾಕಿ ತುಳಿಯುವುದನ್ನೂ ಅದು ಸಹಿಸುವುದಿಲ್ಲ. ಇದು ಕಾಲದ ನಿಯಂತ್ರಣ' ಎಂಬ ಸತ್ಯಕಾಮರ ಮಾತು ಈ ಗುಂಪಿನ ಲೇಖಕರ ಆಲೋಚನಾ ಕ್ರಮವನ್ನು ತಿಳಿಸುತ್ತದೆ. ಇವರು ಪುರಾಣವನ್ನು ಕುರುಡಾಗಿ ಅನುಸರಿಸುವವರೂ ಅಲ್ಲ; ಹಾಗಂತ ಪುರಾಣವನ್ನು ಸಂಪೂರ್ಣ ತಿರಸ್ಕರಿಸುವವರೂ ಅಲ್ಲ. 'ಮಾಸನ್ನು ಚೆಲ್ಲುವ ಭರದಲ್ಲಿ ಕೂಸು ಹೋಗಬಾರದು' ಎಂಬ ಎಚ್ಚರ ಇವರದ್ದು. ಒಂದು ರೀತಿಯ ಸುಧಾರಣಾವಾದಿಗಳು ಅಥವಾ ಆದರ್ಶವಾದಿಗಳು ಎನ್ನಬಹುದಾದ ಈ ಬಗೆಯ ಲೇಖಕರ ಗುಂಪಿನಲ್ಲಿ ದೇವುಡು, ಸತ್ಯಕಾಮ, ಸಮೇತನಹಳ್ಳಿ ರಾಮರಾಯ, ರಂ. ಶ್ರೀ. ಮುಗಳಿ, ಶಂಕರ ಮೊಕಾಶಿ ಪುಣೇಕರ, ಇವರೆಲ್ಲ ಸೇರಿದ್ದಾರೆ. ಈ ಪ್ರಕಾರದ ಲೇಖಕರಿಗೆ ಅಗ್ರಪಂಕ್ತಿ ಹಾಕಿಕೊಟ್ಟ ದೇವುಡು ಅವರನ್ನು 'ಪ್ರಗತಿಪರರಲ್ಲಿ ಸಂಪ್ರದಾಯವಾದಿ ಅಥವಾ ಸಂಪ್ರದಾಯವಾದಿಗಳಲ್ಲಿ ಪ್ರಗತಿಪರ' ಲೇಖಕ ಎಂದು ಗುರ್ತಿಸಬಹುದು.

ಡಾ॥ ರಮೇಶರ ಪ್ರಕಾರ ಮೂರನೇ ಗುಂಪು ತೀವ್ರವಾದಿಗಳ ಗುಂಪು. ಸ್ಥಾಪಿತ ಪುರಾಣಗಳ ಭಂಜನೆ ಮತ್ತು ನವಪುರಾಣಗಳ ನಿರ್ಮಾಣವನ್ನು ಕೈಂಕರ್ಯವಾಗಿ ಸ್ವೀಕರಿಸಿದ ಈ ಗುಂಪಿನ ಲೇಖಕರು ತಮ್ಮ ಕೃತಿಗಳ ಮೂಲಕ ಪುರಾಣಕ್ಕೆ ಅಂಟಿದ ಅಜ್ಞಾನ, ಮೂಢನಂಬಿಕೆ, ಅತಿಮಾನುಷತೆ, ವೈಭವೀಕರಣ ಇತ್ಯಾದಿಗಳನ್ನು ಕಳಚಿಹಾಕಿ ವೈಜ್ಞಾನಿಕತೆ, ವೈಚಾರಿಕತೆ, ಮಾನವೀಯತೆ, ಪ್ರಜಾಪ್ರಭುತ್ವದ ಮೌಲ್ಯಗಳು ಇವುಗಳ ಹಿನ್ನೆಲೆಯಲ್ಲಿ ನವಪುರಾಣಗಳ ರಚನೆಗೆ ತೊಡಗಿದವರು ಮತ್ತು ಆ ಮೂಲಕ ಹೊಸ ಸಮಾಜದ ಆಶೋತ್ತರಗಳನ್ನು ಬಿಂಬಿಸಿದವರು. ಇರಾವತಿ ಕರ್ವೆ, ದುರ್ಗಾ ಭಾಗವತ ಮುಂತಾದವರ ಪ್ರೇರಣೆ ಪಡೆದ ಈ ಗುಂಪಿನ ಲೇಖಕರಲ್ಲಿ ಅನುಪಮಾ ನಿರಂಜನ, ಜ. ಹೋ. ನಾರಾಯಣಸ್ವಾಮಿಯಂಥವರು ಪ್ರಮುಖರು.

ಲೇಖಕಿಯರನ್ನು ಕುರಿತು ಅಧ್ಯಯನಕಾರರು 'ಕುತೂಹಲಕಾರಿ' ಎಂದು ಒಂದು ಅಂಶವನ್ನು ದಾಖಲಿಸುತ್ತಾರೆ. ಅದೇನೆಂದರೆ, ಪೌರಾಣಿಕ ಕಾದಂಬರಿ ಬರೆದ ಒಟ್ಟು ಲೇಖಕರಲ್ಲಿ ಕಾಲುಭಾಗದಷ್ಟಿರುವ ಈ ಲೇಖಕಿಯರಲ್ಲಿ ಎ. ಪಂಕಜ ಒಬ್ಬರನ್ನು ಬಿಟ್ಟರೆ ಉಳಿದವರೆಲ್ಲರೂ 'ಸ್ತ್ರೀಯರು ಸಂಪ್ರದಾಯ-ಸಂಸ್ಕೃತಿಗಳ ರಕ್ಷಕರು' ಎಂಬ ಸಾಮಾನ್ಯ ಗ್ರಹಿಕೆಗೆ ವ್ಯತಿರಿಕ್ತವಾಗಿ ಬಂಡಾಯಗಾರ್ತಿಯರಾಗಿ ಕೃತಿ ರಚಿಸಿದ್ದಾರೆ ಎಂಬುದು. ಲೇಖಕಿಯರಿಂದ ರಚಿತವಾದ ಮೊದಲ ಪೌರಾಣಿಕ ಕಾದಂಬರಿಯಾದ ಅನುಪಮಾ ನಿರಂಜನ ಅವರ 'ಮಾಧವಿ'ಯಿಂದ (೧೯೭೬) ಪ್ರಾರಂಭವಾದ ಈ ಬಂಡಾಯ ಪ್ರವೃತ್ತಿ ಮುಂದಿನ ಬಹುತೇಕ ಲೇಖಕಿಯರಿಗೆ ಮೇಲ್ಪಂಕ್ತಿ ಹಾಕಿಕೊಟ್ಟಂತಿರುವುದನ್ನು, ಎಚ್. ವಿ. ಸಾವಿತ್ರಮ್ಮ, ಎಸ್. ವಿ. ಪ್ರಭಾವತಿ, ಶಕುಂತಲಾ ಭಟ್, ನಳಿನಾ ಮೂರ್ತಿ ಇವರೆಲ್ಲರೂ ಸ್ತ್ರೀವಾದಿ ನಿಲುವಿನಿಂದ ಪುರಾಣದ ಸ್ತ್ರೀ ಪಾತ್ರಗಳ ಪುನಃಸೃಷ್ಟಿಮಾಡಿ ಕೃತಿ ರಚಿಸಿರುವುದನ್ನು ಅವುಗಳ ಸಾಂಸ್ಕೃತಿಕ ಮಹತ್ವವನ್ನೂ ಮತ್ತು ಈ ನಿಟ್ಟಿನಲ್ಲಿ ಈ ಲೇಖಕಿಯರು ಮಾಡಿದ ಬೆಲೆಯುಳ್ಳ ಕೆಲಸವನ್ನು ಅಧ್ಯಯನಕಾರರು ಸಮರ್ಥವಾಗಿ ದಾಖಲಿಸಿದ್ದಾರೆ. ಆದರೆ ಈ ಎಲ್ಲ ಲೇಖಕಿಯರು ಎಪ್ಪತ್ತರ ದಶಕ ಉತ್ತರಾರ್ಧದ ನಂತರ ಕಾದಂಬರಿ ಬರೆದವರು ಎಂಬುದನ್ನು ನಾವು ನೆನಪಿಸಿಕೊಳ್ಳಬೇಕು. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಬಂಡಾಯ ಮತ್ತು ಸ್ತ್ರೀವಾದಿ ಚಳವಳಿಗಳು ಉತ್ತುಂಗದಲ್ಲಿದ್ದ ಸಂದರ್ಭವದು. ಈ ಎಲ್ಲ ಲೇಖಕಿಯರು ಈ ಚಳವಳಿಗಳಿಂದ ಪ್ರಭಾವಿತರಾದವರು ಎಂಬ ಅಂಶವನ್ನು ನಾವು ನೆನಪಿಸಿಕೊಳ್ಳಲು ಸಾಧ್ಯವಾದರೆ ಇದು ಮಹತ್ವದ್ದಾದರೂ ಕುತೂಹಲಕರವಾದುದೇನಲ್ಲ ಎಂಬುದು ಸ್ಪಷ್ಟವಾಗುತ್ತದೆ.

ದಲಿತನ ಸಮಸ್ಯೆಗಳನ್ನು ದಲಿತ ಲೇಖಕನೇ ಪ್ರಸ್ತಾಪಿಸಬೇಕೇ, ಮಹಿಳೆಯರ ಸಮಸ್ಯೆಗಳನ್ನು ಲೇಖಕಿಯರೇ ಹೇಳಿಕೊಳ್ಳಬೇಕೇ, ಎಂಬ ಪ್ರಶ್ನೆಗಳು ವ್ಯಾಪಕವಾಗಿ ಚಾಲ್ತಿಯಲ್ಲಿರುವ ಇಂದಿನ ಸಂದರ್ಭದಲ್ಲಿ ಸತ್ಯಕಾಮ ಯಾವುದೇ ಲೇಖಕಿಯರಿಗೂ ಕಡಿಮೆ ಇಲ್ಲದಂತೆ ಸ್ತ್ರೀಪರ ಕಾಳಜಿಯನ್ನು ತಮ್ಮ 'ಬೆಂಕಿಯ ಮಗಳು' ಕೃತಿಯಲ್ಲಿ, ಹಾಗೇ ಯಾವುದೇ ದಲಿತ ಲೇಖಕನಿಗೆ ಕಡಿಮೆ ಇಲ್ಲದಂತೆ ದಲಿತಪರ ಕಾಳಜಿಯನ್ನು ತಮ್ಮ 'ಆಹುತಿ' ಕೃತಿಯಲ್ಲಿ ವ್ಯಕ್ತಪಡಿಸುವುದನ್ನು ಲೇಖಕರು ಸೂಕ್ಷ್ಮವಾಗಿ ಅವಲೋಕಿಸಿ ಈ ಬಗೆಯ ಪ್ರಶ್ನೆಗೆ ಪರೋಕ್ಷ ಉತ್ತರ ಬಹಳ ಹಿಂದೆಯೇ ಬಂದಿರುವುದನ್ನು ದಾಖಲಿಸುತ್ತಾರೆ. ಸುಧಾರಣೆ ಎನ್ನುವುದು 'ಪ್ರತಿಭಟನೆ' ಮತ್ತು 'ಪಾಪಪ್ರಜ್ಞೆ' ಎರಡೂ ಕಡೆಯಿಂದ ನಡೆಯಬೇಕಾಗಿದೆ ಎಂಬ ಬಗ್ಗೆ ವಿಶ್ವಾಸ ಇರುವವರಿಗೆಲ್ಲ ಇದು ಮಹತ್ವದ ಸಂಗತಿ.

ಸುಮಾರು ಐವತ್ತು ವರ್ಷಗಳ ಇತಿಹಾಸವಿರುವ ಕನ್ನಡ ಪೌರಾಣಿಕ ಕಾದಂಬರಿ ಪ್ರಕಾರಕ್ಕೆ ಇದುವರೆಗೂ ಬಂದು ಸೇರಿದ ಅಷ್ಟೇ ಸಂಖ್ಯೆಯ ಮುಖ್ಯ ಕಾದಂಬರಿಗಳನ್ನೆಲ್ಲ ಒಟ್ಟು ಸೇರಿಸಿ ನಡೆಸಿರುವ ಈ ಅಧ್ಯಯನ ಈ ಪ್ರಕಾರದಲ್ಲಿದ್ದ ಒಂದು ದೊಡ್ಡ ಕೊರತೆಯನ್ನು ತಕ್ಕಮಟ್ಟಿಗೆ ತುಂಬಿದೆ. ಮಾತ್ರವಲ್ಲ, ಈ ನಿಟ್ಟಿನಲ್ಲಿ ನಡೆಯಬಹುದಾದ ಮುಂದಿನ ಅಧ್ಯಯನಗಳಿಗೆ ಸಾಕಷ್ಟು ಸೌಲಭ್ಯ ಮತ್ತು ಸಮಸ್ಯೆ ಎರಡನ್ನೂ ಸಿದ್ಧಮಾಡಿ ಕೊಡುವ ಮೂಲಕ ಯಶಸ್ವಿಯಾಗಿದೆ.

**ಡಾ॥ ರಾಜೇಂದ್ರ ಬುರಡಿಕಟ್ಟಿ**
'ಪರ್ಣಕುಟಿ', ಸಾಲೇಕೊಪ್ಪ, ಸರು ಅಂಚೆ - ೫೭೭ ೪೩೨
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

ರಾಷ್ಟ್ರೀಯ ನಾಟಕ ಶಾಲೆ ಬೆಂಗಳೂರು, ಪ್ರಾದೇಶಿಕ ಸಂಪನ್ಮೂಲ ಕೇಂದ್ರದ ವತಿಯಿಂದ 'ಈಶಾನ್ಯ ಮಕ್ಕಳ ನಾಟಕೋತ್ಸವ' ನಾಲ್ಕು ದಿನಗಳು ಜರುಗಿದವು. ಮಕ್ಕಳು ಪ್ರೇಕ್ಷಕರಿಗಾಗಿದ್ದ ಈ ಉತ್ಸವದಲ್ಲಿ (ಅಕ್ಟೋಬರ್ ೮ರಿಂದ ೧೧) ಅಸ್ಸಾಂ, ಮಣಿಪುರಗಳಿಂದ ಬಂದ ಮೂರು ತಂಡಗಳಲ್ಲದೆ ಜರ್ಮನಿಯ ತಂಡವೊಂದು ಪ್ರದರ್ಶನಗಳನ್ನು ನೀಡಿದವು. – ಇದರಲ್ಲಿನ ಪ್ರದರ್ಶನಗಳು ಮಕ್ಕಳಿಗಾಗಿಯೇ ಜರುಗಿದವು. ಜರ್ಮನಿಯ ತಂಡವೆಂದರೆ ಇಬ್ಬರು (ಗಂಡು ಮತ್ತು ಹೆಣ್ಣು ತಂಡ) ತಜ್ಞರಿಂದ ಗೊಂಬೆಯಾಟದ (!) ಶೈಲಿಯಲ್ಲಿ ಜರುಗಿದ 'ಸ್ಟಿಕ್ ಮ್ಯಾನ್' (Stick Man) ಎಂಬ ಪ್ರದರ್ಶನವು ಅತ್ಯಾಧುನಿಕ ತಂತ್ರಜ್ಞಾನದಿಂದ ಕೂಡಿದ್ದು ಒಂದು ವಿಶಿಷ್ಟ ಪ್ರದರ್ಶನವಾಗಿದ್ದಿತು. ಉಳಿದ ಮೂರು, ಅಸ್ಸಾಂ - ಮಣಿಪುರಗಳಿಂದ ಬಂದ ಮಕ್ಕಳಿಂದ (ಸುಮಾರು ೧೫-೧೬ರ ಮಕ್ಕಳು - ಗಂಡು ಮತ್ತು ಹೆಣ್ಣು ಸೇರಿದ ತಂಡಗಳು) ಸಾಧ್ಯವಾದ ಮೂರೂ ಬಗೆಯಲ್ಲಿ 'ರಂಗಭೂಮಿ' ವಿಶಿಷ್ಟತೆಯಿಂದ ಕೂಡಿದ್ದುವು.



# ಬೆಂಗಳೂರಿನಲ್ಲಿ ಒಂದು ವಿಶಿಷ್ಟ ಮಕ್ಕಳ ನಾಟಕೋತ್ಸವ

ಕ. ವೆಂ. ರಾಜಗೋಪಾಲ

**ಮೊದಲ ದಿನದ ಸಂಜೆ:** ಮಣಿಪುರಿಯ ಮಕ್ಕಳು (ಹನ್ನೊಂದು ಕುಮಾರರು) ಪುಂಗ್ (ಮದ್ದಲೆ) ಚೊಲ್ಲಮ್ – ಕಲಾವಿದರನ್ನು ಆದೊಂದು ಥೋಬಲ್ ವಾಂಗ್ಜಿಂಗ್ ಜಿಲ್ಲೆಯ 'ಜನ್ ಶಿಕ್ಷಣ್ ಸಂಸ್ಥಾನ್' ಆಯೋಜಿಸಿದ ಪ್ರದರ್ಶನ ಪ್ರೇಕ್ಷಕರನ್ನು ರಂಜಿಸುವಲ್ಲಿ ಯಶಸ್ವಿಯಾಯಿತು. ಈ ತಂಡದವರು ಗುರು ಸ್ಯಾಗೊಲ್ ಶೆಮ್ ಸಿಂಘ ಜೀತ್‌ಸಿಂಗ್, ಅವರಿಂದ ತರಪೇತಿಯನ್ನು ಪಡೆದವರು.

ನಮ್ಮ ಮಕ್ಕಳಿಗೆ ಇಂತಹ ಚಟುವಟಿಕೆಯ ಅವಶ್ಯಕತೆಯಿದೆ. ಇವರು ಮದ್ದಳೆಯನ್ನು ಬಾರಿಸುತ್ತಾ, ವ್ಯಾಯಾಮದಿಂದ ಪೂರಕವಾದ ರೀತಿನೀತಿಯಲ್ಲಿ ತಮ್ಮ ಚಾತುರ್ಯದಿಂದ ಪ್ರೌಢರಿಗೂ ಇಂತಹ 'ಅವಶ್ಯಕತೆ'ಯೊಂದನ್ನು ಪ್ರದರ್ಶಿಸಿದ ಸಮಯ ನಲವತ್ತೈದು ನಿಮಿಷಗಳು. ವಾದ್ಯಗಳನ್ನು ಬಾರಿಸುತ್ತಾ (ಮದ್ದಳೆಗಳಿಂದ ಮಾತ್ರ) ದೈಹಿಕ ಆಯಾಮಗಳಲ್ಲಿ ನೃತ್ಯಕ್ಕೆ ಸರಿಸಮನಾದ ರೀತಿಯಲ್ಲಿ ಅದ್ಭುತ ಪರಿಣಾಮವನ್ನುಂಟುಮಾಡಿದರು. ಈ ಮಕ್ಕಳು ಮುಗ್ಧರು. ಸಾಧಿಸಿದ್ದು 'ಮಂತ್ರ ಮುಗ್ಧತೆ'. ಹಿರಿಯ ಪ್ರೇಕ್ಷಕರನ್ನೂ ಆಕರ್ಷಿಸಿದ ಬಗೆ ಆಶ್ಚರ್ಯಕರವಾಗಿದ್ದಿತು. ಈ ಮಕ್ಕಳು ವೈಷ್ಣವಪಂಥಕ್ಕೆ ಸೇರಿದವರೆಂದು ಪ್ರಸಾದನದಿಂದ ಕಂಡುಬಂದರೂ ಅಂಥ ಮಿತಿಯನ್ನು ಮೀರಿದ ಪ್ರದರ್ಶನವನ್ನು 'ಅನುಕರಣೀಯ'ವೆಂಬಂತೆ ಸಾಧಿಸಿದರು (ನಮ್ಮ ಮಕ್ಕಳ ರಂಗಭೂಮಿಗೂ ಇಂಥದು ಸಾಧ್ಯವಾಗಬೇಕು ಎನ್ನಬಹುದು). ಇದನ್ನು ಮುಖ್ಯವಾಗಿ ಮಕ್ಕಳ ರಂಗೋತ್ಸವದ ಪ್ರವೇಶವೆನ್ನಲೂಬಹುದು.

**ಎರಡನೇ ದಿನದ ಸಂಜೆ:** ಜರ್ಮನಿಯಿಂದ ಬಂದ ತಂಡ (ಇಬ್ಬರು+ಮೂವರು ವಾದ್ಯವೃಂದ)ವು ಮಕ್ಕಳನ್ನು ಪೂರ್ಣವಾಗಿ ಪ್ರದರ್ಶನದಲ್ಲಿ ಸೇರಿಕೊಳ್ಳುವ ಸಾಧ್ಯತೆಯಾಗಿದ್ದಿತು. ಇಂಥ ಪ್ರದರ್ಶನವು ತಾಂತ್ರಿಕ ಆಯಾಮಗಳಿಂದ ನೆಳಲು-ಬೆಳಕಿನ ಆಟವೆನ್ನಬಹುದಾದಂತಹ ಸ್ಟಿಕ್ ಮ್ಯಾನ್ ಎಂಬ ಹೆಸರಿನ ಒಂದು ಗೊಂಬೆ, ಅದರ ನಿವಾಸವಾಗಿದ್ದ ಒಂದು ಮರದ 'ಪೊಟರೆ'ಯಿಂದ ಹೊರಹಾಕಲ್ಪಟ್ಟು, ಮುಂದೆ ಚಳಿಗಾಲದ ಹವಾಮಾನದಲ್ಲಿ ಹೋದಹೋದ ಕಡೆ ಕಷ್ಟಕ್ಕೆ ಸಿಕ್ಕಿಬೀಳುತ್ತಾ ಉಳಿಯುವಲ್ಲಿ (ಮಕ್ಕಳು ಪ್ರೇಕ್ಷಕರನ್ನು) ಚಿಂತನೆಗೆ ಗುರಿಪಡಿಸಿದ ರೀತಿಯೇ ವಿಶೇಷವಾಗಿದ್ದಿತು. ಇದರ ಪ್ರದರ್ಶನ ತಂತ್ರದಲ್ಲಿ ಬೆಳಕಿನ ರೀತಿಯು ವೈಜ್ಞಾನಿಕವಾಗಿದ್ದು, ಮಕ್ಕಳು ಚಿತ್ರಗಳಿಂದ ಕೂಡಿದ ಪುಸ್ತಕವೊಂದನ್ನು ನೋಡುತ್ತಾ ತನ್ಮಯವಾಗುವ 'ಬಗೆ'ಯಲ್ಲಿ – ಒಂದು ಸಾಮಾಜಿಕ ಪ್ರಕ್ರಿಯೆಯನ್ನು ಸಾಧಿಸಿದಂತಾಗಿತ್ತು. ಉದಾಹರಣೆಗೆ, ಮಕ್ಕಳು ಚಿತ್ರದಲ್ಲಿ ಕಾಣುವ ಒಂದು ಬಾತುಕೋಳಿ ಮರಿಸಹಿತ ನೀರಿನಲ್ಲಿ ವರ್ತಿಸುವ ಬಗೆಯನ್ನು (೧) ಬಾತುಕೋಳಿಯು ತನ್ನ ಕೊರಳನ್ನು ಹಿಂದಕ್ಕೆ ಬಾಗಿಸಿ ರೆಕ್ಕೆಯನ್ನು ಕೆದಕಿಕೊಂಡುದು, ತೇಲಿಬಂದ ಸ್ಟಿಕ್ ಮ್ಯಾನ್ ಗೊಂಬೆಯನ್ನು ಸಲೀಸಾಗಿ ಕೊಕ್ಕಿನಿಂದ ಹಿಡಿದೆತ್ತಿ ರೆಕ್ಕೆಯಲ್ಲಿ ಸೇರಿಸಿಕೊಳ್ಳುತ್ತದೆ. (೨) ಹಿಮಪ್ರಾಂತ್ಯದಲ್ಲಿ – ಉತ್ತರ ಯೂರೋಪು ಪ್ರಾದೇಶಿಕತೆಯಲ್ಲಿ ನಾಯಿಗಳಿಂದ ಎಳೆಯಲಾಗುವ ಓಟದ ಸ್ಲೆಡ್ಜ್ ಗಾಡಿಗಳ ಕಲ್ಪನೆಯನ್ನು ಗಾಳಿಯಲ್ಲಿ ತೋರಿದಂತೆ, ಅಭಿನಯಿಸುವಲ್ಲಿ ಮೇಲಕ್ಕೆತ್ತಿ ಆಡಿಸಿದ ರೀತಿಗೆ ಬೆಳಕಿನ ಸಂಯೋಜನೆಯು 'ಸಹಜತೆ'ಯನ್ನು ಸಾಧಿಸಿದ ಬಗೆ – ಇವುಗಳಂತೆ ಕಥಾನಕವು ಹೆಜ್ಜೆಹೆಜ್ಜೆಗೂ ಸಾಧ್ಯವಾದುದು ಒಂದು ವಿಶೇಷವಾಗಿದ್ದಿತು. (೩) ವಿಶೇಷವೆಂದರೆ ಪ್ರದರ್ಶನವು ಮಕ್ಕಳ ಮನೋಧರ್ಮವನ್ನು ಸೂರೆಗೊಳ್ಳುವಂತೆ (ಇಬ್ಬರು ಪ್ರೌಢರು ಮತ್ತು ಮೂವರು 'ಮೇಳ'ದವರು) ಸಾಧಿಸಿದ ಪ್ರದರ್ಶನ. ಕೊನೆಗೆ ಪ್ರೇಕ್ಷಕ ಮಕ್ಕಳನ್ನು ಸ್ಟೇಜಿಗೆ ಕರೆದು ಅದೃಷ್ಟದ 'ಬೌಲ್' ಒಂದಕ್ಕೆ ಕೋಲಿನ ತುಂಡನ್ನು ಎಸೆಯುವಂತೆ ಹೇಳಿ, ಮಾಡಿಸಿ, ಅಂಥ ಮಕ್ಕಳಿಗೆ (ಇಲ್ಲಿ 'ರಂಗ'ಕ್ಕೆ ಬಂದ ಮೂವರು ಮಕ್ಕಳಿಗೆ) ಒಂದೊಂದು 'ಹೂ'ವನ್ನು ಕೊಟ್ಟು ಮೆಚ್ಚಿಸಿದ ಬಗೆ !

ಒಟ್ಟಿನಲ್ಲಿ 'ಸ್ಟಿಕ್ ಮ್ಯಾನ್' ಎಂಬ ದುರ್ದೈವಿಯು ತನ್ನ ಕುಟುಂಬದಿಂದ ಬೇರೆಯಾಗಿ ಒಂದು ಕೋಲಿನಂತಹ ತೆಳ್ಳನೆಯ ಪುಟಾಣಿ ಮನುಷ್ಯನ ಒಂದು ದುರಂತ ಮತ್ತು ವಿಲಕ್ಷಣಕತೆಯನ್ನು ನಾಟಕವಾಗಿಸಲಾಗಿತ್ತು. ಇದರಲ್ಲಿ ಪ್ರೇಕ್ಷಕ ಮಕ್ಕಳು ವಿಶ್ವಾಸದಿಂದ ರಂಗಕ್ಕೆ ಬಂದು ಸಂತೋಷದಿಂದ ಭಾಗಿಗಳಾಗುವಂತೆ ಪ್ರದರ್ಶನವು ಮಕ್ಕಳಿಗಾಗಿಯೇ ಏರ್ಪಡಿಸಿದಂತಿತ್ತು. ಇದನ್ನು 'ಸಾಲ್ಟ್+ಪೆಪ್ಪರ್' ಜರ್ಮನ್ ರಂಗತಂಡವು ಸುಮಾರು ೨೭ ವರ್ಷಗಳ ಕಾಲದಿಂದಲೂ ದೇಶವಿದೇಶಗಳಲ್ಲಿ ಯಶಸ್ವಿಯಾಗಿ ಪ್ರದರ್ಶಿಸುತ್ತ ಬಂದಿದೆ. ಅಂತರರಾಷ್ಟ್ರೀಯ ನಾಟಕೋತ್ಸವಗಳಲ್ಲೂ ಭಾಗವಹಿಸಿ ಭಾರತದಲ್ಲಿ ೨೦೦೯ರಿಂದಲೂ ದೇಶದ ಅನೇಕ ಪಟ್ಟಣಗಳಲ್ಲಿ 'ತನ್ನತನ'ವನ್ನು ಮೆರೆದಿದೆ.

**ಮೂರನೇ ದಿನದ ಸಂಜೆ :** ಅಸ್ಸಾಮಿನ ದೆರ್ಗಾಂವ್ ಎಂಬಲ್ಲಿ ೨೦೦೬ರಿಂದ ನಾರ್ತ್ ಈಸ್ಟ್ ಥಿಯೇಟರ್ ಅಕಾಡೆಮಿ (NETA) ಮಿ. ಸೀಮಂತ ಫುಕನ್ ಎಂಬ ಅನುಭವಿ ರಂಗತಜ್ಞರ ನಿರ್ದೇಶನದಲ್ಲಿ 'ಪ್ಲಾಟ್‌ಫಾರಂ' ಎಂಬ ಹಿರಿಯ ಮತ್ತು ಕಿರಿಯರು ಎಲ್ಲರೂ ಭಾಗವಹಿಸುವಂತೆ ಗಮನಿಸಬೇಕಾದ ಮುಖ್ಯವಾಗಿ, ಕಿರಿಯ ತಲೆಮಾರಿನ, ಒಂದು ಸಾಮಾಜಿಕ 'ತಲೆಬೇನೆ'ಯೆಂದು ಗುರುತಿಸಬಹುದಾದ, ಮಕ್ಕಳಿಗೆ ಸಂಬಂಧಿಸಿದ ವಸ್ತುವನ್ನುಳ್ಳ ನಾಟಕ ಇದು. ತಾತ್ವಿಕವಾಗಿ ಎಲ್ಲ ಹಿರಿಯರು ಮತ್ತು ಮಕ್ಕಳ ಗಮನಕ್ಕೆ ಬರಬೇಕಾದುದಾಗಿದೆ. ಇದರಲ್ಲಿ 'ಮಾಮಾ' ಎಂಬ ಸುಧಾರಕನು ಮಧ್ಯವರ್ತಿಯಾಗಿ ದುಡಿಯುತ್ತಾನೆ. ಆತನ ಅನುಭವಗಳ (ಡೈರಿ) ದಿನಚರಿಗೆ ಸೇರಿಹೋಗುವಂತೆ ಒಂದು ಅನುಭವವು ನಾಟಕ ರೂಪವಾಗಿದೆ. ಇಲ್ಲಿ ಮಕ್ಕಳೇ ಮುಖ್ಯ. ಅವರು ನಮ್ಮ ದೇಶದ ಬಡತನದ ಪ್ರತಿನಿಧಿಗಳು ಕೂಡ. ಒಂದು ರೈಲ್ವೆ ಪ್ಲಾಟ್‌ಫಾರಂಗೆ ಬಂದ ತಿರುಪೆಯ ಮಕ್ಕಳು 'ಅಧಿಕಾರ'ದ ಕಾಟಕ್ಕೆ ಸಿಕ್ಕಿರುವಲ್ಲಿ ನೆರವಾಗಿ ಸುಧಾರಕ 'ಮಾಮಾ' ಬರುತ್ತಾನೆ. ಒಬ್ಬ ಕುರುಡಿಯೂ ಸೇರಿದಂತೆ ವಿದ್ಯಾಭ್ಯಾಸವನ್ನು ಬಯಸುವ ಒಬ್ಬಾಕೆ ಮುಂದಾಳಿನಂತಿರುವವಳು, ರೈಲ್ವೆ ಅಧಿಕಾರಿಗಳು ಮತ್ತು ಪೊಲೀಸರಿಂದ ಒದಗುವ ಸಂಕಷ್ಟಗಳು – ಎಲ್ಲವೂ 'ಅಸಾಮಿ' ಭಾಷೆಯಲ್ಲಿ ಇರುವುದರಿಂದ ನಮಗೆ ಕೇವಲ ಘಟನೆಗಳು ಮಾತ್ರ ಗಮನಕ್ಕೆ ಬರುತ್ತವೆ. ಆದುದರಿಂದ ಸನ್ನಿವೇಶದಲ್ಲಿ ಒಡಮೂಡುವ ಪರಿಹಾಸ್ಯವು ಅರ್ಥವಾಗಲು ಕೇವಲ ಊಹೆಯೇ

ಬೇಕಾಗುತ್ತದೆ. ಪ್ರಾಯಶಃ ಈಶಾನ್ಯ ಭಾಗದ ಪ್ರಾಂತಗಳಿಗೆ ಈ ನಾಟಕವು ಹತ್ತಿರದ ಅನುಭವವೇ ಆಗಿರುವಂತಿದೆ. ಇಷ್ಟು ಮಾತ್ರ ಅಭಿನಯದಲ್ಲಿ ಯಶಸ್ವಿಯಾಗುತ್ತದೆ. ಆದರೂ ಈ ನಾಟಕವು ನಮ್ಮ ಮುಂದಿರುವ ಸಾಮಾಜಿಕ 'ಸಮಸ್ಯೆ'ಯೆನ್ನಬಹುದು. ಕಳೆದ ಇಪ್ಪತ್ತು ವರ್ಷಗಳಷ್ಟು ಹಿಂದಿನ ಸರಳತೆಯಲ್ಲಿ ಇದರ ಪ್ರಯೋಗವಾಗಿರುವುದೇ ವಿಶೇಷ! ಇಲ್ಲಿಯ 'ಮಾಮಾ' ಪಾತ್ರ (ನಮ್ಮ) ಬಡತನದ ಸಂಕಟಗಳಿಗೆ ಮಾರ್ಗ ದರ್ಶಕನೂ ಆದಂತಿದೆ– ಪ್ರದರ್ಶನವು ಅಭಿನಯದ ಹಂತದಲ್ಲಿ ಯಶಸ್ವಿಯಾಗಿರುತ್ತದೆ.

**ನಾಲ್ಕನೇ ದಿನ:** 'ದೃಶ್ಯ ವೈಭವ' ಕೊನೆಯ ಪ್ರದರ್ಶನದಲ್ಲಿ ಮಣಿಪುರದ ಮಕ್ಕಳು ಒಂದು ಪೌರಾಣಿಕ ದೃಶ್ಯವೈಭವ ನಡೆಸಿಕೊಟ್ಟರು. ಕಥಾವಸ್ತು ಸುಪ್ರಸಿದ್ಧ ನಾಯಕನಾದ ಶ್ರೀಕೃಷ್ಣನದು, ಭಾಗವತದ ಕಥಾನಕ. ಅದ್ದೂರಿಯಿಂದ ನೃತ್ಯ-ಗೀತ ಭರಿತವಾಗಿ ಮಕ್ಕಳಿಗೆ ಕೇವಲ ಆನಂದದಾಯಕವಾಗುವ ಚಟುವಟಿಕೆಗೆ 'ಅಭಿವ್ಯಕ್ತಿ'ಯನ್ನು ಒದಗಿಸಿದಂತೆ ಸರಳ-ಸುಂದರ! ಕೊಳಲಿನ ವಾದನವಿದೆ, ಹಾಡುಗಳಿವೆ, ಸಲೀಸು ನೃತ್ಯ ಚಟುವಟಿಕೆಯಿದೆ. ಒಟ್ಟಿನಲ್ಲಿ ನಮ್ಮ ಮಕ್ಕಳಿಗೆ 'ವೈಭವ'ವಿದೆ ಅಂಥ ಕಣ್ಣುಕಟ್ಟಿನ ಉಡಿಗೆ ತೊಡಿಗೆ! ಬರುವ ಸಂಕಷ್ಟಗಳಿಗೆ 'ದೈವ'ದ ಪರಿಹಾರವಿದೆ. ಮುಖ್ಯ ವಿಷಯವಾಗಿ ಬದುಕು ಒಂದು ಆಟ ಮತ್ತು ದೈವಲೀಲೆ ಎಂಬುದಕ್ಕೆ ಒತ್ತುಕೊಡಲಾಗಿದೆ.

ಹೀಗೆ ಅಕ್ಟೋಬರ್ ೮ರಿಂದ ೧೧ರವರೆಗೆ ಜರುಗಿದ ನಾಲ್ಕೂ ಪ್ರದರ್ಶನಗಳು ನಮ್ಮ ಈಶಾನ್ಯ ಮಕ್ಕಳ ರಂಗಭೂಮಿಯ ಉತ್ಸವವಾಗಿರುವುದೇ ಒಂದು ವಿಶೇಷ. ಈ ಭಾಗದಲ್ಲಿ 'ರಂಗಭೂಮಿ'ಯು ಬೇರೆಯ 'ಮಾಧ್ಯಮ'ಗಳಿಗಿಂತಲೂ ಯಶಸ್ವಿಯಾಗಿರುವುದನ್ನು ಗುರುತಿಸಬಹುದು. 'ಮಕ್ಕಳ ರಂಗಭೂಮಿ'ಯು ಜೀವಂತವಾಗಿದ್ದಲ್ಲಿ 'ಹಿರಿಯರ ರಂಗಭೂಮಿ'ಯೂ ಜೀವಂತವಾಗಿರಬಲ್ಲದು – ಈ ವಿಚಾರಕ್ಕೆ ಗಮನ ಕೊಟ್ಟಂತೆ ನಮ್ಮ ರಾಷ್ಟ್ರೀಯ ನಾಟಕಶಾಲೆ, ಬೆಂಗಳೂರಿನ ಪ್ರಾದೇಶಿಕ ಸಂಪನ್ಮೂಲವು ಕ್ರಿಯಾಶೀಲವಾಗಿರುವುದು, ಸಂತೋಷದ ವಿಷಯ. ಇದರ ಬಗೆಯಿಂದಾಗಿ 'ಭಾರತೀಯ ರಂಗಭೂಮಿ'ಯ ಎಲ್ಲ ಬಗೆಗಳ ಪರಿಚಯವೂ ಬೆಂಗಳೂರಿನ ಪ್ರೇಕ್ಷಕರಿಗೆ ದೊರಕಬಹುದಾಗಿದೆ. ಸದ್ಯಕ್ಕೆ 'ಇದರ' ನಿರ್ದೇಶಕ ಸುರೇಶ ಆನಗಳ್ಳಿ ಮತ್ತು ಕಾರ್ಯಾಗಾರದ ಜವಾಬ್ದಾರಿಯಲ್ಲಿ 'ಜಂಬೆ' ಇಬ್ಬರಿಗೂ ವಂದನೆಗಳು. ಬೆಂಗಳೂರಿಗೆ ಇಂಥ ಪ್ರದರ್ಶನವು ನಗರದ ಬೇರೆ ಬೇರೆ ಭಾಗಗಳಲ್ಲಿಯೂ ಜರುಗಬೇಕಿದೆ.

**ನಾಟಕ 'ನಿರೊಂತರೆ ಹರಿ ಬೋಲಾಹರಿ'**

ಜಗತ್ತಿನಲ್ಲಿ ದುಷ್ಟಶಕ್ತಿಗಳು ಅಟ್ಟಹಾಸಗೈದಾಗಲೆಲ್ಲ ಶ್ರೀಕೃಷ್ಣನು ಅವತಾರವೆತ್ತಿ ದುಷ್ಟಶಕ್ತಿ ಗಳನ್ನು ಸಂಹರಿಸಿ, ನ್ಯಾಯ ನೀತಿಗೆ ಜಯವನ್ನು ತಂದುಕೊಡುತ್ತಾನೆ. ಶ್ರೀಕೃಷ್ಣನ ಬಾಲಲೀಲೆ ಗಳಲ್ಲಿ ನಾವು ಸ್ವಂತ ಬದುಕನ್ನು ಕಂಡುಕೊಳ್ಳಬಹುದು, ಎನ್ನುವುದು ನಾಟಕದ ಕಥಾವಸ್ತು.

**ನಿರ್ದೇಶಕರು**

ಗೌರಬ್ ಕ್ರ.ಹಜಾರಿಕ ಅವರು ಈಗಲ್ ಸ್ಕೂಲ್ ಆಫ್ ಡ್ರಾಮಾನಲ್ಲಿ ನಟನಾ ವಿಷಯದಲ್ಲಿ ವಿಶೇಷವಾಗಿ ಒಂದು ವರ್ಷದ ಡಿಪ್ಲೋಮ ಪದವಿ, ಸಾಧನಾ ಕೋರಿಯೋಗ್ರಾಫಿಕ್ ಡಾನ್ಸ್ ಫ್ಲೋರ್, ಕೋಲ್ಕತ್ತಾದಲ್ಲಿ ಐದು ವರ್ಷದ ಸೃಜನಾತ್ಮಕ ಸಾಂಪ್ರದಾಯಿಕ ನೃತ್ಯ ಪ್ರಕಾರದಲ್ಲಿ ಡಿಪ್ಲೋಮ ಪದವಿ, ಚಲನಚಿತ್ರ ಛಾಯಾಗ್ರಹಣದಲ್ಲಿ ಫೋಟೋಗ್ರಾಫಿ ಇನ್‌ಸ್ಟಿಟ್ಯೂಟ್ ಆಫ್ ಅಸ್ಸಾಮ್‌ನಲ್ಲಿ ಡಿಪ್ಲೋಮ ಪದವಿ ಮತ್ತು ಪಾಶ್ಚಾತ್ಯ ನೃತ್ಯದಲ್ಲಿ ಸೈಪಾ ಸಂಸ್ಥೆ, ಹೊಸದೆಹಲಿಯಿಂದ ಒಂದು ವರ್ಷದ ಡಿಪ್ಲೋಮ ಪದವಿಯನ್ನು ಪಡೆದಿದ್ದಾರೆ. ಅಸ್ಸಾಮ್ ರಾಜ್ಯದಲ್ಲೆಲ್ಲ ಜಾನಪದ ನೃತ್ಯ, ಸೃಜನಾತ್ಮಕ ಸಾಂಪ್ರದಾಯಿಕ ನೃತ್ಯ, ಪಾಶ್ಚಾತ್ಯ ನೃತ್ಯ ಸಂಯೋಜಕರಾಗಿ, ನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. ಹಲವಾರು ಅಸ್ಸಾಮಿನ ಚಲನಚಿತ್ರಗಳಿಗೆ, ವಿಡಿಯೊ ಅಲ್ಬಮ್‌ಗಳಿಗೆ ಮತ್ತು ಸಂಚಾರಿ ಥಿಯೇಟರುಗಳಿಗಾಗಿ ಕೆಲಸ ಮಾಡಿದ್ದಾರೆ. ಇದಲ್ಲದೆ ಶ್ರೀ ಹಜಾರಿಕ ಅವರು ಹಲವಾರು ತಂಡದ ಕಿರಿಯರು ಮತ್ತು ಹಿರಿಯರು ಭಾಗವಹಿಸಿದ ಕಾರ್ಯಾಗಾರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಮತ್ತು ನಿರ್ದೇಶಕರಾಗಿ ಭಾಗವಹಿಸಿದ್ದಾರೆ. ಮತ್ತು ಹಲವಾರು ಪ್ರಶಸ್ತಿಗಳಿಗೆ ಭಾಜನರು.

**ತಂಡದ ಕುರಿತು**

೨೦೦೯ರಲ್ಲಿ, ಅಸ್ಸಾಮಿನ ನಗಾಂವ್ ಜಿಲ್ಲೆಯ ಸಣ್ಣ ಪಟ್ಟಣದಲ್ಲಿ ಸೂತ್ರಧಾರ್ ತಂಡ ಹುಟ್ಟಿಕೊಂಡಿತು. ಮಾನ್ಯ ಶ್ರೀಮಂತ ಶಂಕರ್ ದೇವ್ ಅವರ ಮಾರ್ಗದಶನದಲ್ಲಿ ಈ ತಂಡ ಹಲವಾರು ಬಗೆಯ ಕಾರ್ಯಚಟುವಟಿಕೆಗಳಲ್ಲಿ ತೊಡಗಿಕೊಂಡಿದೆ. ಜಾನಪದ ಮತ್ತು ಸಾಂಪ್ರದಾಯಿಕ ಸಂಸ್ಕೃತಿಯನ್ನು ಉಳಿಸುವುದು ಮತ್ತು ಬೆಳೆಸುವುದು ಇದರ ಗುರಿಯಾಗಿದೆ. ಶುರುವಾತಿನಿಂದಲೇ ಸತತವಾಗಿ ಕಮ್ಮಟಗಳನ್ನು ಏರ್ಪಡಿಸುತ್ತ, ನಾಟಕಗಳನ್ನು ಮಾಡುತ್ತ, ಸಂಗೀತ, ನೃತ್ಯ ಮತ್ತು ಅಭಿನಯಗಳಲ್ಲಿ ವಿದ್ಯಾರ್ಥಿಗಳನ್ನು ತರಬೇತುಗೊಳಿಸುತ್ತಾ ಬಂದಿದೆ. ಈ ತಂಡ ಕೇವಲ ವಿದ್ಯಾರ್ಥಿಯನ್ನು ತರಬೇತು ಗೊಳಿಸುವುದಷ್ಟೆ ಅಲ್ಲ, ಆರೋಗ್ಯವಂತ ಸುವ್ಯವಸ್ಥಿತ ಸಮಾಜವನ್ನು ನಿರ್ಮಿಸುವಲ್ಲಿ ಅವರಿಗೆ ದಾರಿದೀಪವಾಗಿದೆ.

**ನಾಟಕ - ಪ್ಲಾಟ್‌ಫಾರ್ಮ್**

ಹೊಟ್ಟೆಪಾಡಿಗಾಗಿ ಸಣ್ಣಪುಟ್ಟ ಕೆಲಸಗಳನ್ನು ಮಾಡುತ್ತಾ, ರೈಲ್ವೆ ಪ್ಲಾಟ್‌ಫಾರಂನ ಮೇಲೆ ಜೀವಿಸುವ ಕೆಲವು ಅಶಿಕ್ಷಿತ ಮತ್ತು ಅನಾಥ ಮಕ್ಕಳು ಈ ನಾಟಕದ ಮುಖ್ಯ ಪಾತ್ರಗಳು. ಒಂದು ದಿನ ಊರಲ್ಲಿ ಧಾರ್ಮಿಕ ಹಿಂಸಾಚಾರ ಉದ್ಭವಗೊಂಡು ಎಲ್ಲ ಕಡೆ ಅಶಾಂತಿ ಅಸಹಕಾರ ತಾಂಡವವಾಡಿದರೂ, ಅದರಿಂದ ಈ ಮಕ್ಕಳ ಒಗ್ಗಟ್ಟು ಒಡೆಯುವುದಿಲ್ಲ. ಆದರೆ ಸ್ಟೇಷನ್ ಮಾಸ್ಟರ್ ಆ ಮಕ್ಕಳನ್ನು ರೈಲ್ವೆ ಪ್ಲಾಟ್‌ಫಾರಂಅನ್ನು ತೊರೆದುಹೋಗಲು ಹೇಳಿದಾಗ ಮಾತ್ರ ಅವರೆಲ್ಲ ಅನಿವಾರ್ಯವಾಗಿ ಅಗಲಬೇಕಾಗಿ ಬಂದು, ತಮ್ಮ ಭವಿಷ್ಯದ ಬಗ್ಗೆ ಚಿಂತಿಸುತ್ತಿದ್ದಾಗ, ಅವರೆಲ್ಲರಿಂದ ಮಾಮಾ ಎಂದು ಕರೆಯಲ್ಪಡುವ ವ್ಯಕ್ತಿಯ ಆಗಮನವಾಗುತ್ತದೆ. ಅವನು ಅವರಿಗೆಲ್ಲ ಧೈರ್ಯದಿಂದಿರಲು ಹೇಳಿ, ಅವರು ತಮ್ಮ ಹಕ್ಕಿಗಾಗಿ ಹೋರಾಡುವಂತೆ ಪ್ರಚೋದಿಸುತ್ತಾನೆ. ಅನಾಥ ಅಥವಾ ಪ್ಲಾಟ್‌ಫಾರಂನ ಮಕ್ಕಳು ಮುಂದಾಳತ್ವ ವಹಿಸಿ, ದೇಶದ ಎಲ್ಲ ವಸತಿರಹಿತ ಮಕ್ಕಳನ್ನು ಒಂದುಗೂಡಿಸಿ ಹಕ್ಕಿಗಾಗಿ ಹೋರಾಡಲು ವೇದಿಕೆ ಒಂದನ್ನು ನಿರ್ಮಿಸುತ್ತಾರೆ. ಅದು ಅವರೆಲ್ಲರನ್ನು ಉಚ್ಚಾಟಿಸಲಾಗದಂತಹ, ಅವರೆಲ್ಲರ ಬದುಕು ಅರಳಲು ಅನುಕೂಲವಾಗುವಂಥ, ಸಹಜ ಬದುಕಿನ ಪ್ಲಾಟ್‌ಫಾರಂ.

**ನಿರ್ದೇಶಕರು**

ಸೀಮಂತ ಫುಕನ್ ತುಂಬಾ ವರ್ಷಗಳಿಂದ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವವರು. ಹಲವಾರು ವರ್ಷಗಳಿಂದ ಅವರು ಅಸ್ಸಾಮಿನಲ್ಲೆಲ್ಲ ಏಕಾಂಕ ನಾಟಕಗಳನ್ನು ಮಾಡುತ್ತಾ, ನಿರ್ದೇಶನಕ್ಕಾಗಿ ಮತ್ತು ಅಭಿನಯಕ್ಕಾಗಿ ಸುಮಾರು ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಫುಕನ್ ನಾಟಕ ನಿರ್ದೇಶಕರಾಗಿ, ನಟರಾಗಿ ಮತ್ತು ರೇಡಿಯೊ ಮತ್ತು ಕಿರುತೆರೆಯ ಕಲಾವಿದರಾಗಿ ಪ್ರಸಿದ್ಧರು. ಅಸ್ಸಾಮಿನ ಪ್ರಸಿದ್ಧ ತಂಡಗಳಿಗಾಗಿ ಅವರು ಅನೇಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಲೋಪಿತ, ನಟ ಸೂರ್ಯ, ಭೋಗಿರಾಕಿಗಾ, ಕನಕಲತಾ, ಪ್ಲಾಟ್‌ಫಾರಂ, ಸಂತ್ರಾಸ್ ಆಂಡ್ ರೋಸ್ ಇತ್ಯಾದಿ ನಾಟಕಗಳನ್ನು ರಚಿಸಿದ್ದಾರೆ. ಕಮಲ, ಕುಂವರಿ, ಅವರ ಜನಪ್ರಿಯ ವಿಡಿಯೊ ಸಿನಿಮಾಗಳು.

**ತಂಡದ ಕುರಿತು**

ಹೊಸ ಪೀಳಿಗೆಗೆ, ರಂಗಭೂಮಿ ಮತ್ತು ಸಿನಿಮಾದ ಅಭಿನಯವನ್ನು ವ್ಯವಸ್ಥಿತವಾಗಿ ಮತ್ತು ವೈಜ್ಞಾನಿಕವಾಗಿ ಪರಿಚಯಿಸುವ ದೃಷ್ಟಿಯಿಂದ ಅಸ್ಸಾಮಿನ ದೇರ್ಗಾಂವ್ ಎಂಬಲ್ಲಿ ೨೦೦೬ರಲ್ಲಿ 'ನಾರ್ತ್ ಈಸ್ಟ್ ಥಿಯೆಟರ್ ಅಕಾಡೆಮಿ' (ಒಇಟಿಎ) ಹುಟ್ಟಿಕೊಂಡಿತು. ಪ್ರಖ್ಯಾತ ರಂಗಕರ್ಮಿ ಸೀಮಂತ ಫುಕನ್ ಅವರು ತಂಡವನ್ನು ನಿರ್ವಹಿಸುತ್ತಿದ್ದಾರೆ. ಕಳೆದ ಮೂರು ವರ್ಷಗಳಿಂದ ಈ ತಂಡವು ಹಲವಾರು ರಂಗಚಟುವಟಿಕೆಗಳನ್ನು, ಸೆಮಿನಾರ್‌ಗಳನ್ನು, ನಾಟಕಗಳನ್ನು ಆಯೋಜಿಸುತ್ತಾ ಬಂದಿದೆ ಮತ್ತು ಹಲವಾರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನಾಟಕೋತ್ಸವಗಳಲ್ಲಿ ಭಾಗವಹಿಸಿದೆ.

**ನಾಟಕ – ಸ್ಟಿಕ್‌ಮ್ಯಾನ್**

ಮಕ್ಕಳ ಮನಸ್ಸಿನ 'ದ್ರವ್ಯರೂಪ'ಕ್ಕೆ 'ಸಾಕಾರ'ವನ್ನು ಪಡೆದಂತೆ ಚಿತ್ರಗಳನ್ನು ಘನರೂಪತಾಳುತ್ತಾ ಜೀವಂತತನವನ್ನು ಸಾಧಿಸಿದ ಪ್ರದರ್ಶನ. ಅಡ್ಡ ಹೆಸರಿನ ಬಗ್ಗೆ ಎಚ್ಚರವಹಿಸುವಂತೆ, ಸ್ವಂತಿಕೆಯನ್ನು ಕಂಡುಕೊಳ್ಳುವಂತೆ ಪ್ರಭಾವಕಾರಿಯಾದ ಗೊಂಬೆಯಾಟದ ಬಳಕೆಯಿಂದ ತೋರಿಸಿದ 'ಮಕ್ಕಳ ನಾಟಕ' ಮಕ್ಕಳ ಕಾಲ್ಪನಿಕ ಜಗತ್ತಿಗೆ ಪುಟಗಳನ್ನು ತೆರೆಯುತ್ತಾ ಎದುರಿಸಬೇಕಾದ ಕಷ್ಟಗಳನ್ನು ತೋರಿಸುತ್ತಾ ಎಲ್ಲಿಯೂ ನೀತಿಯನ್ನು ಬಾಯಿಬಿಟ್ಟು ಹೇಳದೆ ಬದುಕುವ ಅರ್ಥವಂತಿಕೆಯನ್ನು ತೋರಿಸಿದ ಹಿರಿಮೆ ಈ ಪ್ರದರ್ಶನದ್ದು.

'ಸ್ಟಿಕ್ ಮ್ಯಾನ್', ದುರ್ದೈವದಿಂದಾಗಿ ಕೆಲವು ಘಟನೆಗಳು ನಡೆದುಹೋಗಿ ತನ್ನ ಕುಟುಂಬದಿಂದ ಬೇರೆಯಾದ ಕೋಲಿನಂತಹ ತೆಳ್ಳನೆಯ ಪುಟಾಣಿ ಮನುಷ್ಯನ ಒಂದು ದುರಂತ ಮತ್ತು ವಿಲಕ್ಷಣ ಕತೆಯುಳ್ಳ ನಾಟಕ. ಒಬ್ಬಂಟಿಯಾಗಿ ಅವನು ಅಪಾಯಕಾರಿ ಜಗತ್ತನ್ನು ಎದುರಿಸಬೇಕಾಗುತ್ತದೆ. ಅವನನ್ನು ಯಾರೂ ಸ್ಟಿಕ್ ಮ್ಯಾನ್ ಅಂತ ಗುರುತಿಸಿದೆ, ನಿಜವಾದ ಸ್ಟಿಕ್ ಎಂದೇ ಭಾವಿಸುವುದರಿಂದ ಅವನ ಬದುಕು ಇನ್ನಷ್ಟು ದುಸ್ತರಗೊಳ್ಳುತ್ತಾ ಬದುಕಿನಲ್ಲಿ ಒಂದಾದ

(೫೮ನೇ ಪುಟಕ್ಕೆ)

# ಪ್ರಾಣೋತ್ಕ್ರಮಣದ ಸ್ಥಿತಿಯಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳು

**ಡಾ|| ಮಹಾಬಲೇಶ್ವರ ರಾವ್**

**ಮೇ**ಲಿನ ಶೀರ್ಷಿಕೆ ಓದಿ ಯಾರಾದರೂ ಗಾಬರಿಯಾಗಬಹುದು. ಅಪಾಯದ ಗಂಟೆ ಬಾರಿಸುವ ಈ ಶೀರ್ಷಿಕೆ ನೀಡಿರುವುದು ಏನೋ ಒಂದು ಉನ್ಮಾದದ ಸ್ಥಿತಿ, 'ಸೆನ್ಸೇಶನ್' ನಿರ್ಮಾಣ ಮಾಡಲಿಕ್ಕಲ್ಲ. ಅನುದಾನಿತ ಶಿಕ್ಷಣ ಸಂಸ್ಥೆಗಳ ಆಗುಹೋಗುಗಳನ್ನು ಸನಿಹದಿಂದ ಬಲ್ಲವರಿಗೆ ಇದು ಖಂಡಿತಕ್ಕೂ ಉತ್ಪ್ರೇಕ್ಷೆ ಎಂದೆನಿಸದು.

ಕೇಂದ್ರ ಸರಕಾರ ಇಂದು ಶಿಕ್ಷಣದಲ್ಲಿ 'ಸಾರ್ವಜನಿಕ-ಖಾಸಗಿ ಭಾಗಿತ್ವ'ದ ಬಗ್ಗೆ ದೊಡ್ಡ ಗಂಟಲಲ್ಲಿ ಮಾತನಾಡುತ್ತಿದೆ. ಕೆಲವೊಂದು ಸಂಸ್ಥೆಗಳನ್ನು ಖಾಸಗಿಯವರಿಗೆ ವಹಿಸಿಕೊಡಲು ಮುಂದಾಗುತ್ತಿದೆ. ಕೆಲವು ಕ್ಷೇತ್ರಗಳಿಂದ ತಾನು ಹಿಂದಕ್ಕೆ ಸರಿಯುತ್ತಿದೆ. ಅನುದಾನಿತ ವ್ಯವಸ್ಥೆ ಸಾರ್ವಜನಿಕ ಖಾಸಗಿ ಭಾಗಿತ್ವದ ಅತ್ಯಂತ ಉದಾರವಾದಿ ಮುಖವಾಗಿದ್ದು ಕಳೆದ ೧೦೦-೧೫೦ ವರ್ಷಗಳಲ್ಲಿ ತುಂಬ ಚೆನ್ನಾಗಿ ನಡೆದುಕೊಂಡು ಬಂದಿದೆ. ಆದರೆ ಇತ್ತೀಚಿನ ಎರಡು ಮೂರು ದಶಕಗಳಲ್ಲಿ ಈ ವ್ಯವಸ್ಥೆಯ ಮೇಲೆ ಸರಕಾರ ದೊಡ್ಡ ರೀತಿಯಲ್ಲಿ ಗದಾಪ್ರಹಾರ ಮಾಡುತ್ತಿದೆ. ಪರಿಸ್ಥಿತಿ ಹೀಗೆಯೇ ಮುಂದುವರಿದರೆ, ಅನುದಾನಿತ ಶಿಕ್ಷಣ ಸಂಸ್ಥೆಗಳವರು ತಮ್ಮ ಜಡತ್ವವನ್ನು ಕೊಡವಿಕೊಂಡು ದೊಡ್ಡ ಮಟ್ಟದಲ್ಲಿ ಹೋರಾಟ ಮಾಡದಿದ್ದರೆ ಪ್ರಾಯಶಃ ಇನ್ನೊಂದು ದಶಕದಲ್ಲಿ ಈ ವ್ಯವಸ್ಥೆ ಖಂಡಿತಕ್ಕೂ ಪಳೆಯುಳಿಕೆಯಾಗಿಬಿಡುತ್ತದೆ.

ಹಳೆಯ ಮೈಸೂರು ಪ್ರಾಂತ್ಯದಲ್ಲಿ ಹಾಗೂ ಕರ್ನಾಟಕದ ಇನ್ನಿತರ ಭಾಗಗಳಲ್ಲಿ ಸರಕಾರಿ ಸಂಸ್ಥೆಗಳ ಪ್ರಾಬಲ್ಯ ಅಧಿಕ. ಆದರೆ ಕರಾವಳಿ ಕರ್ನಾಟಕದ ಸಾಹಸಿ ಜನತೆ ಸರಕಾರದ ಶೈಕ್ಷಣಿಕ ಪ್ರಯತ್ನಗಳಿಗಾಗಿ ಕಾಯದೆ, ತಂತಮ್ಮ ಊರುಗಳ ಉದ್ಧಾರವನ್ನು ತಾವೇ ಮಾಡಬೇಕೆಂಬ ನೆಲೆಯಲ್ಲಿ ಹಳ್ಳಿಹಳ್ಳಿಗಳಲ್ಲಿ ಖಾಸಗಿಯಾಗಿ ಶಾಲೆಗಳನ್ನು ತೆರೆದು ಸರಕಾರದ ಅನುದಾನ ಪಡೆದುಕೊಂಡು ಬೆಳೆಸಿದರು. ಡಾ|| ಮಾಧವ ಪೈ ಅವರು ಈ ವ್ಯವಸ್ಥೆಯ ಲಾಭ ಪಡೆದುಕೊಂಡು ಪ್ರೌಢಶಾಲೆಗಳನ್ನು, ಪದವಿ ಕಾಲೇಜುಗಳನ್ನು ಆರಂಭಿಸಿದರು. ಮುಂದೆ ಸರಕಾರಿ ಅನುದಾನಕ್ಕೆ ಕೈಚಾಚದೆ ವಿದ್ಯಾರ್ಥಿಗಳು ನೀಡುವ 'ದಾನಶುಲ್ಕ'ವನ್ನು ಆಧರಿಸಿ ವೈದ್ಯಕೀಯ, ತಾಂತ್ರಿಕ, ಕಾನೂನು, ಶಿಕ್ಷಣ ಇತ್ಯಾದಿ ವೃತ್ತಿಪರ ವಿದ್ಯಾಲಯಗಳನ್ನು ಕಟ್ಟಿ ಬೆಳೆಸಿದರು. ಇವರಿಂದ ಸ್ಫೂರ್ತಿ ಪಡೆದ ಅನೇಕರು ಕರಾವಳಿ ಜಿಲ್ಲೆಗಳ ಶೈಕ್ಷಣಿಕ ಚಿತ್ರವನ್ನೇ ಬದಲಿಸಿದರು. ಖಾಸಗಿ ಪ್ರಯತ್ನವಿಲ್ಲದಿರುತ್ತಿದ್ದರೆ ಕರಾವಳಿ ಜಿಲ್ಲೆಗಳು ಇಂದಿಗೂ ಶೈಕ್ಷಣಿಕವಾಗಿ ಹಿಂದುಳಿದ ಜಿಲ್ಲೆಗಳಾಗಿರುತ್ತಿದ್ದವು ಎಂಬುದು ಐತಿಹಾಸಿಕ ಸತ್ಯ.

ಸರಕಾರದಿಂದ ಅನುದಾನ ಪಡೆದ ಶಿಕ್ಷಣ ಸಂಸ್ಥೆಗಳು ವಿಪರೀತ ಬಂಡವಾಳ ಹೂಡುವ ಪ್ರಮೇಯ ಒದಗದೆ, ಒಳ್ಳೆಯ ಗುಣಮಟ್ಟದ ಶಿಕ್ಷಣವನ್ನು ಸೀಮಿತ ವೆಚ್ಚದಲ್ಲಿ ಸಮಾಜಕ್ಕೆ ಒದಗಿಸುವುದು ಸಾಧ್ಯವಾಗಿದೆ. ಸರಕಾರದಿಂದ ವೇತನಾನುದಾನ ಒದಗುವುದರಿಂದ ಶಿಕ್ಷಕರು ಕೂಡ ಸೇವಾಭದ್ರತೆಯ ಬಗ್ಗೆ ಚಿಂತಿಸದೆ ನಿಸ್ಪೃಹತೆಯಿಂದ ದುಡಿಯುವುದು ಸಾಧ್ಯವಾಗಿದೆ. ಖಾಸಗಿ ಆಡಳಿತ ಮಂಡಳಿಗಳವರಿಗೆ ವಾರ್ಷಿಕ ಒಂದೆರಡು ಲಕ್ಷ ರೂ. ಕೈಬಿಟ್ಟುಹೋದರೂ ಸಾಮಾಜಿಕ ಸೇವೆ ಸಲ್ಲಿಸಿದ ತೃಪ್ತಿ ಮೂಡುತ್ತಿತ್ತು.

ಆದರೀಗ ಚಿತ್ರ ತಲೆಕೆಳಗಾಗಿದೆ ! ಅನುದಾನಿತ ಶಾಲೆ, ಕಾಲೇಜುಗಳನ್ನು ತೆರೆಯುವ ಪರಿಸ್ಥಿತಿಯೇ ಇಲ್ಲ. 'ಶಾಶ್ವತ ಅನುದಾನರಹಿತ' ಎಂದು ಮುಚ್ಚಳಿಕೆ ಬರೆದುಕೊಟ್ಟರೆ ಮಾತ್ರವೇ ಸರಕಾರ ಶಿಕ್ಷಣ ಸಂಸ್ಥೆಗಳನ್ನು ತೆರೆಯಲು ಖಾಸಗಿಯವರಿಗೆ ಅನುಮತಿ ನೀಡುತ್ತದೆ ! ಇಂಥ ಸ್ಥಿತಿಯಲ್ಲಿ ಕನ್ನಡನಾಡು, ನುಡಿಯ ಮೇಲಿನ ಅಭಿಮಾನದಿಂದ ಯಾರು ತಾನೆ ಕನ್ನಡ ಮಾಧ್ಯಮ ಶಾಲೆ ತೆರೆಯಲು ಮುಂದೆ ಬರುತ್ತಾರೆ ? ಆದುದರಿಂದಲೆ ಕಂಡಕಂಡಲ್ಲಿ ಆಂಗ್ಲಮಾಧ್ಯಮ ಶಾಲೆಗಳ ಗೂಡಂಗಡಿಗಳು ತರಹೇವಾರಿ ಹೆಸರುಗಳಲ್ಲಿ ತಲೆಯೆತ್ತಿವೆ ! ತೊಂಬತ್ತರ ಆಸುಪಾಸಿನಲ್ಲಿ ಆರಂಭಗೊಂಡ ಕನ್ನಡ ಮಾಧ್ಯಮ ಶಾಲೆಗಳಿಗೆ ಈಗ ಸರಕಾರ ಕೊಂಚ ಕೊಂಚವಾಗಿ ಅನುದಾನ ನೀಡಲು ತೊಡಗಿದೆ. ಈ ಅನುದಾನ ಗಿಟ್ಟಿಸಿಕೊಳ್ಳಲು ಶಾಲಾ ಆಡಳಿತ ಮಂಡಳಿಗಳು ಹಾಗೂ ಸಿಬ್ಬಂದಿ ವರ್ಗದವರು ನಡೆಸುವ 'ಪೂಜೆ', ಕೊಡುವ 'ದಕ್ಷಿಣೆ' ಯಾವ ಕಡತಗಳಲ್ಲೂ ದಾಖಲಾಗುವುದಿಲ್ಲ! ಇದು ಲೋಕಕ್ಕೇ ತಿಳಿದ ಸತ್ಯ !

ಒಂದು ಕಾಲಕ್ಕೆ ಸರಕಾರ ನಡೆಸಿಕೊಂಡು ಬರುತ್ತಿದ್ದ ಶಿಕ್ಷಣ ಸಂಸ್ಥೆಗಳ ಸ್ಥಿತಿ ತೀರ ಶೋಚನೀಯವಾಗಿತ್ತು. ಈಗ ತುಂಬ ಸುಧಾರಿಸಿದೆ ಎಂಬುದು ಈ ಮಾತಿನ ಅರ್ಥವಲ್ಲ. ಆದರೆ ಕಳೆದ ಎರಡು ದಶಕಗಳಲ್ಲಿ ಸಾಕಷ್ಟು ಹಣ 'ಸರ್ವ ಶಿಕ್ಷಾ ಅಭಿಯಾನ'ದ ಮೂಲಕ ಹರಿದು ಬಂದದ್ದರಿಂದ ಪರಿಸ್ಥಿತಿ ಸುಧಾರಿಸಿದೆ. ಶಿಕ್ಷಕರ ನೇಮಕಾತಿ ಆಗಿದೆ, ಆಗುತ್ತಲಿದೆ. ಸೌಲಭ್ಯಗಳ ಸಂಖ್ಯೆ ಹೆಚ್ಚಿದೆ. ಅನುದಾನಿತ ಶಾಲೆಗಳಿಗೆ ಲಭ್ಯವಿಲ್ಲದ ವಿವಿಧ ಪ್ರೋತ್ಸಾಹನ ಯೋಜನೆಗಳನ್ನು ಸರಕಾರಿ ಶಾಲೆಗಳಿಗೆ ವಿಸ್ತರಿಸಲಾಗಿದೆ. ಸರಕಾರಿ ಶಿಕ್ಷಕರಲ್ಲಿ ಆತ್ಮಾಭಿಮಾನವನ್ನು ತುಂಬಲಾಗಿದೆ. ಸರಕಾರಿ ಶಾಲೆಗಳು ಖಾಸಗಿ ಶಾಲೆಗಳಿಗೆ ಏನೂ ಕಡಿಮೆಯಿಲ್ಲ ಎಂಬ ಭಾವನೆ ಕೆಲವು ಪ್ರದೇಶಗಳಲ್ಲಾದರೂ ಮೂಡಿದೆ. ಸರಕಾರಿ ಶಾಲೆಗಳನ್ನು ಬಲಪಡಿಸುವ ಪ್ರಯತ್ನ ಸ್ವಾಗತಾರ್ಹವಾಗಿದ್ದರೂ ಒಂದು ಬಗೆಯ ಸ್ಪರ್ಧಾತ್ಮಕತೆಯನ್ನು ತುಂಬಲಾಯಿತು. 'ಖಾಸಗಿ ಅನುದಾನಿತ VS ಸರಕಾರಿ ಶಾಲೆಗಳು' ಎಂದು ಅಹಿತಕರ ಸ್ಪರ್ಧೆಯನ್ನು ಸರಕಾರವೇ ಆರಂಭಿಸಿ ಅನುದಾನಿತ ಶಾಲೆಗಳ ಮಾರಣಹೋಮಕ್ಕೆ ಚಾಲನೆ ನೀಡಲಾಯಿತು. ಈ ಹೋಮದ ಅಧ್ವರ್ಯು ಬೇರಾರೂ ಅಲ್ಲ, ಸರಕಾರವೇ.

ಸರಕಾರದ ಬೊಕ್ಕಸದಲ್ಲಿ ಹಣವಿಲ್ಲ; ಆರ್ಥಿಕ ಸ್ಥಿತಿ ಹದಗೆಟ್ಟಿದೆ ಎಂಬ ಕಾರಣ ಮುಂದುಮಾಡಿಕೊಂಡು ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಹೊಸ ಶಿಕ್ಷಕ ವೃಂದದ ನೇಮಕಾತಿಯನ್ನು ಸ್ಥಗಿತಗೊಳಿಸಿ ಹೆಚ್ಚುಕಡಿಮೆ ಎರಡು ದಶಕಗಳಾಗುತ್ತಾ ಬಂದಿದೆ. ಬೋಧಕೇತರ ಸಿಬ್ಬಂದಿಯ ನೇಮಕಾತಿಯೂ ಹೀಗೆಯೇ ಸ್ಥಗಿತ

> ಕರ್ನಾಟಕದ ಅನುದಾನಿತ ಶಿಕ್ಷಣ ಸಂಸ್ಥೆಗಳು ಇಂದು ಆಂಗ್ಲ ಮಾಧ್ಯಮ ಶಿಕ್ಷಣ ಸಂಸ್ಥೆಗಳಿಂದ, ಡೀಮ್ಡ್ ಹಾಗೂ ಸ್ವಾಯತ್ತ ಸಂಸ್ಥೆಗಳಿಂದ ಮತ್ತು ಮುಂದೆ ಬರಬಹುದಾದ ವಿದೇಶಿ ಶಿಕ್ಷಣ ಸಂಸ್ಥೆಗಳಿಂದ ಭಾರಿ ಪ್ರತಿರೋಧವನ್ನು ಎದುರಿಸಬೇಕಾಗಿದೆ. ಸರಕಾರದ ನಿಷ್ಕಾಳಜಿಯ ಅಥವಾ ಒಳಗಿಂದೊಳಗೆ ಕೊರೆಯುವ ಪ್ರವೃತ್ತಿಯಿಂದಾಗಿ ಅನುದಾನಿತ ಶಿಕ್ಷಣ ಸಂಸ್ಥೆಗಳು ನಿಜಕ್ಕೂ 'ಶ್ವಾಸ ಬಿಡುವ' ಸ್ಥಿತಿಯಲ್ಲಿವೆ. ತೀವ್ರ ಸ್ವರೂಪದ ಸಂಘಟಿತ ಹೋರಾಟ ನಡೆಸಿದರೆ ಈ ಉದಾತ್ತ ಸಂಸ್ಥೆಗಳು ಹಾಗೂ ಹೀಗೂ ಉಳಿದಾವು; ಇಲ್ಲವಾದರೆ ಸಾವು ಖಂಡಿತ. ಹೋಗಲಿ ಬಿಡಿ ! ಉಳ್ಳವರಾದ ನಮಗೆ ಪ್ರತಿಷ್ಠಿತ ಸಂಸ್ಥೆಗಳಿವೆ; ಬಡವರಿಗೆ ಸರಕಾರಿ ಸಂಸ್ಥೆಗಳಿವೆ. ಯಾರಿಗೆ ಏನಾಗಬೇಕಾಗಿದೆ ಅನ್ನುವಿರಾ ?!

ಗೊಂಡಿದೆ. ಇದರ ಪರಿಣಾಮವಾಗಿ ಬಹಳಷ್ಟು ಶಿಕ್ಷಣ ಸಂಸ್ಥೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೋಧಕೇತರ ಸಿಬ್ಬಂದಿ ಇಲ್ಲ. ನಿವೃತ್ತ ಉದ್ಯೋಗಿಗಳ ಬದಲಿಗೆ ಹೊಸ ನೇಮಕಾತಿಗೆ ಸರಕಾರ ಅನುಮತಿ-ಅನುದಾನ ನೀಡುವುದಿಲ್ಲ. ಹೆಚ್ಚುವರಿ ಶಿಕ್ಷಕರನ್ನು ಒಂದೆಡೆಯಿಂದ ಇನ್ನೊಂದೆಡೆಗೆ ವರ್ಗಾವಣೆ ಮಾಡಲಾಗುತ್ತದೆಯೇ ಹೊರತು ನೇಮಕಾತಿಯಿಲ್ಲ. ನನ್ನ ಕಾಲೇಜಿನ ಉದಾಹರಣೆಯನ್ನೇ ತೆಗೆದುಕೊಂಡರೆ, ೧೯೮೨ರಲ್ಲಿ ಪ್ರಾಂಶುಪಾಲರು ಹಾಗೂ ದೈಹಿಕ ಶಿಕ್ಷಣ ನಿರ್ದೇಶಕರು ಸೇರಿ ನಾವು ಪ್ರಾಧ್ಯಾಪಕರು ಹನ್ನೊಂದು ಮಂದಿ ಇದ್ದೆವು. ಈ ನಡುವೆ ನಿವೃತ್ತಿ, ವರ್ಗಾವಣೆಗಳಿಂದಾಗಿ ಎಂಟು ಹುದ್ದೆಗಳು ತೆರವಾಗಿವೆ. ಇನ್ನೆರಡು ವರ್ಷಗಳಲ್ಲಿ ನಾನೂ ನಿವೃತ್ತನಾದರೆ ಉಳಿಯುವವರು ಓರ್ವ ಉಪನ್ಯಾಸಕರು ಹಾಗೂ ಓರ್ವ ದೈಹಿಕ ಶಿಕ್ಷಣ ನಿರ್ದೇಶಕರು! ಹದಿನಾಲ್ಕು ಮಂದಿ ಬೋಧಕೇತರ ಸಿಬ್ಬಂದಿಯಲ್ಲಿ ಈಗ ಉಳಿದವರು ಏಳು ಮಂದಿ ಮಾತ್ರ! ಹೀಗಾದರೆ ಕಾಲೇಜು ನಡೆಯುವುದಾದರೂ ಹೇಗೆ! ಗುಣಮಟ್ಟವನ್ನು ಕಾಪಾಡುವುದು ಹೇಗೆ? ಈ ಬಗ್ಗೆ ಯುಜಿಸಿ, ನ್ಯಾಕ್, ಉನ್ನತ ಶಿಕ್ಷಣ ಸಚಿವಾಲಯ ಇತ್ಯಾದಿಯಾಗಿ ಯಾರಿಗೂ ಕಾಳಜಿಯಿಲ್ಲ. ಹಾಗಂತ ವರ್ಷಕ್ಕೊಮ್ಮೆ ಇಲಾಖೆ ಖಾಲಿ ಹುದ್ದೆಗಳೆಷ್ಟು ಎಂಬ ಅಂಕಿ-ಅಂಶಗಳನ್ನು ತಪ್ಪದೆ ಪಡೆದುಕೊಳ್ಳುತ್ತದೆ. ಯಾವ ಪುರುಷಾರ್ಥಕ್ಕಾಗಿ ?

ಸರಕಾರ ಏನೇ ಮಾಡಲಿ, ಆಡಳಿತಮಂಡಳಿಯವರಿಗೆ ಸ್ಥಳೀಯವಾದ ಒಂದು ಬಾಧ್ಯತೆ ಇದ್ದೇ ಇರುತ್ತದಲ್ಲವೆ ? ಅವರು ತಾನೆ ಶಿಕ್ಷಣ ಸಂಸ್ಥೆ ಆರಂಭಿಸಿದವರು ? ಅವರು ತಾನೆ ಜನರನ್ನು ಎದುರಿಸ ಬೇಕಾದವರು ? ಹೀಗಾಗಿ ತಮ್ಮ ಆರ್ಥಿಕ ಮಿತಿಗೆ ಒಳಪಟ್ಟು ಒಂದಿಷ್ಟು ಮಂದಿಯನ್ನು ನೇಮಕ ಮಾಡಿಕೊಳ್ಳುತ್ತಾರೆ. ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರಿಗೆ ಎರಡು ಮೂರು ಸಾವಿರ, ಪ್ರೌಢಶಾಲೆಗಳಲ್ಲಿ ಐದು ಸಾವಿರ ಹಾಗೂ ಕಾಲೇಜು ಹಂತದಲ್ಲಿ ಉಪನ್ಯಾಸಕರಿಗೆ ಹತ್ತು ಸಾವಿರ ರೂ.ಗಳ ವೇತನ ನೀಡುತ್ತಾರೆ. ಸೇವಾಭದ್ರತೆ, ಪಿಂಚಣಿ, ಭಡ್ತಿ ಇತ್ಯಾದಿ ಕೇಳಬೇಡಿ! ಹಕ್ಕು ಸ್ಥಾಪನೆ ಮಾಡಲು ಹೋದರೆ ಕಿತ್ತುಬಿಸಾಡುತ್ತಾರೆ! ಹೊಟ್ಟೆ ಹೊರೆಯುವುದಕ್ಕಾಗಿ ಶಿಕ್ಷಕರು ಹಾಗೂ ಇತರರು ಬಾಯ್ಮುಚ್ಚಿಕೊಂಡು ತೋಚಿದಷ್ಟು ಕೆಲಸ ಮಾಡುತ್ತಾರೆ. ಗುಣಮಟ್ಟ, ನಿರ್ವಹಣೆ, ದಕ್ಷತೆ, ಬದ್ಧತೆ ಇತ್ಯಾದಿ ಮಂತ್ರಗಳನ್ನು ಇವರ ಮುಂದೆ ಬಡಬಡಿಸಿದರೆ ತಲೆದೂಗುತ್ತಾರಷ್ಟೆ. ಜೊತೆಗೆ ಒಳಗಿಂದೊಳಗೆ ವ್ಯಂಗ್ಯದ ನಗು ಬೀರುತ್ತಾರೆ. ಶಿಕ್ಷಣ ಸಂಸ್ಥೆಗಳಲ್ಲಿ ವ್ಯವಸ್ಥಿತವಾದ ಶೋಷಣೆ, ಜೀತಪದ್ಧತಿ ಹಾಗೂ ತಾರತಮ್ಯಕ್ಕೆ ನೇರವಾಗಿ ಸರಕಾರಗಳೇ ಹೊಣೆ.

ಕಾಲೇಜುಗಳಿಗೆ ಸಂಲಗ್ನತೆ ನೀಡುವ ವಿಶ್ವವಿದ್ಯಾನಿಲಯಗಳು ಸಿಬ್ಬಂದಿಗೆ ನಿಗದಿತ ವೇತನ ಶ್ರೇಣಿ ಕೊಡದಿದ್ದರೆ ಸಂಲಗ್ನತೆ ಹಿಂತೆಗೆದುಕೊಳ್ಳುವಂತಹ ಗಂಭೀರ ಕ್ರಮ ಕೈಗೊಂಡಿದ್ದರೆ, ಪರಿಸ್ಥಿತಿ ಬದಲಾಗುತ್ತಿತ್ತು. ಆಗ ಆಡಳಿತ ಮಂಡಳಿಗಳು ಸರಕಾರದ ಮೇಲೆ ಒತ್ತಡ ಹೇರಬಹುದಿತ್ತು. ಶಿಕ್ಷಕ ಸಂಘಟನೆಗಳು ತಮ್ಮ ಸದಸ್ಯರ ವೇತನಶ್ರೇಣಿಯ ಬಗ್ಗೆ ಹೆಚ್ಚು ತಲೆಕೆಡಿಸಿಕೊಂಡಿವೆಯೇ ಹೊರತು ಹೊಸದಾಗಿ ಹುಟ್ಟಿಕೊಂಡ ವರ್ಗಕ್ಕೆ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಉಗ್ರ ಹೋರಾಟಗಳನ್ನು ನಡೆಸಲಿಲ್ಲ. ಹೀಗಾಗಿ ಆಡಳಿತಮಂಡಳಿಗಳವರಿಗೂ ಶೋಷಣೆ ನಡೆಸಲು ಚಾಪೆ ಹಾಸಿಕೊಟ್ಟಂತಾಗಿದೆ. ಇದೆಲ್ಲದರ ಪರಿಣಾಮ ಏನಾಗಿದೆಯೆಂದರೆ ಒಂದೊಂದು ಕಾಲೇಜಿನಲ್ಲಿ ಅನುದಾನಿತ ವೇತನ ವರ್ಗ ಅಲ್ಪಸಂಖ್ಯಾತವಾಗಿದ್ದು, ಬಹುಮಂದಿ ಆಡಳಿತ ಮಂಡಳಿಯಿಂದ ವೇತನ ಪಡೆಯುವವರು. ಸರಕಾರ ವೇತನಾನುದಾನ ನೀಡುವ ದೆಸೆಯಿಂದಾಗಿ ಸಂಸ್ಥೆಗಳ ಮೇಲೆ ಇನ್ನಿಲ್ಲದ ಬಿಗಿ ನಿಯಂತ್ರಣವನ್ನು ಹೇರುತ್ತದೆ. ದಾಖಲಾತಿ, ನೇಮಕ, ಆರ್ಥಿಕ ವ್ಯವಹಾರ, ಶುಲ್ಕ ವಿಲೇವಾರಿ. ಹೀಗೆ ಪ್ರತಿಯೊಂದರಲ್ಲೂ ಸರಕಾರದ ಅಂಕುಶಕ್ಕೆ ತಲೆಬಾಗಲೇಬೇಕಾದ ಸ್ಥಿತಿ. ಹೀಗಾಗಿ ಒಂದೆರಡು ಆಡಳಿತ ಮಂಡಳಿಯವರು ಸರಕಾರಕ್ಕೆ ಸೆಡ್ಡು ಹೊಡೆದು, ''ನಿಮ್ಮ ಜುಜುಬಿ ಅನುದಾನ ಬೇಕಿಲ್ಲ. ನಮ್ಮ ಸಂಸ್ಥೆಯನ್ನು ಅನುದಾನರಹಿತ ಎಂದು ಘೋಷಿಸಿ, ನಮ್ಮ ವ್ಯವಹಾರ ನಾವೇ ನೋಡಿಕೊಳ್ಳುತ್ತೇವೆ'' ಎಂದು ಹೇಳಿ ಉದ್ಯೋಗಿಗಳ ಬಾಳನ್ನು ಗೋಳು ಮಾಡಿವೆ. ಸರಕಾರಕ್ಕೂ ಶಿಕ್ಷಣ ಸಚಿವರಿಗೂ ಬೇಕಾದುದೂ ಇದೇ. ''ಬೇಡ ಎನ್ನುವವರಿಗೆ ಅನುದಾನ ಕೊಡುವುದೇಕೆ ? ವೇತನಾನುದಾನ ನಂಬಿ ಕೊಂಡಿರುವ ಉದ್ಯೋಗಿಗಳು ಮಣ್ಣು ತಿನ್ನಲಿ'' ಎಂಬ ಅಮಾನುಷ ಧೋರಣೆ.

ಸರಕಾರಿ ಅನುದಾನ ಪಡೆಯುತ್ತಿರುವ ಸಂಸ್ಥೆಯೊಂದು ಅನುದಾಸ ಬೇಡವೆನ್ನುವುದು ಕೆಲವರಿಗೆ ವಿಚಿತ್ರವಾಗಿ ಕಾಣುತ್ತದೆ. ಆದರೆ ನೇಮಕಾತಿಗೆ ಅವಕಾಶ ಕೊಡದೆ ಆಡಳಿತ ಮಂಡಳಿಗಳ ಮೇಲೆ ಹೆಚ್ಚಿನ ಆರ್ಥಿಕ ಹೊರೆ ಹೊರಿಸಿ ಸತಾಯಿಸುವ ಸರಕಾರಕ್ಕೆ ಹೀಗೆ ಬುದ್ಧಿ ಕಲಿಸಬೇಕು ಎಂದು ಆಡಳಿತ ಮಂಡಳಿಗೆ ಅನ್ನಿಸಿದರೆ ಅದರಲ್ಲಿ ತಪ್ಪೇನೂ ಇಲ್ಲ!

ಕರ್ನಾಟಕದ ಅನುದಾನಿತ ಶಿಕ್ಷಣ ಸಂಸ್ಥೆಗಳು ಇಂದು ಆಂಗ್ಲ ಮಾಧ್ಯಮ ಶಿಕ್ಷಣ ಸಂಸ್ಥೆಗಳಿಂದ, ಡೀಮ್ಡ್ ಹಾಗೂ ಸ್ವಾಯತ್ತ ಸಂಸ್ಥೆಗಳಿಂದ ಮತ್ತು ಮುಂದೆ ಬರಬಹುದಾದ ವಿದೇಶಿ ಶಿಕ್ಷಣ ಸಂಸ್ಥೆಗಳಿಂದ ಭಾರಿ ಪ್ರತಿರೋಧವನ್ನು ಎದುರಿಸಬೇಕಾಗಿದೆ. ಸರಕಾರದ ನಿಷ್ಕಾಳಜಿಯ ಅಥವಾ ಒಳಗಿಂದೊಳಗೆ ಕೊರೆಯುವ ಪ್ರವೃತ್ತಿಯಿಂದಾಗಿ ಅನುದಾನಿತ ಶಿಕ್ಷಣ ಸಂಸ್ಥೆಗಳು ನಿಜಕ್ಕೂ 'ಶ್ವಾಸ ಬಿಡುವ' ಸ್ಥಿತಿಯಲ್ಲಿವೆ. ತೀವ್ರ ಸ್ವರೂಪದ ಸಂಘಟಿತ ಹೋರಾಟ ನಡೆಸಿದರೆ ಈ ಉದಾತ್ತ ಸಂಸ್ಥೆಗಳು ಹಾಗೂ ಹೀಗೂ ಉಳಿದಾವು; ಇಲ್ಲವಾದರೆ ಸಾವು ಖಂಡಿತ. ಹೋಗಲಿ ಬಿಡಿ! ಉಳ್ಳವರಾದ ನಮಗೆ ಪ್ರತಿಷ್ಠಿತ ಸಂಸ್ಥೆಗಳಿವೆ; ಬಡವರಿಗೆ ಸರಕಾರಿ ಸಂಸ್ಥೆಗಳಿವೆ. ಯಾರಿಗೆ ಏನಾಗಬೇಕಾಗಿದೆ ಅನ್ನುವಿರಾ ?!

ಡಾ|| ಮಹಾಬಲೇಶ್ವರ ರಾವ್
ಪ್ರಾಂಶುಪಾಲರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಮಹಾವಿದ್ಯಾಲಯ
ಉಡುಪಿ - ೫೭೬ ೧೦೨

(೫೬ನೇ ಪುಟದಿಂದ)
ಬೆಂಗಳೂರಿನಲ್ಲಿ ಒಂದು ವಿಶಿಷ್ಟ...

ಮೇಲೊಂದರಂತೆ ಸಾಹಸಗೈಯಬೇಕಾಗುತ್ತದೆ. ಇದು ಮನೆಯನ್ನು ಕುರಿತ ಹಾಗೂ ಮನೆಯಿಂದ ದೂರವಾಗಿರಬೇಕಾದ ನೋವನ್ನು ಅನುಭವಿಸುತ್ತಾ, ಸುಲಭವಾಗಿ ಬಗೆಹರಿಸಲಾಗದಂತಹ ಸಮಸ್ಯೆಗಳನ್ನು ಎದುರಿಸುವವನ ಕತೆ. ಅಲ್ಲದೆ ಆಶಾವಾದವನ್ನು ಬೆಂಬಲಿಸುವ ಕತೆ. ಇದರಲ್ಲಿ ಮಾಂತ್ರಿಕ ಶಕ್ತಿ ಇದೆ. ಅರ್ಥವು ಮಕ್ಕಳಿಗೆ ನೇರವಾಗಿ ತೋರಿಸುತ್ತಾ ಒಂದು ಮ್ಯಾಜಿಕ್ ಬೌಲ್‌ನಿಂದ ಹಿಂದಕ್ಕೆ ಆಶ್ವಾಸನೆಯ ಹೂ ಕೊಡುಗೆ, ಭರವಸೆಯನ್ನು ಉಳಿಸುವ ಪ್ರಯತ್ನ ಅಮೋಘ !

**ನಿರ್ದೇಶಕರು**

ಪ್ರತಿ ಹೊಸ ನಾಟಕದ ನಿರ್ಮಾಣದ ಹೊತ್ತಿನಲ್ಲೂ ನಾವು ಏನನ್ನಾದರೂ ಹೊಸತನ್ನು ಪ್ರದರ್ಶಿಸಲು ಯತ್ನಿಸುವ ಮೂಲಕ, ರಂಗಭೂಮಿಯಲ್ಲಿ ನಮ್ಮ ಅರಿವನ್ನು ವಿಸ್ತರಿಸಿಕೊಳ್ಳುತ್ತಾ, ಹೊಸ ಹೊಸ ವಿಚಾರಗಳನ್ನು ಮೈಗೂಡಿಸಿಕೊಳ್ಳುತ್ತೇವೆ. ಬೇರೆಬೇರೆ ರಂಗಮಂಚಗಳಲ್ಲಿ ನಾಟಕಗಳನ್ನು ಪ್ರಯೋಗಿಸುವುದು ನಮ್ಮಲ್ಲಿ ಹೊಸ ಉತ್ಸಾಹ ಮತ್ತು ರಂಗಭೂಮಿಯೆಡೆಗಿನ ಕುತೂಹಲವನ್ನು ಉಳಿಸಿಕೊಳ್ಳುವಲ್ಲಿ ಸಹಾಯ ಮಾಡುತ್ತದೆ.

**ತಂಡದ ಕುರಿತು**

ಸಾಲ್ಜ್+ಪ್ಫೆಫರ್ (ಸಾಲ್ಟ್+ಪೆಪ್ಪರ್) ಜರ್ಮನಿಯ ರಂಗ ತಂಡ, ೧೯೮೩ರಲ್ಲಿ ಸ್ಥಾಪಿಸಲ್ಪಟ್ಟಿತು. ಈ ತಂಡ ಮಕ್ಕಳಿಗಾಗಿ ಹಾಗೂ ದೊಡ್ಡವರಿಗಾಗಿ ನಾಟಕಗಳನ್ನು ಪ್ರಯೋಗಿಸುತ್ತಾ ಬಂದಿದೆ. ಮತ್ತು ತಾವೇ ಆಯೋಜಿಸುವ ನಾಟಕೋತ್ಸವಗಳಲ್ಲದೆ ಜರ್ಮನ್ ಮಕ್ಕಳ ನಾಟಕೋತ್ಸವ, ಆಸ್ಟ್ರಿಯ, ಬೆಲ್ಜಿಯಂ, ಇಂಡಿಯನ್ ನಾಟಕೋತ್ಸವದಂತಹ ಅಂತರರಾಷ್ಟ್ರೀಯ ನಾಟಕೋತ್ಸವಗಳಲ್ಲೂ ಭಾಗವಹಿಸಿದೆ. ೨೦೦೯ರಲ್ಲಿ ಭಾರತದಲ್ಲೂ ಈ ತಂಡ ಪ್ರದರ್ಶನಗಳನ್ನು ನೀಡಿದೆ.

**ನಾಟಕ – ಪುಂಗ್ ಚೊಲ್ಲಮ್ ಡ್ರಮ್ಮರ್ಸ್**

ಈ ಪುಟಾಣಿ ಕಲಾವಿದರು, ಥೋಬಲ್ ವಾಂಗ್ಜಿಂಗ್ ಜಿಲ್ಲೆಯಲ್ಲಿ, 'ಜನ್ ಶಿಕ್ಷಣ್ ಸಂಸ್ಥಾನ್' ಆಯೋಜಿಸಿದ ಕಾರ್ಯಕ್ರಮದಲ್ಲಿ ಗುರು ಸ್ಯಾಗೊಲ್‌ಶೆಮ್ ಸಿಂಘಜೀತ್ ಸಿಂಗ್ ಅವರಿಂದ ಪುಂಗ್ (ಮದ್ದಳೆ) ತರಬೇತಿಯನ್ನು ಪಡೆದರು. ಗುರು ಸಿಂಘಜೀತ್ ಸಿಂಗ್ ಅನೇಕ ಪ್ರಶಸ್ತಿ ಮತ್ತು ಫೆಲೊಶಿಪ್ ಪುರಸ್ಕಾರಗಳನ್ನು ಪಡೆದಿದ್ದಾರೆ. ಇವರು ಭಾರತದ ಉದ್ದಗಲಕ್ಕೂ ಪುಂಗ್ ಮತ್ತು ಮೃದಂಗವನ್ನು ಕಲಿಸುವ ಅನೇಕ ಕಮ್ಮಟಗಳ ನಿರ್ವಹಣೆಯನ್ನು ಹೊತ್ತುಕೊಂಡು ಯಶಸ್ವಿಯಾಗಿದ್ದಾರೆ. ದೆಹಲಿಯಲ್ಲಿ ಸಂಗೀತ ನಾಟಕ ಅಕಾಡೆಮಿ ವತಿಯಿಂದ, ಗಣರಾಜ್ಯೋತ್ಸವದ ಸಂದರ್ಭದಲ್ಲಿ ಕಾರ್ಯಕ್ರಮವನ್ನು ನೀಡುವ ಗೌರವಕ್ಕೆ ಪಾತ್ರರಾಗಿದ್ದಾರೆ.

ಕ. ವೆಂ. ರಾಜಗೋಪಾಲ
ನಂ. ೬೯, 'ಸಹನ ಮಂದಿರ', ೨ನೇ ಅಡ್ಡರಸ್ತೆ
೨ನೇ ಮುಖ್ಯರಸ್ತೆ, ಅನ್ನಪೂರ್ಣ ಮ್ಯಾನ್‌ಷನ್ ಎದುರು
ಅಶ್ವತ್ಥನಗರ, ಬೆಂಗಳೂರು - ೫೬೦ ೦೯೪

ರಾಷ್ಟ್ರೀಯತೆಯ ಸಂದರ್ಭದಲ್ಲಿ ನಿರ್ವಸಾಹತೀಕರಣವನ್ನು ಎಲ್ಲ ದೊಡ್ಡ ಲೇಖಕರೂ ಸ್ವಾಗತಿಸಿದಂತೆ ಕುವೆಂಪು ಕೂಡ ಆ ಸಂದರ್ಭಕ್ಕೆ ಪ್ರತಿಕ್ರಿಯಿಸಿದ್ದಾರೆ. 'ಬಿಡುತೆ ಗುಡಿಯ ಕಟ್ಟುವುದೇ' ಅವರ ಮುಖ್ಯ ಧ್ಯೇಯವಾಗಿತ್ತು. ಆದರೆ ಬಿಡುಗಡೆಯ ಪ್ರಶ್ನೆ ಬಂದಾಗ ಮಾತ್ರ ನಿರ್ವಸಾಹತೀಕರಣದ ದಾರಿಗಳು ವಿಭಿನ್ನವಾಗಿರುತ್ತವೆ. ಕುವೆಂಪು ಅವರ ನಿರಂಕುಶತೆಯ ಪ್ರತಿಪಾದನೆಯು ಬಿಡುಗಡೆಯ ದಾರಿಯ ಹುಡುಕಾಟವೇ ಆಗಿದೆ. ಕುವೆಂಪು ಅವರ ಕಾವ್ಯದಲ್ಲಿ ನಿರ್ವಸಾಹತೀಕರಣದ ಆಶಯಗಳು ಹೆಣ್ಣು ಸತ್ವದಲ್ಲಿ ಪ್ರಕಟಗೊಳ್ಳುತ್ತದೆ. ದೇವಿ, ತಾಯಿಯರೆಂಬ ಮಾತೃತ್ವದ ಪರಿಕಲ್ಪನೆಯಲ್ಲಿ ವಿಶಾಲತ್ವವನ್ನು ಗ್ರಹಿಸುವ ಆಶಯ ಒಂದು ಬಗೆಯದಾದರೆ, ಇನ್ನೊಂದು ಸಾಮಾಜಿಕ ನ್ಯಾಯವನ್ನೂ ಸೇರಿದಂತೆ ಒಂದು ಜೀವಪರ ನಿಲುವನ್ನು ಪ್ರತಿಪಾದಿಸುವುದು. ಇವೆರಡರಲ್ಲೂ ಪರ್ಯಾಯಗಳ ಸೂಚನೆ ಇದೆ.



# ಹೆಣ್ಣುಮಾರ್ಗಿ ಕುವೆಂಪು

ಆರ್. ತಾರಿಣಿ ಶುಭದಾಯಿನಿ

**ಕು**ವೆಂಪು ಸಾಹಿತ್ಯ ಜಿಜ್ಞಾಸೆಯ ಗುಣವುಳ್ಳದ್ದು. ಇತ್ತೀಚಿನ ಓದುಗಳಲ್ಲಿ ಕುವಂಪು ಮತ್ತೆ ಮತ್ತೆ ನಿರ್ವಚನ ಗೊಳ್ಳುತ್ತಿರುವುದೂ ಸಹ ಅವರ ಸಾಹಿತ್ಯದ ಜಿಜ್ಞಾಸೆಯ ಗುಣಗಳಿಂದಲೇ ಎಂದೆನಿಸುತ್ತದೆ. ಪ್ರತಿಯೊಂದು ಕಾಲಮಾನವೂ ತನ್ನ ಓದನ್ನು ಕಂಡುಕೊಳ್ಳುವ ಬಗೆ ಅನನ್ಯವಾಗಿರುತ್ತದೆ. ಕೃತಿಯೊಂದರಲ್ಲಿ ತನ್ನ ಕಾಲಕ್ಕೆ ಬೇಕಾದ ಚಾರಿತ್ರಿಕ ಜಿಗಿತವನ್ನೂ, ಸಾಂಸ್ಕೃತಿಕ ಒಳನೋಟಗಳನ್ನೂ ನಿರೀಕ್ಷಿಸುತ್ತಿರುತ್ತದೆ. ಕುವೆಂಪು ಸಾಹಿತ್ಯದಲ್ಲಿ ಈ ಓದುಗ ಸಂವಾದಿ ಗುಣವು ಎದ್ದು ಕಾಣುವಂಥದ್ದು. ಅವರ ಸಾಹಿತ್ಯ ಒಳಗೊಳ್ಳುವ ವೈರುಧ್ಯದ ಅಂಶಗಳು ವಾಗ್ವಾದಗಳನ್ನು ಬೆಳೆಸುವುದಲ್ಲದೆ ಕ್ರಿಯಾಶೀಲವಾದ ಮನೋಭಾವವನ್ನು ಪ್ರೇರೇಪಿಸುತ್ತವೆ. ಆದಕಾರಣ ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಹುಟ್ಟಿದ ಕವಿ ಆ ಶತಮಾನದ ಅಂತ್ಯದಲ್ಲಿ ಬಂದ ಬಂಡಾಯ ಚಳುವಳಿಗೆ ಪ್ರೇರಕವಾಗಿ ಉಳಿದಿದ್ದು ಗಮನಾರ್ಹ ಸಂಗತಿಯಾಗಿ ತೋರುತ್ತದೆ.

ಹತ್ತು ಹಲವು ಚರಿತ್ರೆಗಳ ಜೊತೆಯಲ್ಲಿ ಏಗಿದವರು ಕುವೆಂಪು. ತಮ್ಮದೇ ಆದ ಚರಿತ್ರೆ ಕಟ್ಟಿಕೊಳ್ಳಬೇಕಾದ ಸವಾಲನ್ನು ಅವರು ಎದುರಿಸುತ್ತಲೇ ಬಂದಿದ್ದಾರೆ. ಶೂದ್ರ ಅಸ್ಮಿತೆಯಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಕುವೆಂಪು ಅವರಿಗೆ ರಾಷ್ಟ್ರೀಯತೆಯ ಅಸ್ಮಿತೆ ಭಾವೈಕ್ಯತೆಯನ್ನು ಒತ್ತಾಯಿಸುವಂಥದ್ದಾಗಿದೆ. ರಾಷ್ಟ್ರೀಯತೆಯ ಪ್ರಶ್ನೆಯ ಸಾರ್ವಕಾಲಿಕ ಅಸ್ಮಿತೆಯನ್ನು ಕೊಡುವಂತೆ ತೋರುತ್ತದೆ. ಆದರೆ ವಾಸ್ತವದಲ್ಲಿ ಹತ್ತು ಹಲವು ಅಸ್ಮಿತೆಗಳ ಮೇಲೆ ರಾಷ್ಟ್ರೀಯತೆಯು ನಿರ್ಮಾಣವಾಗುತ್ತದೆ. ಒಂದು ನಿಶ್ಚಿತತೆಯನ್ನು ನಿರ್ಧರಿಸುವ ಸಂದರ್ಭದಲ್ಲಿ ಬಹು ಸಂಖ್ಯಾತ ಅಲೆಗಳನ್ನಾಧರಿಸಿದ ತೀರ್ಮಾನಗಳು, ನಂಬಿಕೆಗಳು ಬಹುತೇಕ ಅಸ್ಮಿತೆಗಳ ಒಟ್ಟೂ ಸಂವೇದನೆ ಅಭಿಪ್ರಾಯವಾಗಿ ಹೊಮ್ಮಿಸಿರುತ್ತದೆ. ಈ ವೈರುಧ್ಯದ ಒಳಸುಳಿಯಲ್ಲಿ ಕುವೆಂಪು ಸಾಹಿತ್ಯ ರೂಪುಗೊಳ್ಳುತ್ತದೆ. ಚರಿತ್ರೆಗಳ ಮೇಲಾಟದಲ್ಲಿ ಕುವೆಂಪು ಸಾಹಿತ್ಯ ಎರಡೂ ರಾಷ್ಟ್ರೀಯತೆಗಳ ನಡುವಿನ ಸಂದಿಗ್ಧವನ್ನು ಹೊರಗೆಡಹುತ್ತದೆ. ಕುವೆಂಪು ಅವರ ಪ್ರತಿಕ್ರಿಯೆ ಕೆಲವೊಮ್ಮೆ ಪ್ರಜ್ಞಾಪೂರ್ವಕ ಅನ್ನಿಸಿದರೆ ಇನ್ನೊಮ್ಮೆ ಅಪ್ರಜ್ಞಾಪೂರ್ವಕ ಎನ್ನಿಸುತ್ತದೆ. ಇದನ್ನು ಗಮನಿಸದೇ ಮುಂದೆ ಹೋಗುವಂತೆಯೇ ಇಲ್ಲ.

ರಾಷ್ಟ್ರೀಯತೆಯ ಸಂದರ್ಭದಲ್ಲಿ ನಿರ್ವಸಾಹತೀಕರಣವನ್ನು ಎಲ್ಲ ದೊಡ್ಡ ಲೇಖಕರೂ ಸ್ವಾಗತಿಸಿದಂತೆ ಕುವೆಂಪು ಕೂಡ ಆ ಸಂದರ್ಭಕ್ಕೆ ಪ್ರತಿಕ್ರಿಯಿಸಿದ್ದಾರೆ. 'ಬಿಡುತೆ ಗುಡಿಯ ಕಟ್ಟುವುದೇ' ಅವರ ಮುಖ್ಯ ಧ್ಯೇಯವಾಗಿತ್ತು. ಆದರೆ ಬಿಡುಗಡೆಯ ಪ್ರಶ್ನೆ ಬಂದಾಗ ಮಾತ್ರ ನಿರ್ವಸಾಹತೀಕರಣದ ದಾರಿಗಳು ವಿಭಿನ್ನವಾಗಿರುತ್ತವೆ. ಕುವೆಂಪು ಅವರ ನಿರಂಕುಶತೆಯ ಪ್ರತಿಪಾದನೆಯು ಬಿಡುಗಡೆಯ ದಾರಿಯ ಹುಡುಕಾಟವೇ ಆಗಿದೆ. ಕುವೆಂಪು ಅವರ ಕಾವ್ಯದಲ್ಲಿ ನಿರ್ವಸಾಹತೀಕರಣದ ಆಶಯಗಳು ಹೆಣ್ಣು ಸತ್ವದಲ್ಲಿ ಪ್ರಕಟಗೊಳ್ಳುತ್ತದೆ. ದೇವಿ, ತಾಯಿಯರೆಂಬ ಮಾತೃತ್ವದ ಪರಿಕಲ್ಪನೆಯಲ್ಲಿ ವಿಶಾಲತ್ವವನ್ನು ಗ್ರಹಿಸುವ ಆಶಯ ಒಂದು ಬಗೆಯದಾದರೆ, ಇನ್ನೊಂದು ಸಾಮಾಜಿಕ ನ್ಯಾಯವನ್ನೂ ಸೇರಿದಂತೆ ಒಂದು ಜೀವಪರ ನಿಲುವನ್ನು ಪ್ರತಿಪಾದಿಸುವುದು. ಇವೆರಡರಲ್ಲೂ ಪರ್ಯಾಯಗಳ ಸೂಚನೆ ಇದೆ. ಆದರೆ ಇಲ್ಲಿ ಸೂಕ್ಷ್ಮವಾಗಿ ಗ್ರಹಿಸಬಹುದಾದ ಸಂಗತಿ ಇದೆ. ಕುವೆಂಪು ಸಂಸ್ಕೃತೀಕರಣದ ಪ್ರಭಾವಕ್ಕೆ ಒಳಗಾಗಿ ದೇವಿಯ ಕಲ್ಪನೆಯನ್ನು ಬೆಳೆಸುವುದು ರಾಷ್ಟ್ರೀಯತೆಯ ಕಲ್ಪನೆಯಲ್ಲಿ. ಶೂದ್ರ ಅಸ್ಮಿತೆಯಲ್ಲಿ ನಿಂತು ನೋಡುವಾಗಿನ ರಾಷ್ಟ್ರೀಯತೆಯ ಕಲ್ಪನೆ ಮೊದಲಿನದಕ್ಕಿಂತ ಭಿನ್ನವಾಗಿ ಆರೋಗ್ಯಪೂರ್ಣ ಸಮತಾವಾದದ ಸರ್ವಸಮಾನತೆಯ ನೆಲೆಗಳನ್ನು ಕಂಡುಕೊಳ್ಳುವ ಯತ್ನ ಮಾಡುತ್ತಾರೆ. ಹೀಗಾಗಿ ಈ ಎರಡರ ಸಂಘರ್ಷ ಅನ್ನಿಸುವ ತತ್ವ ಪ್ರತಿಪಾದನೆಯ ಹೊರಳುಗಳು ಕುವೆಂಪು ಅವರಲ್ಲಿ ಕಾಣುತ್ತವೆ. ಈ ನನ್ನ ಟಿಪ್ಪಣಿಯಲ್ಲಿ ಕುವೆಂಪು ಕಾವ್ಯವು (ಮಹಾಕಾವ್ಯ ಮತ್ತು ಖಂಡ ಕಾವ್ಯಗಳನ್ನು ಹೊರತುಪಡಿಸಿ) ಸ್ತ್ರೀ ತತ್ವವನ್ನು ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ಒಳಗೊಳ್ಳುವ ಬಗೆಯನ್ನು ಗಮನಿಸಿದ್ದೇನೆ.

ಕುವೆಂಪು ಮೂಲತಃ ಬಿಡುಗಡೆಗೆ ಕಾತರಿಸುವ ಕವಿ. ನಿರ್ವಸಾಹತೀಕರಣವೆನ್ನುವುದು ಕುವೆಂಪು ಎದುರಿಸುವ ವಾಸ್ತವವೇ ಆದರೂ ಅವರು ರಾಷ್ಟ್ರೀಯತೆ ಮತ್ತು ಸಬಾಲ್ಟರ್ನ್ ಚರಿತ್ರೆ ಎರಡನ್ನೂ ಒಟ್ಟಿಗೆ ನೋಡಬೇಕಾದ ಸಂದರ್ಭದಲ್ಲಿದ್ದಾರೆಂದು ಈಗಾಗಲೇ ಹೇಳಲಾಗಿದೆ. ಸ್ತ್ರೀ ತಾತ್ವಿಕತೆಯ ಸ್ವರೂಪ ಕುವೆಂಪು ಅವರಿಗೆ ನಿರ್ವಚನ ಗೊಳ್ಳುವುದು ಪರಮಹಂಸ ಮತ್ತು ವಿವೇಕಾನಂದರಿಂದ ಬಂದ ಕಾಳಿಯ ಪರಿಕಲ್ಪನೆಯಿಂದ. ಇವರಿಬ್ಬರ ಪ್ರಭಾವದಿಂದ ಜಗನ್ಮಾತೆ ಅವರ ಮುಖ್ಯ ಪ್ರೇರಣೆಯಾಗಿ ಕಾಣುತ್ತಾಳೆ.

ಬಂಗಾಳದ ಬಹುತೇಕ ಸ್ವಾತಂತ್ರ್ಯ ಹೋರಾಟ ಗಾರರಲ್ಲಿ ಕಾಣುವ ಸಾಮಾನ್ಯ ಅಂಶವೆಂದರೆ ಕಾಳಿಯ ಕಲ್ಪನೆ. ಆಗಿನ ದೇಶಭಕ್ತರಿಗೆಲ್ಲಾ ಒಂದೊಂದು ದೇವರುಗಳ ಮಿಥ್‌ಗಳನ್ನು ಪುನಃ ರೂಪಿಸಿಕೊಳ್ಳುವ ಪ್ರವೃತ್ತಿ ಇದ್ದುದು ಕಾಣುತ್ತದೆ. ಅದರ ಉದ್ದೇಶ ಪ್ರಾಥಮಿಕವಾಗಿ ಸ್ವಾತಂತ್ರ್ಯಕ್ಕೆ ಬೇಕಾದ ಸೈದ್ಧಾಂತಿಕ ನೆಲೆಗಟ್ಟನ್ನು ರೂಪಿಸಿಕೊಳ್ಳುವುದಾಗಿತ್ತು. ತಿಲಕರಿಗೆ ಗಣೇಶ ಪೂಜೆ ಸಾರ್ವಜನಿಕಗೊಳಿಸಿಕೊಳ್ಳುವುದಕ್ಕೆ ಅದರದೇ ಆದ ಕಾರಣಗಳಿದ್ದವು. ಸಂಘಟನೆ ಮತ್ತು ಭಾವನಾತ್ಮಕತೆ ಸಾಧಿಸುವುದು ತಿಲಕರಿಗೆ ಅಗತ್ಯವಾದ ಅಂಶವಾಗಿತ್ತು. ಗಾಂಧಿಗೆ ರಾಮಾಯಣದ ರಾಮ, ತುಳಸೀದಾಸರ ಪ್ರಾರ್ಥನೆ ಮತ್ತು ಶೀಲ ಮತ್ತು ಸಚ್ಚಾರಿತ್ರ್ಯಗಳ ಸಂಕೇತವಾಗಿ ಕಾಣಿಸಿಕೊಂಡರೆ ಸೇವೆಯ ಮಿಥ್‌ಆಗಿ ಭಗವದ್ಗೀತೆಯ ನಿಷ್ಕಾಮಕರ್ಮವು ಸ್ಫೂರ್ತಿಯಾಗುತ್ತದೆ. ಬಂಗಾಳದ ಹೋರಾಟಗಾರರಿಗೆ ಮಿಥ್‌ಆಗಿ ನಿಂತಿದ್ದು ಕಾಳಿ. ಕಾಳಿಮಾ ಕೇಡನ್ನು ನಾಶ

ಮಾಡುವ, ಸದ್ಧರ್ಮಕ್ಕೆ ಜಯ ತರುವ ಸಂಕೇತ. ವಸಾಹತುಶಾಹಿ ಎಂಬ ಕೇಡನ್ನು ಎದುರಿಸಬೇಕಾದಾಗ ಇದೊಂದು ಪ್ರಭಾವಶಾಲಿಯಾದ ಮಿಥ್ ಆಯಿತು. ಆಧ್ಯಾತ್ಮಿಕ ತತ್ವ ವಿಕಾಸ ಕ್ರಮವಾಗಿ ಸ್ವೀಕರಿಸುವ ಕ್ರಮವನ್ನು ಕುವೆಂಪು ಪರಮಹಂಸರ ತತ್ವಬೋಧನೆಗಳಿಂದ ಅರಿತಿರುವ ಸಾಧ್ಯತೆಗಳಿವೆ.

ಆದರೆ ಈ ಕಾಳಿ ಮಿಥ್ ಮೂಲಕ ಇನ್ನೂ ಒಂದು ವ್ಯಾಖ್ಯಾನ ಸಾಧುವಾಯಿತು. ಹಿಂಸೆಯ ಮೂಲಕ ಕೇಡನ್ನು ನಾಶಗೊಳಿಸಿಕೊಳ್ಳುವ ನಿರ್ವಚನ ಅದು. ವಿದೇಶಗಳಲ್ಲಿ ಓದುತ್ತಿದ್ದ ಅಥವಾ ಅಲ್ಲಿ ವಾಸವಾಗಿದ್ದ ಅನಿವಾಸಿ ಭಾರತೀಯರಲ್ಲಿ ಕಾಣುತ್ತಿದ್ದ ಸಾಮಾನ್ಯ ಪ್ರವೃತ್ತಿಯೆಂದರೆ ಭೂಗತ ಚಟುವಟಿಕೆಗಳಲ್ಲಿ ತೊಡಗುವುದು, ವಿನಾಶಕಾರಿ ಅಸ್ತ್ರಗಳ ಬಳಕೆ, ಆತ್ಮಾಹುತಿ ಮುಂತಾದುವು. ಆ ಕಾಲದ ಸ್ವಾತಂತ್ರ್ಯ ಹೋರಾಟಗಾರರೂ ತತ್ವಚಿಂತಕರೂ ಆದ ಅರವಿಂದರ ಕಲ್ಪನೆಯಲ್ಲಿ ಕಾಳಿ ದುರ್ಗಾ ಭವಾನಿಯಾಗಿ ಶಕ್ತಿಯ ಹಿಂಸಾತ್ಮಕ ಸ್ವರೂಪದಲ್ಲಿರುತ್ತಾಳೆ. ರಾಷ್ಟ್ರೀಯತೆಗೆ ತಮ್ಮನ್ನು ಒಡ್ಡಿಕೊಂಡ ಕುವೆಂಪು ಬಂಗಾಳದ ಕಾಳಿಯ ಪುರಾಣವನ್ನು ನಿರ್ವಚನ ಮಾಡಿಕೊಳ್ಳುವಂತೆ ಕಾಣುತ್ತಾರೆ. 'ಯಾ ದೇವೀ ಸರ್ವ ಭೂತೇಷು ಬುದ್ಧಿ ರೂಪೇಣ ಸಂಸ್ಥಿತಾ...' ಈ ಶ್ಲೋಕ ಕುವೆಂಪು ಅವರಿಗೆ ಪ್ರಿಯವಾದುದು. ದೇಶ, ಭಾಷೆ, ಕಾವ್ಯಗಳ ಅಮೂರ್ತ ಮೇಲಿನ ವಿಜಯಶಾಲೀ ಗುಣವನ್ನು ಅವರು ಅರಿವಿನಿಂದಲೇ ಸ್ವೀಕರಿಸುತ್ತಾರೆ. ಅಂತೆಯೇ ವಿರಾಟ್ ಸ್ವರೂಪದ ಕೇಡು ಮತ್ತದನ್ನು ಎದುರಿಸಲು ವಿಲಯ ಸ್ವರೂಪಿಣಿಯಾದ ಸ್ತ್ರೀತ್ವದ ಆದಿಭೌತಿಕ ಶಕ್ತಿಯನ್ನು ತಮ್ಮ ಕಾವ್ಯ ಲಯದಲ್ಲಿ ಹಿಡಿಯಲೆತ್ನಿಸುತ್ತಾರೆ ಕುವೆಂಪು. ಕಾಳಿ ಮೇಲಿನ ಅವರ ಕವಿತೆಗಳಲ್ಲಿ ಈ ವಿನ್ಯಾಸ ನೇರವಾಗಿ ಕಾಣುವಂಥಾದ್ದು. ಇದಕ್ಕೆ 'ಕಾಳಿ ಬರುವಳು' ಕವಿತೆಯ ಸಾಲುಗಳನ್ನು ನೋಡಿ :

*ನೋಡು ಬರುತಲಿರುವಳದೋ । ರುದ್ರ ಭದ್ರಕಾಳಿಯು ।*
*ದೇವಿ, ಚಂಡಿ ಚಾಮುಂಡಿ, ರಕ್ತ ರುಂಡಮಾಲಿನಿಯಂ ।*
*ಪ್ರಳಯದಲಿ ಸೃಷ್ಟಿಯನು । ಮೇಲೆತ್ತಿ ಬರುವಳು ।*
*ಪ್ರಳಯದಲಿ ಸೃಷ್ಟಿಯನು । ಕೆಳಗೊತ್ತಿ ಬರುವಳು ।*
*ವಿಜಯ ರಣೋನ್ಮತ್ತೆಯಾಗಿ । ಬರುವಳಾದಿ ಮಾಯೆಯು*

ಇದರಂತೆಯೇ ಇರುವ 'ಭೈರವನಾರಿ' ಕವನದ ಸಾಲುಗಳಲ್ಲಿಯೂ ರಣಕಾಳಿಯ ಬಣ್ಣನೆ ಇದೆ :

*ಕುಣಿಯುವಳಾರೀ ಭೈರವನಾರಿ । ರಣರಂಗದಲಿ ರೌದ್ರವ ತೋರಿ*
*ಕಣ್ಣುಗಳಿಂದ ಕಿಡಿಗಳು ಕಾರಿ ದೆಸೆದೆಸೆಗೆ ಜಡೆಯನು ಬೀರಿ*
*ಕೆನ್ನಾಲಿಗೆಯಿಂ ರಕ್ತವ ಸೋರಿ । ಹುಚ್ಚಳವೋಲುನ್ಮತ್ತತೆ ಮೀರಿ*
*ಕಂಠದೊಳಂಜಿಪ ನರಶಿರಮಾಲೆ । ಕರದಲಿ ರಂಜಿಪ ರೂಕ್ಷಜ್ವಾಲೆ*

'ಸ್ವಾತಂತ್ರ್ಯ ಲಕ್ಷ್ಮಿಗೆ'ಯ ಸಾಲು 'ದುರ್ಗ ಇವಳು
ಲಕ್ಷ್ಮಿಯಲ್ಲ ರುಂಡಮಾಲಿನಿ ।'

'ವಿಪ್ಲವಮೂರ್ತಿ'ಯನ್ನು ಕುವೆಂಪು ಬಣ್ಣಿಸುವುದು ಕಾಳಿಯ ಅಂಶವಾಗಿಯೇ :

'ಕಾಳಿಯು ನಾನು । ರುದ್ರನು ನಾನು ।
ಹೆಣ್ಣೊರಲಿಂಚರ ನಾನು । ಕಣ್ಮಿಂಚಾನು

– ಇಲ್ಲಿ ನಿರ್ವಸಾಹತೀಕರಣಕ್ಕೆ ಉಗ್ರವಾದ ಹಿಂಸೆಯನ್ನು ಬೆಂಬಲಿಸಿದ ದೇಶಭಕ್ತರ ದನಿಯಲ್ಲೇ ಕುವೆಂಪು ಮಾತನಾಡುವಂತೆ ಕಾಣುತ್ತಾರೆ. ಹಾಗಾದರೆ ಕುವೆಂಪು ಕಾವ್ಯ ರಾಜಕೀಯವಾಗಿ ಉಗ್ರ ಧೋರಣೆಗಳ ಪ್ರತಿಪಾದಕ ವಾದುದೇನು ? ಅಥವಾ ರುಂಡಮಾಲಿನಿಯನ್ನು ಸ್ತುತಿಸುವ, ಅದರ ಉತ್ಸಾಹಕ್ಕೂ ದೇಶ ಸಂಗ್ರಾಮದಲ್ಲಿ ಅಡಗಿರಬಹುದಾದ ಹಿಂಸಾತ್ಮಷೆಗೂ ಏನಾದರೂ ಸಂಬಂಧವಿದ್ದಿರಬಹುದೇ ? ಮೆಲ್ಲುಲಿಯ, ನಾದಮಯೀ ಶರೀರೆಯಾದ ಕಾವ್ಯ ಕನ್ನಿಕೆಯನ್ನು ಗುರುತಿಸಿಕೊಳ್ಳುವ ಕುವೆಂಪು ಅವರಲ್ಲೇ ಕೊಳಲು ಭೇರಿಯಾಗಿ, ನಾದವೆನ್ನುವುದು ಢಮಢಮದ ಗಡಚಿಕ್ಕುವ ದನಿಯಾಗಿ ಬದಲಾಗುತ್ತದೆ. ದನಿ ಏರುತ್ತದೆ, ಸ್ಫೂರ್ತಿ ಉಕ್ಕುತ್ತದೆ. ಈ ಬದಲಾವಣೆ ಅಚ್ಚರಿ ಮೂಡಿಸುತ್ತದೆ. ಯಾವುದು ಇದರಲ್ಲಿ ಕುವೆಂಪು ದನಿ ?




ಕುವೆಂಪು ಅವರ ವೈಚಾರಿಕ ಆಕೃತಿಗಳು ಗಟ್ಟಿಗೊಳ್ಳುವುದು ಮೇಲ್ಕಾಣಿಸಿದ ಪ್ರಜ್ಞಾಪೂರ್ವಕ ರಚನೆಗಳಲ್ಲಿ ಮಾತ್ರವೇ ಅಲ್ಲ. ಇಷ್ಟನ್ನು ಮಾತ್ರ ನೋಡಿದರೆ ಒಂದು ಪಾರ್ಶ್ವವನ್ನು ಮಾತ್ರ ಕಂಡಂತೆ. ಅವರ ಕಾವ್ಯದಲ್ಲಿ ಅಂತರ್ಗತವಾದ ದನಿಗಳು ಹಿಂಸೆಯನ್ನು ಬಿಟ್ಟು ಅಹಿಂಸಾವಾದಿಯಾಗಿವೆ. ಪ್ರಜಾಪ್ರಭುತ್ವವಾದೀ ಮೌಲ್ಯಗಳಾದ ಬಹುತ್ವ ಮತ್ತು ಬಹುರೂಪತೆಗಳನ್ನೂ, ಸಮಾನತೆಯ ಆಶಯಗಳನ್ನೂ ಬೆಸೆದುಕೊಂಡು ಸ್ತ್ರೀವಾದೀ ದೃಷ್ಟಿಕೋನದ ಪೂರ್ಣಪ್ರಮಾಣದ ಮಾದರಿಯಾಗಿದೆ. ಸಂಸ್ಕೃತೀಕರಣಕ್ಕೆ ಒಳಗಾದ ಕಪಿ ಪಡೆದುಕೊಂಡಿರಬಹುದಾದ ಸಾಂಸ್ಕೃತಿಕ ಅಂಶಗಳ ಜೊತೆ ಜೊತೆಗೇ ಪರ್ಯಾಯವಾದೀ ನೆಲೆಗಳ ಶೋಧವೂ ಇರುವುದು ಅಚ್ಚರಿ ಮೂಡಿಸುತ್ತದೆ. ಅವರ ಕಾವ್ಯವು ವಾಚ್ಯವಾಗಿ ಹೇಳುವುದನ್ನು ಅದರಲ್ಲೇ ಅಂತರ್ಗತವಾಗಿರುವ ಪ್ರತಿಸಂಸ್ಕೃತಿ ನಿರ್ಮಾಣದ ಅಂಶಗಳು ನಮ್ಮನ್ನು ವಾಗ್ವಾದಕ್ಕೊಯ್ಯುತ್ತವೆ.

ಭಾರತೀಯ ಸಾಹಿತ್ಯವನ್ನು ಅಭ್ಯಾಸ ಮಾಡುತ್ತಿರುವ ವಿಮರ್ಶಕ ಕೆ. ಸಚ್ಚಿದಾನಂದನ್ ಅವರು ಮಹಿಳಾ ಬರವಣಿಗೆ ಕುರಿತ ತಮ್ಮ ಲೇಖನದಲ್ಲಿ ಕೆಲವು ಮುಖ್ಯ ಅಂಶಗಳನ್ನು ಚರ್ಚಿಸುತ್ತಾರೆ. ಅವರ ಪ್ರಕಾರ ಹೆಣ್ಣಿನ ಬರಹ ಮತ್ತು ಹೆಣ್ಣು ದೃಷ್ಟಿಕೋನ ಎನ್ನುವುದು ಬಹುಮಟ್ಟಿಗೆ ಸಾಮಾಜಿಕ ನ್ಯಾಯಕ್ಕೆ ಸಂವಾದಿಯಾಗಿದೆ. ಅದರ ರೂಪಗಳು ನಾನಾ ರೂಪದಲ್ಲಿರಬಹುದು. ದಲಿತರು ಮತ್ತು ಬುಡಕಟ್ಟಿನವರು ಜಾತಿ ಶ್ರೇಣೀಕರಣದ ವಿರುದ್ಧ ಇರುವಂತೆ, ಅಂಚಿಗೆ ತಳ್ಳಲ್ಪಟ್ಟ ಅಲ್ಪಸಂಖ್ಯಾತರು, ನಿರ್ಲಕ್ಷ್ಯಕ್ಕೊಳಗಾದ ಪ್ರದೇಶಗಳು, ಅಳಿವಿನಂಚಿನಲ್ಲಿರುವ ಭಾಷೆಗಳು ಅನ್ಯಾಯದ ವಿರುದ್ಧ ಇರುವಂತೆ, ಒಂದು ವಿಮರ್ಶಾತ್ಮಕ ಅಕಾಡೆಮಿಕ್ಸ್ ಜ್ಞಾನ ಗುಲಾಮಗಿರಿಯ ವಿರುದ್ಧ ಇರುವಂತೆ ಹೆಣ್ಣಿನ ದೃಷ್ಟಿಕೋನ ವಿಶಾಲಾರ್ಥದಲ್ಲಿ ಪ್ರಜಾಪ್ರಭುತ್ವವಾದೀ ಬಹುತ್ವ, ಸೃಜನಾತ್ಮಕ ಭಿನ್ನತೆ, ಆರೋಗ್ಯಕರ ಪರಿಸರ, ಸಾಂಸ್ಕೃತಿಕ ಬಹುತ್ವ, ಅಹಿಂಸೆಯ ಅರಿವು, ಶಾಂತಿಯ ತಿಳುವಳಿಕೆ, ಜಾತಿ, ಲಿಂಗ, ವರ್ಗ ಜನಾಂಗ ಭೇದಗಳನ್ನು ದಾಟ ಬಿಡುಗಡೆಗೆ ಯತ್ನಿಸುವ ಪರಿ ಎಲ್ಲವೂ ಆಗಿದೆ. 'ಪಿತೃ ಪ್ರಧಾನತೆ' ಎನ್ನುವ ಅಧಿಕಾರ ಕೇಂದ್ರ ಸಾರ್ವತ್ರಿಕವಾದುದು. ಅದು ಎಲ್ಲ ಅಧಿಕಾರಗಳಿಗೆ ಅನ್ವಯಿಕ ಎನ್ನಿಸುತ್ತದೆ. ಹೀಗಾಗಿ ಸ್ತ್ರೀ ದೃಷ್ಟಿಕೋನದಲ್ಲಿ ಓದುವ ಪಠ್ಯಗಳು ನಿರಚನೆ ಮಾಡಿಕೊಳ್ಳಬೇಕಾದುದು ವೈಧಾನಿಕವಾಗಿ ಸಮಾಜದ ಅಧಿಕಾರ ಕೇಂದ್ರಗಳ ಪಾತ್ರ ಮತ್ತು ಅವುಗಳೊಳಗಿನ ವೈರುಧ್ಯದ ನೆಲೆಗಳನ್ನು. ಅದು ಅಧಿಕಾರದ ಕೇಂದ್ರಗಳನ್ನು ಪ್ರಶ್ನಿಸಬೇಕಾಗುತ್ತದೆ, ಪ್ರತಿರೋಧದ ವಲಯಗಳನ್ನು ಬೆಳೆಸಬೇಕಾಗುತ್ತದೆ. ಈ ಕ್ರಮ ಅದನ್ನು ಕೃತಿಯಿಂದ ಜಗತ್ತಿಗೆ ಜಿಗಿಯುವಂತೆ ಮಾಡುತ್ತದೆ. ಹಾಗೆ ಜಿಗಿಯುತ್ತಾ ಚಾರಿತ್ರಿಕ ಮತ್ತು ಸಮಕಾಲೀನ ವಾಸ್ತವವನ್ನು ಸೂಚಿಸುವಂತಿರುತ್ತದೆ. ಇದಕ್ಕೂ ಮೇಲ್ಪಟ್ಟು ಭಾಷಿಕವಾಗಿಯೂ ಬಹುತ್ವದ ಧ್ವನಿಗಳನ್ನು ಕೇಳಿಸುತ್ತಿರುತ್ತದೆ. ಅದು ಬಹಳ ಮುಖ್ಯ.

ಈ ದೃಷ್ಟಿಯಿಂದ ನೋಡಿದರೆ ಕುವೆಂಪು ಅವರಲ್ಲಿ ಹೆಣ್ತನದ ದೃಷ್ಟಿ - ಧೋರಣೆಗಳೇ ಪ್ರಧಾನವಾಗಿ ಕಾಣುವುದಿಲ್ಲವೇ ? ಅವರ ಲಕ್ಷ್ಯ ಪರ್ಯಾಯ ನೆಲೆಗಳನ್ನು ಕಂಡುಕೊಳ್ಳುವತ್ತ ಇದೆ. ಸಂಸ್ಕೃತೀಕರಣದ ಪ್ರಭಾವಗಳಿಂದ ಕುವೆಂಪು ಕಂಡುಕೊಳ್ಳುವ ಕಾಳಿ ತತ್ವವು ಸ್ತ್ರೀತ್ವದ ತತ್ವವನ್ನು ಸಾಂಪ್ರದಾಯಿಕ ನೆಲೆಗಳಲ್ಲೇ ಬಹುಮಟ್ಟಿಗೆ ನಿರ್ವಚನಗೊಳಿಸಿಕೊಳ್ಳುತ್ತದೆ. ಸ್ತ್ರೀತ್ವ ಎನ್ನುವುದು 'ದುಷ್ಟ ಶಿಕ್ಷೆ, ಶಿಷ್ಟ ರಕ್ಷಣೆ'ಯ ಪರಿಕಲ್ಪನೆಯಲ್ಲಿ ಬರುತ್ತದೆಯಲ್ಲದೆ, ಇಲ್ಲಿ ಹೆಣ್ಣು ಶಕ್ತಿ ದೇವತಾ ಸ್ವರೂಪ, ವೈದಿಕ ಮಾತೃತ್ವದ ವ್ಯಾಖ್ಯಾನ ರೂಪವಾಗುತ್ತದೆ. ಡಾ॥ ಬಿ. ಎನ್. ಸುಮಿತ್ರಾಬಾಯಿ ಅವರು ತಮ್ಮ 'ಕುವೆಂಪು ಕಾದಂಬರಿಯಲ್ಲಿ ಸ್ತ್ರೀತ್ವದ ಪ್ರತೀಕಗಳು' ಎನ್ನುವ ಲೇಖನದಲ್ಲಿ ಚರ್ಚಿಸುವಂತೆ, ''ಕುವೆಂಪು ಓರಿಯೆಂಟಲಿಸ್ಟ್‌ಗಳಿಂದ ಪ್ರಭಾವಿತರಾಗಿ ಸಹಧರ್ಮಿಣಿ ಕುಟುಂಬಿನಿ ಮಾದರಿಯನ್ನು ಸೃಷ್ಟಿಸುತ್ತಾರೆ.''... ಈ ಮಾತೃ ಪ್ರತೀಕಗಳ ಸಹಧರ್ಮಿಣಿಯರ, ಕುಟುಂಬಿನಿಯರ ಸತ್ವವನ್ನು ಜಗತ್ತಿನ ಮೂಲವಾದ ರಕ್ಷಕ ಶಿಕ್ಷಕ ಶಕ್ತಿರೂಪಿಣಿಯ ಅಂಶವಾಗಿ ಗ್ರಹಿಸುವ ವಿಚಾರಧಾರೆ, ಬೇಂದ್ರೆಯವರಂತೆ ಕುವೆಂಪು ಅವರಿಗೂ ಆಪ್ತವಾದುದು (ಕುವೆಂಪು ಕೃತಿ ವಿಮರ್ಶೆ : ಪು. ೬೦೧). ನಿಜ, ಅವರಲ್ಲಿ ಇವು ಉನ್ನತೀಕರಣದ ಭಾವಗಳು ಮತ್ತು ಬಿಡುಗಡೆಯ ಮಾರ್ಗಗಳು ಎನ್ನುವುದನ್ನು

# ಸಂಗಮ

ಆಕೆಯ
ಕಿವಿಯಲ್ಲಿ
ಹೊಳೆವುದು
ಚೌಕ, ತ್ರಿಭುಜ
ವಜ್ರ ವೃತ್ತಗಳ
ರೇಖಾಗಣಿತ

ಕಮಲಂ ಅರಸು



ನಿರಾಕರಿಸುವಂತಿಲ್ಲ. ಆದರೆ ಇವನ್ನು ಕುವೆಂಪು ಅವರ ಪ್ರಜ್ಞಾಪೂರ್ವಕ ಆಕೃತಿಗಳು ಎನ್ನಬಹುದು. ಕುವೆಂಪು ಅವರ ಅಭಿವ್ಯಕ್ತಿಗಳಲ್ಲಿ ಇವಕ್ಕೆ ಪರ್ಯಾಯವಾದ ಹಲವು ಬಿಡುಗಡೆಗಳ ದಾರಿಗಳು ಕಾಣುತ್ತವೆ. ಅವರು ಉತ್ಸಾಹದಿಂದ ಸ್ವಾತಂತ್ರ್ಯದ ಮಹಾಘಟನೆಗೆ ಪ್ರತಿಕ್ರಿಯಿಸುವುದು ನಿಜವಾದ ಅನೇಕತ್ವದ ನೆಲೆಯಿಂದಲೆ ಜನಿಸುತ್ತದೆ.

ಕುವೆಂಪು ಅನ್ಯಾಯದ ವಿರುದ್ಧ ದನಿಯೆತ್ತುವುದು, ಅಧಿಕಾರಕೇಂದ್ರಗಳನ್ನು ಪ್ರಶ್ನಿಸುವ ಮೂಲಕ. ಅದನ್ನು 'ಸ್ಥಾಪಿತ' ಮಟ್ಟದಿಂದ ಕೆಳಗಿಳಿಸಿ ನೋಡುವುದು ಅವರ ರೀತಿ. ಅಧಿಕಾರಗಳನ್ನು ಅನುಮಾನಿಸುವುದನ್ನು ಕುವೆಂಪು ಕಲಿಸುವುದಲ್ಲದೆ, ಅದಕ್ಕೆ ಪ್ರತಿಯಾದ ನಿರಂಕುಶತೆಯನ್ನು ಮುಂದೊಡ್ಡುತ್ತಾರೆ. ಚಾರಿತ್ರಿಕವಾಗಿ ಘಟಿಸುವ ಪ್ರತಿಯೊಂದು ರಾಜಕೀಯ ತೀರ್ಮಾನಗಳನ್ನೂ, ನಿಲುವುಗಳನ್ನೂ ಕುವೆಂಪು ಕಾವ್ಯ ಅಡ್ಡಹಾಕುತ್ತದೆ, ಅವನ್ನು ಪ್ರಶ್ನಿಸುತ್ತದೆ. ಜೊತೆಗೆ ಸ್ವಾತಂತ್ರ್ಯದ ಪರಿಕಲ್ಪನೆಯಲ್ಲಿ ಸರ್ವೋದಯದ ವಿಕಾಸವನ್ನು ಕಂಡುಕೊಳ್ಳುತ್ತದೆ.

'ಸಾಕು ಈ ಬಲಾತ್ಕಾರ ಸಾಲು' ಎಂಬ ಕವಿತೆಯ ಸಾಲು ಹೀಗಿದೆ – ಬಲಾತ್ಕಾರಕ್ಕಾಗಿ ಮಾತ್ರವೆ ಹೊರತು ಈ ರೋಷ/ಭಾಷೆಗಾಗಿಯೆ ನಮ್ಮ ದ್ವೇಷವೇನಿಲ್ಲ. ೩-೧೧-೧೯೬೦ರಲ್ಲಿ ವಿಶ್ವಸಂಸ್ಥೆಯಲ್ಲಿ ನೆಹರೂ ಭಾಷಣ ಮಾಡಿದ್ದನ್ನು ಆಕಾಶವಾಣಿಯಲ್ಲಿ ಕೇಳಿದ ಕುವೆಂಪು ಪ್ರತಿಕ್ರಿಯೆ ಒಂದು ಕವಿತೆಯಲ್ಲಿ ವ್ಯಕ್ತವಾಗುತ್ತದೆ;

*ಸ್ವಾತಂತ್ರ್ಯ, ಐಕ್ಯತೆ, ಸರ್ವೋದಯ ಸಮನ್ವಯ !*
*ಸತ್ಯ, ಅಹಿಂಸಾ, ಸ್ನೇಹ ದಯಾ ಇತ್ಯಾದಿ ಮೊಳಗಿತ್ತು*
*ಇಲ್ಲಿಯೋ ನಾಚಿಗೇಡು !*
*ದಸರಾ ದರ್ಬಾರು !*
*ಬಗ್ಗು ಸೊಂಟ, ಡೊಗ್ಗು ಸಲಾಮು !*
*ಗುಲಾಮಿಗೂ ಚೆನ್ನದ ಮುಲಾಮು !*
*ಹಳೆಯ ಪಾಳೆಯಗಾರಿಗೆಕೆ ಹೊಸ ಪ್ರಹಸನ !* (ಅಲ್ಲಿ - ಇಲ್ಲಿ)

ಲಕ್ಕವಳ್ಳಿಗೆ ಇನ್ನೂ ಹೆಸರಿಡದ ಸಮಯದಲ್ಲಿ ಕುವೆಂಪು ಅದನ್ನು ಸಂದರ್ಶಿಸುತ್ತಾರೆ. ಅದಕ್ಕೊಂದು ಹೆಸರನ್ನೂ ಇಡುತ್ತಾರೆ. ಅಲ್ಲಿ ಹೇಳುವ ಮಾತುಗಳಿವು :

*ಯಾರಿಗಿಲ್ಲ ಸೊಂಟ ಬಗ್ಗಿ / ನಮಸ್ಕರಿಪ ತಂಟೆಯಿಲ್ಲ*
*ಯಾರಿಗಿಲ್ಲ ತಗ್ಗಿ, ತಿಕ್ಕಿ, / ಬಾಲ ಬೀಸಿ ಕಾಲು ನೆಕ್ಕಿ*
*ಮೇಲೇರಿದ ಗೋಜು ಇಲ್ಲ* (ಅನಧಿಕೃತ ನಾಮಕರಣೋತ್ಸವ)

ಈ ತೆರನಾದ ಸ್ವಾಭಿಮಾನದ ಚಿಂತನೆ ಪರ್ಯಾಯದ, ಸೂಚನೆ ಕೊಡುತ್ತದೆ.

ಹಿಂಸೆಯನ್ನು ಮುಖಾಮುಖಿಗೊಳ್ಳುವಲ್ಲಿ ಅಹಿಂಸಾತತ್ವವು ಇದೆ. ಅದು ನಿರ್ವಸಾಹತೀಕರಣದ ಬಲವಾದ ಪ್ರತಿಪಾದನೆ. ಗಾಂಧಿ ರಾಜಕೀಯ ಬಿಡುಗಡೆಯೊಂದನ್ನೆ ಕಾತರಿಸಿದ್ದರು. ಮಾನಸಿಕವಾಗಿಯೂ ಬಿಡುಗಡೆಗೊಂಡು ಸ್ವರಾಜ್ಯವನ್ನು ಸ್ಥಾಪಿಸಬೇಕೆಂಬುದು ಅವರ ಇಚ್ಛೆ. ಹಿಂಸಾತತ್ವವನ್ನು ಒಳಗೊಂಡಂತೆ ಕಾಣುವ ಕುವೆಂಪು ಕಾವ್ಯ ಅಂತರ್ಯದಲ್ಲಿ ಅಹಿಂಸೆಯನ್ನು ಹೀಗೆ ನಿರ್ವಚನ ಮಾಡಿಕೊಳ್ಳುತ್ತದೆ :

ಹಿಂಸೆಯನಹಿಂಸೆಯಿಂ ಹಿಂಸಿಸದೆ ಕೊಲ್ವ / ಸಮರ ಲೋಲನೆ ನಮ್ಮ ವೀರ ಸತ್ಯಾಗ್ರಹ ! / ಇತರರನು ನೋಯಿಸದೆ ತನ್ನ ಜೀವನ ತೆತ್ತ / ಕಾಯುವವನಾವನೋ ಅವನೆ ಸತ್ಯಾಗ್ರಹಿ ! (ಸತ್ಯಾಗ್ರಹಿ)

– ಇದು ನೇರ ಮಾತಾದರೆ, ಅಹಿಂಸೆಯನ್ನು ಒತ್ತಿ ಹೇಳುವ ಕಥನ ಕವನ 'ಮರಸು ಬೇಟೆ'ಯ ಸಾಲುಗಳನ್ನು ಗಮನಿಸಬೇಕು :

ಬೇಟೆಯನು ಕೈ ಬಿಟ್ಟನಂದಿಗೆ ! / ತನ್ನ ಕಂದನ ಜೀವದಂತೆಯೆ ಇತರ ಜೀವಗಳಿಂದ ಹಿಂಸೆಯ / ವತ್ರವ ಹೂಡಿದನು ! (ಮರಸುಬೇಟೆ)

ಹಿಂಸೆಗೆ ಪ್ರತಿಹಿಂಸೆಯ ನೆಲೆ ಬಿಟ್ಟು ಅನೇಕತ್ವದ ಕಡೆ ತಿರುಗುವುದು ಕುವೆಂಪು ಕಾವ್ಯದಲ್ಲಿ ಕಾಣುತ್ತದೆ. ಅನೇಕಾಂತವಾದದ ತಾತ್ವಿಕತೆಯನ್ನು ಅನುಸರಿಸಿ, ರಾಜಕೀಯ ತತ್ವವನ್ನಾಗಿ ವಿಸ್ತರಿಸಿಕೊಂಡ ಗಾಂಧಿಯಂತೆ ಕುವೆಂಪು ಸಾಮಾಜಿಕ ಘನತೆ ಮತ್ತು ಪ್ರಕೃತಿಯಲ್ಲಿನ ಜೀವನ ಘನತೆ ಎರಡನ್ನೂ ಎತ್ತಿಹಿಡಿಯುತ್ತಾ, ಬಹುತ್ವದ ಸಾಂಸ್ಕೃತಿಕ ನೆಲೆಗಳನ್ನು ವಿಸ್ತರಿಸಿತ್ತಾರೆ.

ಸ್ತ್ರೀತ್ವದ ದೃಷ್ಟಿಕೋನವು ಬಹುತ್ವವುಳ್ಳ ಚಿಂತನಾಕ್ರಮದಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತದೆ. ದ್ವಿತ್ವವನ್ನು ನಿಂತು ಸಾಧಿಸುವ ತರ್ಕವನ್ನು ಅದು ಗಂಡಿಸಿನ ಚಿಂತನಾಕ್ರಮವಾಗಿ ಗುರುತಿಸುತ್ತದೆ. ಬಹುತ್ವವನ್ನು ಆಶ್ರಯವಾಗುಳ್ಳ ಕುವೆಂಪು ಅವರ ಹುಡುಕಾಟ ಕೂಡ ದ್ವಿತ್ವವನ್ನು ಮೀರಿದ್ದು.

ಕುವೆಂಪು ಅವರ ವಿಶ್ವ ವಿಶಾಲವಾದುದು. ಅಲ್ಲಿ ನಾಯಿಗಳಿಂದ ಹಿಡಿದು ಮನುಷ್ಯರ ತನಕ ಎಲ್ಲರೂ ಘನತೆವೆತ್ತವರೇ. ರೈತ ರಾಜನಿಗೂ ಮಿಗಿಲು. ತಿಮ್ಮ, ಗಿಡ್ಡಿ, ಭೈರ, ಭಿಕ್ಷೆ ಬೇಡುವ ಹಳೇ ಮುದುಕಿ ಮುಂತಾದ ಸಾಮಾನ್ಯರೆಲ್ಲ ಅಸಾಮಾನ್ಯರಾಗಿ ಅಸ್ಮಿತೆ ಪಡೆದುಕೊಳ್ಳುವ ವಿಶ್ವ ಅದು. ಕೇಂದ್ರಗಳನ್ನು ಬದಲಾಯಿಸಿ ನೋಡುವ ಮೂಲಕ ಅನೇಕ ಸಾಮಾನ್ಯ ಚೇತನಗಳನ್ನು ಕುವೆಂಪು ಮುನ್ನೆಲೆಗೆ ತರುತ್ತಾರೆ. ಒಬ್ಬ ರಾಜನಿಗೆ ಬದಲಾಗಿ ಹಲವರು ದುಡಿಯುವ ಕೈಗಳನ್ನು ಪರ್ಯಾಯವಾಗಿ ನೋಡಲಿಚ್ಛಿಸುತ್ತಾರವರು. ನಿರ್ವಸಾಹತೀಕರಣ ಕುರಿತು ಕೆಲಸ ಮಾಡುತ್ತಿರುವ ಪ್ರೊ|| ಮಕರಂದ ಪರಾಂಜಪೆ ಹೇಳುವಂತೆ, ''ಸ್ವಾತಂತ್ರ್ಯ ಸಂಗ್ರಾಮದ ಅದ್ಭುತ ಕ್ರಿಯೆಯಲ್ಲಿ ಸಾಮಾನ್ಯರೂ ನಾಯಕರಾದರು, ಹುತಾತ್ಮರಾದರು, ಆ ಕ್ರಿಯೆಯಿಂದಲೆ ಅಸಾಧಾರಣ ಮನುಷ್ಯರಾದರು.''

ಗಾಂಧಿ ಸ್ವಾತಂತ್ರ್ಯಕ್ಕಾಗಿ ಅನುಸರಿಸಿದ ಮಾರ್ಗವನ್ನೇ ಹೆಣ್ಣುಮಾರ್ಗ ಎಂದು ಗುರುತಿಸಲಾಗುತ್ತದೆ. ಗಾಂಧಿ ತಮ್ಮ ರಾಜಕೀಯ ಸಿದ್ಧಾಂತಗಳನ್ನು ಆರಂಭಿಸಿದ್ದು ಹೆಣ್ಣಿನ ದಿನಚರಿಯ ದೈನಂದಿನ ಕಾಯಕಗಳಿಂದ. ನೂಲುವಿಕೆ, ಮನೆಯನ್ನು ಸ್ವಚ್ಛಗೊಳಿಸಿಕೊಳ್ಳುವಿಕೆ ಮತ್ತು ಅಡುಗೆಗೆ ಬೇಕಾದ ಉಪ್ಪಿನಂತಹ ಪರಿಕರಗಳಿಂದ ಸತ್ಯಾಗ್ರಹಕ್ಕೆ ಬೇಕಾದ ಸೈದ್ಧಾಂತಿಕತೆಯನ್ನು ಅವರು ಪಡೆದುಕೊಂಡುದುದಾಗಿ ವಿಶ್ಲೇಷಕರು ಹೇಳುತ್ತಾರೆ. ಕಾಯಕ ಗೌರವ ಮತ್ತು ಅಲ್ಪವೆಂದು ಅಗೌರವಿಸಲ್ಪಡುತ್ತಿದ್ದ ಶ್ರಮದ ಅಂತರ್ಯವು ಅಂತಿಮವಾಗಿ ಸ್ವರಾಜ್ಯದ ಮೂಲಮಂತ್ರವೂ ಅಗಿರುವುದನ್ನು ಗಾಂಧಿ ಕಂಡುಕೊಳ್ಳುತ್ತಾರೆ, ಒಂದು ರೀತಿಯಲ್ಲಿ ಗಾಂಧಿ ತಾವು ಮಾಡಿದ ಸಾಧಾರಣೀಕರಣದ ಸಾರ್ವತ್ರಿಕ ಪ್ರತಿಪಾದನೆಯನ್ನು ಮತ್ತು ಆ ಮೂಲಕ ಬಂದು ನಿರ್ವಸಾಹತೀಕರಣದ ದಾರಿಯೂ, ಆತ್ಮೋನ್ನತಿಯೂ ಸಾಧ್ಯವಿದೆ ಎನ್ನುವುದನ್ನು ತೋರಿಸಿಕೊಟ್ಟರು. ಇದನ್ನು ಕುವೆಂಪು ತಮ್ಮ ಶ್ರೀಸಾಮಾನ್ಯರ ದೀಕ್ಷಾಗೀತೆಯಲ್ಲಿ ಹೀಗೆಂದು ಹಾಡುತ್ತಾರೆ :

*ಶ್ರೀ ಸಾಮಾನ್ಯವೆ ಭಗವನ್ ಮಾನ್ಯಂ.*
*ಕೊನೆಗೊಂಡಿದೆ ಓರೋರ್ವರ ಗರ್ವದ ಕಾಲ*
*ಇದು ಸರ್ವರ ಕಾಲ !*
*ಅಧ್ಯಕ್ಷನೊ ಸೇನಾನಿಯೊ ! ಕಮ್ಮಾರನೊ ಚಮ್ಮಾರನೊ*
*ಕಾಯಕವೆಲ್ಲವು ಪೂಜ್ಯ !* (ಶ್ರೀ ಸಾಮಾನ್ಯನ ದೀಕ್ಷಾಗೀತೆ)

ವೈರುಧ್ಯಗಳ ಮೇಲಾಟವೇ ಕುವೆಂಪು ಕಾವ್ಯದಲ್ಲಿ ಕಾಣುವುದಾದರೂ ತಾತ್ವಿಕತೆಯನ್ನು ರೂಪಿಸಿಕೊಳ್ಳುವ ಸಂದರ್ಭದಲ್ಲಿ ಕುವೆಂಪು ಅವರಲ್ಲಿ ಪರ್ಯಾಯ ಮಾರ್ಗಕ್ಕೇ ಹೆಚ್ಚು ಪ್ರಾಶಸ್ತ್ಯ. ಶಕ್ತಿಯ ಉನ್ಮತ್ತ ಖಡ್ಗಗಳ ಝಣಝಣತ್ಕಾರದ ನರ್ತನಕ್ಕಿಂತ 'ಕೂಗು ಕರ್ಕಶವಿದನು ತಾಳೆ ನಮ್ಮ ಹೇ ತಾಯೆ ಸೈರಿಸೆನು ರಣವಿದು ಕಠೋರ' (ಜೋಗುಳ) ಎಂಬ ಅಹಿಂಸೆಯ ಸೊಲ್ಲು ಆಳದಿಂದ ಕೇಳುತ್ತದೆ. ಹಿಂಸೆಯ ರುದ್ರ ನರ್ತನಕ್ಕಿಂತ ಸ್ತ್ರೈಣವೆನ್ನಿಸುವ ಗಾಂಧಿಯ ಹೆಣ್ಣು ಮಾರ್ಗ ಅಸಾಧಾರಣ ಪ್ರಭಾವ ಬೀರಲು ಸಾಧ್ಯವಿದೆ ಎನ್ನುವುದನ್ನು ಚರಿತ್ರೆಯೇ ತೋರಿಸಿಕೊಟ್ಟಿದೆ. ಕುವೆಂಪು ಅವರ ನಿರ್ವಸಾಹತೀಕರಣದ ಹುಡುಕಾಟಗಳು ಸಹ ಅಹಿಂಸೆಯ ನೆಲೆಯತ್ತಲೇ, ಅದರ ನಿಜವಾದ ಸ್ವರೂಪವನ್ನು ಪಡೆದುಕೊಳ್ಳುವತ್ತಲೇ ತಿರುಗುವುದು ಈ ದಿಸೆಯಲ್ಲಿ ಮುಖ್ಯವೆನಿಸುತ್ತದೆ. ಆದ್ದರಿಂದಲೇ ಗಾಂಧಿಯಂತೆ ಅವರೊಬ್ಬ ಹೆಣ್ಣುಮಾರ್ಗಿ; ಸಾಂಸ್ಕೃತಿಕ ಬಹುತ್ವವನ್ನು ಪ್ರತಿಪಾದಿಸುವ ಅಹಿಂಸಾವಾದಿ ಅನ್ನಿಸುತ್ತಾರೆ.

ಆರ್. ತಾರಿಣಿ ಶುಭದಾಯಿನಿ
'ಸಿರಿ', ೧ನೇ ಅಡ್ಡರಸ್ತೆ, ನೃಪತುಂಗ ಬಡಾವಣೆ, ಚಿತ್ರದುರ್ಗ - ೫೭೭ ೫೦೧

ತಿಳಿವು

# ನೀರ ಕಂಡಲ್ಲಿ ಮುಳುಗುವರಯ್ಯಾ, ಮರವ ಕಂಡಲ್ಲಿ ಸುತ್ತುವರಯ್ಯಾ...

**ಈ** ದೇಶದಲ್ಲಿ ಜನರಿಗೆ ಸುತ್ತಿದ ಸಂಕೋಲೆಯಂತಿರುವ ಅಂಧಶ್ರದ್ಧೆಯ ಅಜ್ಞಾನವನ್ನು ಯಾವ ಮಹಾತ್ಮನು ಬಂದರೂ ಅಳಿಸಲು ಸಾಧ್ಯವೇ ಇಲ್ಲ. ನಾವು ೨೧ನೆಯ ಶತಮಾನದಲ್ಲಿದ್ದೇವೆ ಎಂದು ಬೀಗಿದರೂ ನಿಜಕ್ಕೂ ನಾವಿರುವುದು ಇನ್ನೂ ಆದಿಮಾನವರಂತೆ. ಅಂದಿನ ಜನರು ತಮ್ಮ ಅಜ್ಞಾನದಿಂದಾಗಿ ನಿಸರ್ಗದಲ್ಲಿನ ವೈಚಿತ್ರ್ಯಗಳನ್ನು ಕಂಡು ಬೆರಗಾಗುತ್ತಿದ್ದರು, ಬೆದರುತ್ತಿದ್ದರು. ನಿಸರ್ಗದಲ್ಲಿ ದೇವರೊ, ಇನ್ನಾವದೊ ಶಕ್ತಿಯೋ ಇದೆಯೆಂದು ಭಾವಿಸಿಕೊಂಡು ಅದಕ್ಕೆ ತೃಪ್ತಿಪಡಿಸಲು ಆರಾಧನೆಯ ಕಸರತ್ತನ್ನು ಮಾಡುತ್ತಿದ್ದರು. ಆದರೆ ಇಂದಿನ ಆಧುನಿಕರು ಮಾಡುವ ಕಂದಾಚಾರದ ಪರಿಯನ್ನು ಕಂಡು ''ನಗೆಯು ಬರುತಿದೆ ಎನಗೆ ನಗೆಯು ಬರುತಿದೆ'' ಎನ್ನುವಂತಾಗಿದೆ. ಈ ನಾಡನ್ನು ರಾಜಕಾರಣಿಗಳು ಆಳುತ್ತಿರಬಹುದು ಆದರೆ ಈ ನಾಡಿನ ರಾಜಕಾರಣಿಗಳ ಮತ್ತು ಜನರ ಮನಸ್ಸನ್ನು ನಿಜಕ್ಕೂ ಆಳುತ್ತಿರುವವರು ಜಾತಕ ಹೇಳುವವರು, ವಾಸ್ತುಶಾಸ್ತ್ರಜ್ಞರು, ಪುರೋಹಿತಶಾಹಿಗಳು. ಮಾಧ್ಯಮಗಳಂತೂ ಜನರ ಬದುಕನ್ನು ನಿತ್ಯವೂ ನಾಶಮಾಡಿ ಜ್ಞಾನಾಂಧಕಾರದಲ್ಲಿ ಮುಳುಗಿಸುತ್ತಿವೆ. ಬೆಳಗಾದರೆ ಸಾಕು ಮೂರ್ಖರ ಪೆಟ್ಟಿಗೆಯಲ್ಲಿ ಕಾಣಿಸುವವರೇ ಇವರು, ಅವರಿಲ್ಲದೆ ಒಂದು ಹುಲ್ಲುಕಡ್ಡಿಯೂ ಸಹ ಇಲ್ಲಿ ಅಲುಗಾಡುವದಿಲ್ಲ. ಹಿಮಾಲಯವು ಉತ್ತರಕ್ಕಿರಬಾರದು ಅದರಿಂದ ಭಾರತಕ್ಕೆ ದೋಷವಿದೆ ಎಂದು ಹೇಳಿದರೆ ಸಾಕು, ಅದನ್ನು ಕಿತ್ತಿಡಲು ಸಾಧ್ಯವಿದ್ದಿದ್ದರೆ ನಮ್ಮೀ ತಥಾಕಥಿತ ಆಧುನಿಕರು ಆ ಕೆಲಸವನ್ನು ತಕ್ಷಣ ಮಾಡಿ ಬಿಡುತ್ತಿದ್ದರೇನೋ! ಇಸ್ರೋದಂತಹ ವಿಜ್ಞಾನ ಸಂಸ್ಥೆಯ ಮುಖ್ಯಸ್ಥರೇ ದಾರಿತಪ್ಪಿದ ಅಜ್ಞಾನಿಯಂತೆ ಮಾತನಾಡುತ್ತಿದ್ದರೆ ಇನ್ನು ಸಾಮಾನ್ಯರ ಮಾತೇನು ?

ಈ ದೇಶದಲ್ಲಿರುವಷ್ಟು ದೇವತೆಗಳು ಮತ್ತೆಲ್ಲೂ ಇರಲಿಕ್ಕಿಲ್ಲ. ಕಾಲಿಡಲು ಇಂಬಿಲ್ಲದಂತೆ ಪುರೋಹಿತಶಾಹಿಗಳು ಹೊಟ್ಟೆಪಾಡಿಗಾಗಿ ಎಲ್ಲೆಡೆ ದೇವರುಗಳನ್ನು ಸೃಷ್ಟಿಸಿ, ಬಿನ್ ಬಂಡವಾಳದ ಧಂಧೆಗಳಲ್ಲಿ ತೊಡಗಿದ್ದಾರೆ. ದೊಡ್ಡ ದೊಡ್ಡ ದೇವಾಲಯಗಳಲ್ಲಿ ಪೂಜಾರಿಗಳ ಆವಸ್ಥೆಯನ್ನು ನೋಡಿದರೆ ಅವರು ದೇವಲೋಕದಿಂದ ಭೂಮಿಗಿಳಿದು ಬಂದವರಂತೆ ಜನರನ್ನು ಸಮ್ಮೋಹನ ಗೊಳಿಸುತ್ತಿದ್ದಾರೆ. ಜನರು ಅವರಿಗೆ ತಮ್ಮನ್ನು ತಾವು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುತ್ತಾರೆ. ಅವರು ಕಾಲಿಟ್ಟರೆ ಸ್ವರ್ಗ ಪ್ರಾಪ್ತಿ ಎಂದು ನಂಬಿದ ಜನರು ಅವರ ಕಾಲನ್ನು ತಮ್ಮ ತಲೆಯ ಮೇಲಿರಿಸಿಕೊಳ್ಳಲು ಕ್ಯೂ ನಿಲ್ಲುತ್ತಾರೆ. ಆದರೆ ಕಾಲಿಟ್ಟವನಿಗೆ ತಾನು ಎಲ್ಲಿಗೆ ಹೋಗುತ್ತೇನೆಂಬುದು ಗೊತ್ತಿರುವದಿಲ್ಲ? ಈ ಕೆಲಸವನ್ನು ತಿಳಿಯದವರು ಮಾಡಿದರೆ ಏನೂ ಅನ್ನಿಸುವದಿಲ್ಲ. ಆದರೆ ಇಲ್ಲಿ ಹೀಗೆ ನಿಲ್ಲುವವರು ವಿಜ್ಞಾನಿಗಳು, ಬಹಳಷ್ಟು ಕಲಿತವರು. ಇಂಥವರೇ ಹೀಗೆ ಮಾಡಿದರೆ ಏನೂ ತಿಳಿಯದವರು ಅವರನ್ನು ಅನುಸರಿಸಿ, ಸಾಮೂಹಿಕ ಸನ್ನಿಗೆ ಒಳಗಾಗುತ್ತಾರೆ.

ಒಮ್ಮೆ ರಾತ್ರಿ ಪ್ರಯಾಣಕ್ಕಾಗಿ ಹೊಸಪೇಟೆಯ ಬಸ್ ನಿಲ್ದಾಣದಲ್ಲಿ ಕುಳಿತಿದ್ದೆ. ಅಲ್ಲಿ ಕುಳಿತ ಸುಶಿಕ್ಷಿತರೊಬ್ಬರು, ''ಇಲ್ಲೊಬ್ಬನಿದ್ದಾನಂತೆ, ಅವನು ಪೆನ್ನು ಕೊಟ್ಟರೆ ಆ ಪೆನ್ನಿನ ತುದಿಗೆ ಮಂತ್ರಮಾಡಿಸಿಕೊಡ್ತಾನಂತೆ ಆ ಪೆನ್ನಿಂದ ಬರೆದರೆ ಪರೀಕ್ಷಾದಾಗ ಹುಡುಗ್ರು ಪಾಸಾಗದು ಗ್ಯಾರಂಟಿ ಅಂತ ಅವನತ್ತ ಹೊಂಟಿನಿ'' ಎಂದು ಹೇಳುತ್ತಿದ್ದರು. ನನ್ನ ಹಳ್ಳಿಯ ಗೆಳೆಯನೊಬ್ಬ ಬಹಳ ಕಲಿತು ಈಗ ನಗರವನ್ನು ಸೇರಿದ್ದಾನೆ. ಇಲ್ಲಿ ಅವನ ದೇಖರೇಖಿ ಇಲ್ಲದ ಅವನ ಹೊಲಗಳೆಲ್ಲಾ ಪಡಾ ಬಿದ್ದು ಏನೂ ಬೆಳೆಯುತ್ತಿಲ್ಲ. ಅವನಿಗೆ ನಗರದ ಜ್ಯೋತಿಷಿಗಳು, ''ಸಾಹೇಬ್ರ, ನಿಮ್ಮ ಹೊಲಾ ಬೆಳೆಯುವದಿಲ್ಲ, ಅದಕ್ಕ ಮಗ್ಗಲ ಹೊಲದಾರು ಬೆಳೀದಂಗ (ಮಾಟ) ಮಾಡ್ಯಾರ್ರಿ. ನಾನು ಅದಕ್ಕ ಚಲೋದು ಮಾಡಿಕೊಡ್ತಿನ್ರಿ, ನಾನು ಕೊಟ್ಟ ಲಿಂಬಿಹಣ್ಣು ಹೊಲ್ದ ಮೂಲ್ಯಾಗ ಹುಗದರ ನಿಮ್ಮ ಹೊಲಾ ಬೆಳಿತಾವ್ರಿ.'' ಎಂದು ಹೇಳಿದ್ದನು. ಅದನ್ನು ನಂಬಿದ ವಿದ್ಯಾವಂತನಾದ ಈತ ಅವರು ಕೊಟ್ಟ ಲಿಂಬಿಹಣ್ಣು ಹುಗಿದರೂ ಹೊಲಾ ಬೆಳೀಲಿಲ್ಲಾ. ಯಾಕಂದರ ಅಲ್ಲಿ ಕೃಷಿ ಕೆಲಸವಿಲ್ಲದೆ, ಗೊಬ್ಬರ ಹಾಕದೆ ಎಷ್ಟೋ ವರ್ಷಗಳಾಗಿವೆ. ಅದರಲ್ಲಿ ಬೆಳೆ ಬೆಳೆಯುವದಾದರೂ ಹೇಗೆ ? ಇಂಥ ತಿಳಿದವನಿಗೆ ಅಷ್ಟೂ ತಿಳುವಳಿಕೆ ಬೇಡವೆ ? ಇದು ಈ ದೇಶದ ವಿದ್ಯಾವಂತರ ಹಣೆಬರಹ ! ಹಾಗೆ ನೋಡಿದರೆ ಈ ದೇಶಕ್ಕೆ ಅಶಿಕ್ಷಿತರಿಗಿಂತ ಕಲಿತವರೆ ದೊಡ್ಡ ಅಪಾಯಕಾರಿಗಳು.



ಆದಿಶೇಷನು ದೇವತೆಯಾದರೆ ಈ ದೇವರನ್ನು ಬಡಿದು ಕೊಲ್ಲುವದೇಕೆ ? ಅದನ್ನು ಮಲಗುವ ತಮ್ಮ ಹಾಸಿಗೆಯಲ್ಲಿ ದೇವರೆಂದು ಮಲಗಿಸಿಕೊಳ್ಳ ಬಾರದೇಕೆ ? ಬೆಂಕಿ ದೇವರೆಂದಾದರೆ ಆ ದೇವರು ಮನೆಗೆ ಬಂದು ಇಡೀ ಮನೆ ಹತ್ತಿ ಉರಿಯುವಾಗ, ಅದನ್ನು ಸಿಕ್ಕ ಬಚ್ಚಲ ನೀರಿನಿಂದ ನಂದಿಸಲು ಯತ್ನಿಸುವು ದೇಕೆ ? ಅದನ್ನು ಅಲ್ಲಿಯೇ ನಿಲ್ಲಿಸಿ ಪೂಜಿಸಬಾರದೇಕೆ ? ಬಸವಣ್ಣನವರು ಇದೇ ಪ್ರಶ್ನೆಯನ್ನೆತ್ತಿದ್ದಾರೆ : 'ಕಲ್ಲನಾಗರ ಕಂಡರೆ ಹಾಲ ನೆರೆವರು, ದಿಟದ ನಾಗರ ಕಂಡರೆ ಕೊಲ್ಲು ಎಂಬರು' ಎಂದು, ದೇವರಿಗೆ ಒಯ್ಯುವ ಎಡೆಯನ್ನು ದೇವರೇ ಕೈಚಾಚಿ ತಿಂದರೆ ಎಡೆಯನ್ನು ಒಯ್ದವರ ಗತಿ ಅಯೋಮಯ, ಅಲ್ಲಿಗೆ ಮತ್ತೊಮ್ಮೆ ಹೋಗುವದೇ ಇಲ್ಲ. ದೇವರು ಕೈಚಾಚಿ ತಿನ್ನುತ್ತದೆ. ಅದರಲ್ಲಿ ಯಾವದೋ ರಾಕ್ಷಸ ಇದಾನೆ ಎಂದು ಹುಯಿಲೆಬ್ಬಿಸಿ ಗುಡಿಗೆ ಹೋಗುವದನ್ನೇ ತ್ಯಜಿಸುತ್ತಾರೆ. ಈ ದೇಶದ ಬತ್ತಲೆ ಫಕೀರ ಗಾಂಧೀಜಿಯವರು ಯಾವದೇ ಗುಡಿ ಗುಂಡಾರ, ಚರ್ಚು, ಮಸೀದಿಗಳಿಗೆ ಹೋಗಲಿಲ್ಲ. ಅವರು ಅನಾಥರಲ್ಲಿ ದೇವರನ್ನು ಕಂಡರು. ಇಂದಿನ ಗುಡಿಗಳು, ಪೂಜಾರಿಗಳು, ಪುರೋಹಿತರು ಮತ್ತು ಧರ್ಮಗುರುಗಳ ಶೋಷಣೆಗೆ ವ್ಯವಸ್ಥಿತ ಮಾಧ್ಯಮಗಳು ವ್ಯವಹಾರಿ ತಾಣ ಗಳಾಗುತ್ತಿವೆ. ನಮ್ಮ ಸಾವಿರಾರು ವರ್ಷಗಳ ಗುಲಾಮಗಿರಿಗೆ, ಸಾಮಾಜಿಕ ಅಧೋಗತಿಗೆ ಈ ನಮ್ಮ ಕಾಲ್ಪನಿಕ ದೇವರುಗಳು ಮತ್ತು ಧರ್ಮಗಳೇ ಮೂಲ ಕಾರಣವೆಂದರೆ ತಪ್ಪಾಗಲಾರದು. ಶರಣರು 'ವೇದ ಶಾಸ್ತ್ರಾಗಮ ಪುರಾಣಂಗಳುಂಬುವ ಕೊಟ್ಟಣವ ಕುಟ್ಟುತ್ತ, ನುಚ್ಚು ತೌಡು ಕಾಣಿರೊ', 'ಆದಿಪುರಾಣ ಅಸುರರಿಗೆ ಮಾರಿ, ವೇದ ಪುರಾಣ ಹೋತಿಂಗೆ ಮಾರಿ... ಇವೆಲ್ಲ ಪುರಾಣವು ಕರ್ಮಕ್ಕೆ ಮೊದಲು', 'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನಬಾರ ನೆತ್ತುವೆ, ಆಗಮದ ಮೂಗ ಕೊಯಿವೆ' ಎನ್ನುತ್ತಾರೆ. ಶಿವಶರಣೆ ಅಕ್ಕಮಹಾದೇವಿಯು ಇಂಥವರನ್ನು 'ನೀವೇನಾದರು ಕಂಡಿರಾ ಚನ್ನಮಲ್ಲಿಕಾರ್ಜುನನ್ನು' ಎಂದು ಇಂಥವರನ್ನು ಚುಚ್ಚಿ ಕೇಳುತ್ತಾಳೆ. ದೇವರಿಗಾಗಿ ಅಲೆಮಾರಿಗಳಾಗಿ ತಿರುಗುವ ಇವರು ಗಾಣದೆತ್ತಿನಂತಿದ್ದು 'ನೀರ ಕಂಡಲ್ಲಿ ಮುಳುಗುವರಯ್ಯ, ಮರವ ಕಂಡಲ್ಲಿ ಸುತ್ತುವರಯ್ಯ, ಬತ್ತುವ ಜಲ, ಒಣಗುವ ಮರವ ನೆಚ್ಚಿದವರು ನಿಮ್ಮನೆತ್ತಬಲ್ಲರು ಕೂಡಲ ಸಂಗಮದೇವಾ' ಎನ್ನುವ ಬಸವಣ್ಣನವರ ಮಾತು ಎಷ್ಟು ಅರ್ಥಪೂರ್ಣ ! ಗಾಣದಂತೆ ಸುತ್ತಿದರೆ, ಮನದ ಮೈಲಿಗೆಯನ್ನು ತೊಳೆದುಕೊಳ್ಳದೆ ನೀರಿನಲ್ಲಿ ಮುಳುಗಿದರೆ ಪುಣ್ಯ ಬರುವುದಾದರೆ ಗುಂಗಿಹುಳು ಸುತ್ತುತ್ತದೆ, ಎಮ್ಮೆಯು ಸದಾ ನೀರಿನಲ್ಲಿ ಬೀಳುವದಿಲ್ಲವೆ ? 'ಮಾಡಿ ಮಾಡಿ ಕೆಟ್ಟರೊ ಮನ ವಿಲ್ಲದೆ, ನೀಡಿ ನೀಡಿ ಕೆಟ್ಟರೊ ನಿಜವಿಲ್ಲದೆ', 'ಮಾಡಿಯೂ ಮಾಡದಂತಿರಬೇಕು, ನೋಡಿಯೂ ನೋಡದಂತಿರಬೇಕು, ನೋಡುವ ನೋಟದೊಳು ತಾನಿಲ್ಲದಂತಿರ ಬೇಕು' ಎನ್ನುವ ಮೌಲಿಕವಾದ ಮಾತುಗಳು ಯಾರಿಗೆ ಕೇಳುತ್ತವೆ ? ಇವರಿಗೆ ಕೇಳಿಸುವದು ಬಾಬಾಗಳ, ಲಂಪಟಸ್ವಾಮಿಗಳ, ಪುರೋಹಿತರ ಮಾತುಗಳು ಮಾತ್ರ.

**ಡಾ|| ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ - ೫೮೨ ೨೩೦, ರೋಣ ತಾಲ್ಲೂಕು, ಗದಗ ಜಿಲ್ಲೆ

**ಧರಣಿಮಂಡಲ ಮಧ್ಯದೊಳಗೆ**
22 ಕನ್ನಡ ಕಥೆಗಳು

**ಆಫ್ರಿಕದ ಹಾಡು**
ಆಫ್ರಿಕ ಖಂಡದ ಕಥೆಗಳು
ಅನು : ಸಿ. ಸೀತಾರಾಮ್

**ಕಾಡಿನಲ್ಲಿ ಬೆಳದಿಂಗಳು**
ವಿಯೆಟ್ನಾಮ್ ಕಥೆಗಳು
ಅನು : ಸಿ.ಪಿ. ರವಿಕುಮಾರ್

**ಚೆಲುವು**
ಮಂಗೋಲಿಯ, ಚೀನ, ಜಪಾನ್, ಕೊರಿಯ ಕಥೆಗಳು
ಅನು : ಜಿ.ಎಸ್. ಸದಾಶಿವ

**ಸುಭಾಷಿಣಿ**
ಭಾರತ, ನೆರೆಹೊರೆಯ 23 ಕಥೆಗಳು
ಅನು : 23 ಅನುವಾದಕರು

**ವಿಚಿತ್ರ ಕಕ್ಷಿದಾರ**
ಇಂಗ್ಲೆಂಡ್ ಕಥೆಗಳು
ಅನು : ಎನ್.ಎಸ್. ರಾಮಚಂದ್ರಯ್ಯ
ಎಸ್.ಆರ್. ಭಟ್

**ಮಂಜುಹೂವಿನ ಮದುವಣಗ**
ಹಂಗೆರಿ, ರುಮಾನಿಯ ಕಥೆಗಳು
ಅನು : ಕೆ.ಎಸ್. ನಾರಾಯಣಸ್ವಾಮಿ

**ಬೂದುಬಣ್ಣದ ಕಾಂಗರೂ**
ಆಸ್ಟ್ರೇಲಿಯ, ನ್ಯೂಜಿಲೆಂಡ್ ಕಥೆಗಳು
ಅನು : ಪಾ. ಸಂಜೀವ ಬೋಳಾರ

**ಹೆಜ್ಜೆಗುರುತು**
ರಷ್ಯ - ನೆರೆಹೊರೆ ಕಥೆಗಳು
ಅನು : ಕೆ.ಎಸ್. ನಿಸಾರ್ ಅಹಮದ್

**ಅರಬಿ**
ಐರ್‌ಲೆಂಡ್, ವೇಲ್ಸ್, ಸ್ಕಾಟ್‌ಲೆಂಡ್ ಕಥೆಗಳು
ಅನು : ಶಾ. ಬಾಲು ರಾವ್

**ನೆತ್ತರು ದೆವ್ವ**
ಚೆಕೊಸ್ಲೊವಾಕಿಯ, ಪೋಲೆಂಡ್ ಕಥೆಗಳು
ಅನು : ಎಚ್.ಕೆ. ರಾಮಚಂದ್ರಮೂರ್ತಿ

**ಬಾವಿಕಟ್ಟೆಯ ಬಳಿ**
ಯುಗೊಸ್ಲಾವಿಯ, ಆಲ್ಬೇನಿಯ, ಬಲ್ಗೇರಿಯ ಕಥೆಗಳು
ಅನು : ಜಿ. ಶ್ರೀನಿವಾಸರಾಜು

**ಅದೃಷ್ಟ**
ಅಮೆರಿಕ, ಕೆನಡ, ಮೆಕ್ಸಿಕೊ ಕಥೆಗಳು
ಅನು : ವೀಣಾ ಶಾಂತೇಶ್ವರ

## ಲೋಕಸಾಹಿತ್ಯೋದ್ಯಾನದ ಸವಿಜೇನು ಸಂಗ್ರಹ

# ವಿಶ್ವಕಥಾಕೋಶ

## 96 ದೇಶ-ಪ್ರದೇಶಗಳ, 320 ಲೇಖಕರ 324 ಶ್ರೇಷ್ಠ ಕಥೆಗಳ ಕಣಜ

ಪ್ರಧಾನ ಸಂಪಾದಕರು
**ನಿರಂಜನ**

ಡಿಮ್ಮೈ ಅಷ್ಟದಳಾಕಾರದಲ್ಲಿ (14 x 21.5 ಸೆಂ. ಮೀ.)
ಸುಮಾರು 4000 ಪುಟಗಳು. 25 ಸಂಪುಟಗಳಲ್ಲಿ

**ಕನ್ನಡ ಜನಕೋಟಿಗೆ ನವಕರ್ನಾಟಕ ಪ್ರಕಾಶನದ ಕೊಡುಗೆ**

***30 ವರ್ಷಗಳ ನಂತರ ಇದೀಗ ಮರುಮುದ್ರಣವಾಗುತ್ತಿದೆ.***

ಇಂದಿನ ಮಾರುಕಟ್ಟೆಯ ದರದಲ್ಲಿ ಪ್ರತಿಸಂಪುಟಕ್ಕೆ ₹100ರಂತೆ 25 ಸಂಪುಟಗಳಿಗೆ ₹2500

ಇನ್‌ಫೋಸಿಸ್ ಫೌಂಡೇಷನ್ ನೆರವಿನೊಂದಿಗೆ ಪ್ರತಿ ಸಂಪುಟಕ್ಕೆ ₹65ರಂತೆ ಸುಲಭದರದಲ್ಲಿ ಲಭ್ಯ

**ಒಟ್ಟು 25 ಸಂಪುಟಗಳ ಮುದ್ರಿತ ಬೆಲೆ ₹1625**

ಮಾರ್ಚ್ 2011ರಲ್ಲಿ ಲೋಕಾರ್ಪಣೆ

**ಪ್ರಕಟಣಾಪೂರ್ವ ಬೆಲೆ ₹1100**

ಭಾರಿ ಉಳಿತಾಯ ₹525

₹1100ನ್ನು ಒಂದೇ ಕಂತಿನಲ್ಲಿ ಅಥವಾ ₹550ರಂತೆ 2 ಕಂತುಗಳಲ್ಲಿ ಪಾವತಿಸಬಹುದು. ರಿಯಾಯಿತಿ ಪಡೆಯಲು ಮುಂಗಡ ₹550ನ್ನು (ಅಥವಾ ಪೂರ್ತಿ ₹1100ನ್ನು) ಇಂದೇ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ವಿಳಾಸಕ್ಕೆ ಕಳಿಸಿ ನಿಮ್ಮ ಹೆಸರನ್ನು ನೋಂದಣಿ ಮಾಡಿಕೊಳ್ಳಿ. ಹಣವನ್ನು ಚೆಕ್, ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಿ. ಇಲ್ಲವೇ ನಮ್ಮ ಬ್ಯಾಂಕ್ ಅಕೌಂಟ್‌ಗೆ ಜಮಾ ಮಾಡಿ. (Current A/c No. 0788201010612; IFSC Code CNRB0000788; Canara Bank, Madhavnagar Branch. ಹೀಗೆ ಜಮಾ ಮಾಡುವವರು ಬ್ಯಾಂಕ್ ಚಲನ್‌ನ ಜೆರಾಕ್ಸ್ ಪ್ರತಿ ಹಾಗೂ ತಮ್ಮ ಹೆಸರು, ವಿಳಾಸವನ್ನು ಕೆಳಕಂಡ ನಮ್ಮ ಪ್ರಧಾನ ಕಛೇರಿಗೆ ಕಳಿಸಬೇಕು).

**ಸಜ್ಜನನ ಸಾವು**
ಐಸ್‌ಲೆಂಡ್, ಡೆನ್‌ಮಾರ್ಕ್, ನಾರ್ವೆ, ಸ್ವೀಡನ್, ಫಿನ್‌ಲೆಂಡ್ ಕಥೆಗಳು
ಅನು : ಕ.ನಂ. ನಾಗರಾಜು

**ಡೇಗೆ ಹಕ್ಕಿ**
ಇಟಲಿ, ಆಸ್ಟ್ರಿಯ ಕಥೆಗಳು
ಅನು : ಎಸ್. ಅನಂತನಾರಾಯಣ

**ಅವಸಾನ**
ಗ್ರೀಸ್, ಸೈಪ್ರಸ್, ಟರ್ಕಿ ಕಥೆಗಳು
ಅನು : ಈಶ್ವರಯ್ಯ

**ತಾತನ ಹುಟ್ಟುಹಬ್ಬ**
ಹಾಲೆಂಡ್, ಬೆಲ್ಜಿಯಮ್, ಸ್ವಿಟ್ಜರ್‌ಲೆಂಡ್ ಕಥೆಗಳು
ಅನು : ಸಿ.ಎಚ್. ಪ್ರಹ್ಲಾದರಾವ್

**ಬಾಲ ಮೇಧಾವಿ**
ಜರ್ಮನಿ ಕಥೆಗಳು
ಅನು : ಎಚ್.ಎಸ್. ರಾಘವೇಂದ್ರರಾವ್

**ಇಬ್ಬರು ಗೆಳೆಯರು**
ಸ್ಪೇನ್, ಪೋರ್ಚುಗಲ್ ಕಥೆಗಳು
ಅನು : ಕೆ.ವಿ. ನಾರಾಯಣ

**ಅಬಿಂದಾ - ಸಯಿಂದ್**
ಇಂಡೊನೇಷ್ಯ, ಫಿಲಿಪ್ಪೀನ್ಸ್, ಮಲಯ, ಸಿಂಗಾಪುರ, ಥಾಯ್‌ಲೆಂಡ್ ಕಥೆಗಳು
ಅನು : ಎಸ್ಸಾರ್ಕೆ

**ನಿಗೂಢ ಸೌಧ**
ಫ್ರಾನ್ಸ್ ಕಥೆಗಳು
ಅನು : ಬಸವರಾಜ ನಾಯ್ಕರ

**ಬೆಳಗಾಗುವ ಮುನ್ನ**
ಕ್ಯೂಬಾ, ಜಮೇಯಿಕ ಕಥೆಗಳು
ಅನು : ಶ್ರೀಕಾಂತ

**ಮರಳುಗಾಡಿನ ಮದುವೆ**
ಪಶ್ಚಿಮ ಏಷ್ಯ ಕಥೆಗಳು
ಅನು : ವಾಸುದೇವ

**ಕಿವುಡು ವನದೇವತೆ**
ದಕ್ಷಿಣ ಅಮೆರಿಕ ಕಥೆಗಳು
ಅನು : ಈಶ್ವರಚಂದ್ರ

**ಸಾವಿಲ್ಲದವರು**
ಪಂಚ ಮಹಾಕಾವ್ಯಗಳಿಂದ ಆಯ್ದ ಕಥೆಗಳು
ನಿರೂಪಣೆ : ಸಿ. ಕೆ. ನಾಗರಾಜ ರಾವ್

*ಹಣವನ್ನು ನವಕರ್ನಾಟಕದ ಶಾಖೆಗಳಲ್ಲಿ, ಮಳಿಗೆಗಳಲ್ಲಿ ಅಥವಾ ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಪಾವತಿಸಬಹುದು. ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / DECEMBER 2010 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)